ನೆಮ್ಮದಿಯ ನಾಳೆ ನಮ್ಮದು

# ಹೊಸತು

ಫೆಬ್ರವರಿ ೨೦೦೯

ಬೆಲೆ : ರೂ. ೧೨




೧೦ನೇ ವರ್ಷ

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಮಡಿಲು ಯೋಜನೆ

ಕರ್ನಾಟಕ ಸರ್ಕಾರ



- ಕಡುಬಡ ಕುಟುಂಬದ ಗರ್ಭಿಣಿ ಸ್ತ್ರೀಯರು ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸಿಕೊಳ್ಳುವುದಕ್ಕೆ ಪ್ರೋತ್ಸಾಹಿಸಲು ಮಡಿಲು ಯೋಜನೆ.
- ಹೆರಿಗೆ ನಂತರ 3 ತಿಂಗಳವರೆಗೆ ತಾಯಿ-ಮಗುವಿಗೆ ಅಗತ್ಯವಿರುವ ವಸ್ತುಗಳನ್ನು ಒಳಗೊಂಡ ಒಂದು ಕಿಟ್‌ಅನ್ನು ಬಾಣಂತಿಯರಿಗೆ ಆಸ್ಪತ್ರೆಯಿಂದ ಮನೆಗೆ ಮರಳುವಾಗ ನೀಡಲಾಗುವುದು.

**ಫಲಾನುಭವಿಗಳು**

✓ ಬಡತನ ರೇಖೆಗಿಂತ ಕೆಳಗಿರುವವರು.
✓ ಸರ್ಕಾರಿ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡವರು.
✓ ಎರಡು ಮಕ್ಕಳಿಗೆ ಸೀಮಿತವಾಗಿರುವವರು.
✓ ಜನನಿ ಸುರಕ್ಷಾ ಯೋಜನೆ ಕಾರ್ಡ್ ಹೊಂದಿರುವವರು.

**ಸೂಚನೆ**

* ಖಾಸಗಿ ಆಸ್ಪತ್ರೆಯಲ್ಲಿ ಹೆರಿಗೆಯಾದವರಿಗೆ ಈ ಸೌಲಭ್ಯ ಸಿಗುವುದಿಲ್ಲ.
* ಉಪಕೇಂದ್ರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಗರ್ಭಿಣಿ ಸ್ತ್ರೀಯರು ಸಾಧ್ಯವಾದಷ್ಟು ಮುಂಚಿತವಾಗಿ ನೋಂದಾಯಿಸಿಕೊಳ್ಳಬೇಕು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಇಂದಿನ ಮಕ್ಕಳ ಆರೋಗ್ಯ ದೇಶದ ಮುಂದಿನ ಸೌಭಾಗ್ಯ**

ಪ್ರಕಟಣೆ : ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...


| | | |
|---|---|---|
| ಕುವೆಂಪು ಮತ್ತು ಮತಾಂತರ | ಕೆ. ಸತ್ಯನಾರಾಯಣ | ... ೨೪ |
| ಕನ್ನಡ ಸಾಹಿತ್ಯ ಪರಂಪರೆ : ಮತೀಯವಾದದ ನಿರಾಕರಣೆ... | ಡಾ॥ ಕಾ.ವೆಂ. ಶ್ರೀನಿವಾಸಮೂರ್ತಿ | ... ೨೮ |
| ಮತಾಂತರವೆಂಬ ಕೊಳ್ಳಿದೆವ್ವ | ಪಿ. ಎಸ್. ಶ್ರೀಧರಮೂರ್ತಿ | ... ೪೧ |
| ಬಳುವಳಿ | ಎಸ್. ಬಿ. ಜೋಗುರ | ... ೧೫ |
| ಬೆಟ್ಟವೆಂದು ತಿಳಿದದ್ದು ... | ಡಾ॥ ಮಾಧವಿ ಎಸ್. ಭಂಡಾರಿ | ... ೩೯ |
| ಮೊದಲ ಬುದ್ಧಿವಂತನ ಕತೆ | ಎಂ. ಜೆ. ರಾಜೀವ ಗೌಡ | ... ೩೦ |
| ಅಸಹಾಯಕತೆಯಲ್ಲೂ | ಸಿ. ರಾಮಸ್ವಾಮಿ | ... ೧೧ |
| ಭೀಷ್ಮಾಚಾರ್ಯರಿಗೆ ಬಿದ್ದ ಧರ್ಮದೇಟು | ಬಿಳುಮನೆ ರಾಮದಾಸ್ | ... ೧೮ |
| ಬೋರಂಗಿ ಬಣ್ಣದ ಕಾರಂಜಿ ಚಲುವಿ | ಪ್ರೊ॥ ಜಿ. ಎಚ್. ಹನ್ನೆರಡುಮಠ | ... ೨೩ |
| ಕಾವ್ಯಧಾರೆ | | ೯, ೧೪, ೨೬, ೪೬, ೫೪, ೬೧ |
| ಅಭಿವೃದ್ಧಿ: ಪಶ್ಚಿಮದ ಮಾದರಿ ಎಷ್ಟು ಸರಿ ? | ಕು. ಸ. ಮಧುಸೂದನ | ... ೨೧ |
| ಸಪ್ತ ಸಹೋದರಿಯರ ಮುದ್ದು ಮಕ್ಕಳು ಈ ಬಂಡುಕೋರರು | ಎಂ. ವೆಂಕಟಸ್ವಾಮಿ | ... ೩೩ |
| ಧರ್ಮನಿರಪೇಕ್ಷತೆ ಮತ್ತು ವಚನಕಾರರು | ಕೆ. ಡಿ. ಮುತ್ತೂರ | ... ೪೫ |
| ಮಾಧ್ಯಮ ಮತ್ತು ಸಾಮಾಜಿಕ ಹೊಣೆಗಾರಿಕೆ | ನಾ. ದಿವಾಕರ | ... ೫೧ |
| ನಾಯಿಗೋಸ್ಕರ ನಿರ್ಮಿಸಿದ ಶಾಸನಗಳು | ವಿ. ಜಯರಾಮ್ | ... ೫೭ |
| ಒಂದು ಅಪೂರ್ವ ಸತ್ಯಕಥೆ : ಶಿಂಡ್‌ಲರ್ಸ್ ಲಿಸ್ಟ್ | ಡಾ॥ ಸರಜೂ ಕಾಟ್ಕರ್ | ... ೫೯ |
| ಉರಿಯುತ್ತಿದೆ ಗಾಜಾ : ಇಸ್ರೇಲ್‌ನ ರಾಕ್ಷಸೀ ಕೃತ್ಯ | ಸೀಯಾರ್ಕೆ | ... ೩೧ |
| ರೋಚಕ ಪತ್ರಿಕೋದ್ಯಮ ಹಾಗೂ ಮಹಿಳಾ ಶೋಚಣೆಗಳ | | |
| ಕಥಾನಕ 'ಕಮಲಾ' | ಎಸ್. ಮಾಲತಿ | ... ೪೦ |
| ಅಮರ ಚಿಂತರ ಕಾವ್ಯ : ಒಂದು ಅವಲೋಕನ | ಈರಪ್ಪ ಎಂ. ಕಂಬಳಿ | ... ೪೭ |
| ಅಸ್ಪೃಶ್ಯರು : ಸ್ತ್ರೀ ಸಂಕಥನ ನೋಟ | ಎಂ. ಎಸ್. ವೇದಾ | ... ೫೮ |
| ಗ್ರಹಗಳ ಗುಂಪುಗಾರಿಕೆ | ಡಾ॥ ಬಿ. ಎಸ್. ಶೈಲಜಾ | ... ೪೪ |
| ಹೊಸ ಓದು | ಡಾ॥ ಸುಜಾತ ಲಕ್ಷ್ಮೀಪುರ | ... ೫೦ |
| ಹೆಜ್ಜೆ ಮೂಡದ ಹಾದಿ | ಜಯದೇವಪ್ಪ ಜೈನಕೇರಿ | ... ೬೨ |



ಚಿತ್ರಗಳು : ವೆಂಕಟ್, ಕಮಲಂ ಅರಸು

ಆಚಾರ್ಯ, ಶ್ರೀಹರಿ, ಬಿ. ವಿಲ್ಸನ್

ಮುಖಪುಟ : ಹಳೆಬೇರು - ಹೊಸಚಿಗುರು

ವರ್ಣಚಿತ್ರ : ವಿನ್ಯಾಸ ಉಬರಡ್ಕ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಹಿಂದೆ ಒಂದು ಜೋಕ್ ಇರುತ್ತಿತ್ತು: ಸಂಪತ್ತಯ್ಯಂಗಾರ್ ಎಂದು ಹೆಸರು, ಆದರೆ ಭಿಕ್ಷೆ ಬೇಡುತ್ತಾನೆ. ಸ್ವರ್ಣಗೌರಿ ಎಂದು ಹೆಸರು, ಆದರೆ ಕಪ್ಪುಮುದ್ದೆ, ಇತ್ಯಾದಿ. ಅವನ್ನು ಈಗಿನ ಹುಡುಗ-ಹುಡುಗಿಯರು ಹೇಳುವುದು ಕಡಿಮೆ. ಅವರು 'ಗಾಂಧಿ ಬಳಸದ ಸ್ಟಿಕ್ ಯಾವುದು ? – ಲಿಪ್‌ಸ್ಟಿಕ್' ಎಂಬಂತಹ ಜೋಕುಗಳನ್ನು ಹೇಳುತ್ತಾರೆ. ''ಸತ್ಯಂ ಎಂದು ಹೆಸರು, ಆದರೆ ಅಸತ್ಯದ ಆಗರ; ನೈಸ್ ಎಂದು ಹೆಸರು, ಆದರೆ ಎಲ್ಲಾ ಕ್ರುಕೆಡ್; ಮಾತು ಕೂಡ ನೈಸ್ ಅಲ್ಲ'' ಎಂಬಿತ್ಯಾದಿ ಹೊಸ ಪದಗುಚ್ಛಗಳು ಇಂದಿಗೆ ಸರಿಹೊಂದುತ್ತವೆ. 'ಸತ್ಯಂ' ಎಂಬುದನ್ನು ತಲೆಕೆಳಗು ಮಾಡಿ 'ಮೇಟಾಸ್' ಕಂಪನಿ ಹುಟ್ಟುಹಾಕಿದ ರಾಜು ಮಹಾಶಯ ಮಾಹಿತಿ ತಂತ್ರಜ್ಞಾನವೆಂಬ ಮಾಯಾಲೋಕವನ್ನೇ ತಲೆಕೆಳಗು ಮಾಡಿಬಿಟ್ಟಿದ್ದಾನೆ. ಚಳಿಗಾಲ ಬಂದಾದ ಮೇಲೆ ವಸಂತ ಬಂದೇಬರುತ್ತದಲ್ಲವೆ, ಎಂದು ಕವಿ ಶೆಲ್ಲಿ ಹೇಳಿದ್ದನ್ನು ಅನುಸರಿಸಿ ನಾವೀಗ 'ವಸಂತ ಬಂದರೆ ಶಿಶಿರ ಬರದಿರುತ್ತದೆಯೇ' ಎಂದು ಹೇಳಬೇಕಾಗಿದೆ. ಯಾರನ್ನು ಲೋಕೋದ್ಧಾರಕರು ಎಂದು ಮೆರೆಸಲಾಯಿತೋ ಅವರ ಬಣ್ಣ ಈಗ ಬಯಲಾಗಿದೆ. ಸತ್ಯಮ್‌ದು ಹೊರಬಂದಿದೆ; ಹೊರಬರದ ಇನ್ನೆಷ್ಟು ಅಂತಹ ಕಂಪೆನಿಗಳಿವೆಯೋ ತಿಳಿದವರಾರು! ಸ್ಟಾಕ್ ಮಾರುಕಟ್ಟೆಯಲ್ಲಿ ಕೃತಕವಾಗಿ ಷೇರುಗಳ ಬೆಲೆಯನ್ನು ಹಿಗ್ಗಿಸಿಕೊಳ್ಳುವ ತಂತ್ರವು ಸತ್ಯಮ್‌ಗೆ ಮಾತ್ರ ಒಗ್ಗುವಂಥದಲ್ಲ. ಕೆಲವು ವಿವರಗಳಿಗೆ ಶ್ರೀ ಪಾರ್ಥಸಾರಥಿಯವರು ಬರೆದಿರುವ ಸಂಪಾದಕೀಯವನ್ನು ಗಮನಿಸಬಹುದು. ಇನ್ನೂ ಹೆಚ್ಚಿನ ವಿಶ್ಲೇಷಣೆಯನ್ನು ಅಪೇಕ್ಷಿಸುವವರು ಅವರೇ ಬರೆದಿರುವ ''ಭ್ರಷ್ಟಾಚಾರಕ್ಕೆ ಒಂದು ಸೈದ್ಧಾಂತಿಕ ವ್ಯಾಖ್ಯೆ ಸಾಧ್ಯವೆ ?'' ಎಂಬ ಲೇಖನವನ್ನು ಪರಾಮರ್ಶಿಸಬಹುದು. ಅದು 'ಹೊಸತು'ವಿನ ಜನವರಿ ೨೦೦೩ರ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿದ್ದಿತು.

* * *

ಪೇಜಾವರ ಸ್ವಾಮಿಗಳ ಕೆಲವು ಅಸಂಬದ್ಧ ಮತ್ತು ಅಪ್ರಬುದ್ಧ ಹೇಳಿಕೆಗಳನ್ನು ಟೀಕಿಸಿದರೆ ಅವರ ಅಭಿಮಾನಿಗಳು ತಕ್ಷಣ ಸಿಟ್ಟಿಗೇಳುತ್ತಾರೆ. ಜಯತೀರ್ಥರು 'ನ್ಯಾಯಸುಧಾ' ಗ್ರಂಥದಲ್ಲಿ ಬೌದ್ಧಮತವನ್ನು ಆಮೂಲಾಗ್ರವಾಗಿ, ಕಟುವಾಗಿ, ಟೀಕಿಸಿದ್ದಾರೆ. ಆದರೆ ಮಾಧ್ವರ ಆಚಾರ್ಯರಾದ ಪೇಜಾವರರು ಬೌದ್ಧಮತವು ಹಿಂದುಮತದಿಂದ ಪ್ರತ್ಯೇಕವಲ್ಲವೆಂಬಂತಹ ಬುದ್ಧಿವಂತಿಕೆಯ ಮಾತುಗಳನ್ನಾಡುತ್ತಾರೆ. ''ವೇದಗಳು ನಿತ್ಯ, ಹಿಂದುಧರ್ಮವು ಸನಾತನವಾದದ್ದು ಮತ್ತು ಶಾಶ್ವತವಾದ್ದು'' ಎಂದು ಬೋಧಿಸುವ ಪೇಜಾವರರು ಇನ್ನೇನು ಹಿಂದುಧರ್ಮವು ಖಿಲವಾಗಿಹೋಯಿತು (ಅಂದರೆ, ನಷ್ಟವಾಗಿಹೋಯಿತು) ಎಂದು ಆತಂಕವನ್ನೂ ಪ್ರಕಟಿಸುತ್ತಾರೆ. ಪ್ರಕಟಿತ ಅಭಿಪ್ರಾಯಗಳಿಗಿಂತಲೂ ಅವರ ಮತ್ತು ಅವರಂತಹವರ (ಹಿರಿಯ ಮಿತ್ರ ಡಾ॥ ಎಸ್. ಎಲ್. ಭೈರಪ್ಪನವರೂ ಸೇರಿದಂತೆ) ಅಪ್ರಕಟಿತ ಅಭಿಪ್ರಾಯಗಳು ಅವರೆಲ್ಲರನ್ನೂ ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಇತ್ತೀಚಿನ ಒಂದು ಉದಾಹರಣೆಯು ಇದಕ್ಕೆ ಸಾಕ್ಷಿ. ಒರಿಸ್ಸಾದಲ್ಲಿ ಏನೇನು ಆಗಿಹೋಗುತ್ತಿದೆ! ಪಾಸ್ಕೋ ಎಂಬ ಕಂಪನಿಯು ಅದಿರನ್ನು ಲೂಟಿ ಮಾಡಲು ಕಾಯುತ್ತಿದೆ. ಕಂಧಮಾಲ್‌ನಲ್ಲಿ ಹತ್ಯೆಗಳು ನಡೆದಿವೆ ಮತ್ತು ಪೂಜಾಗೃಹಗಳನ್ನು ಧ್ವಂಸಮಾಡಲಾಗಿದೆ. ಪೇಜಾವರ ಬಣಕ್ಕೆ ಎರಡನೆಯದು ಕಾಣುತ್ತದೆ, ಮೊದಲನೆಯದು ಅಮುಖ್ಯ. ದೇಶದ ಸಂಪತ್ತನ್ನು ಉಳಿಸಿಕೊಂಡು, ರೂಢಿಸಿಕೊಂಡು, ಜನಜೀವನವನ್ನು ಉತ್ತಮಗೊಳಿಸುವುದಕ್ಕಿಂತಲೂ ನಮ್ಮದೇ ಆದ ಮಾನವ ಸಂಪತ್ತು ಮತ್ತು ಮತಧಾರ್ಮಿಕ ವಲಯದ ಸಂಪತ್ತಾದ ಪೂಜಾಗೃಹಗಳನ್ನು ನಾಶಮಾಡುವುದು ಅವರಿಗೆ ಆದ್ಯತೆಯ ವಿಷಯವಾಗುತ್ತದೆ. ಇಡೀ ದೇಶವು ತಲೆ ತಗ್ಗಿಸಬೇಕಾದಂತಹ ಒಂದು ಘಟನೆ ಜರುಗಿದರೆ ಈ ಬಣವು ಬೌದ್ಧ ವಿಪಸ್ಸನಾ ಯೋಗವನ್ನು ಅಭ್ಯಸಿಸುವರಂತೆ ಮೌನಿಗಳಾಗಿಬಿಡುತ್ತಾರೆ. ಅವರು ಆತಂಕಪಡುವುದು ಮತಾಂತರದ ಬಗ್ಗೆ; ಆದರೆ ಮತಾಂತರಕ್ಕೆ ಪ್ರೇರಣೆ ನೀಡುವಂತಹ ಸನ್ನಿವೇಶ ಉಂಟಾದರೆ ಅದನ್ನು ಇವರು ಖಂಡಿಸುವುದೂ ಇಲ್ಲ, ಬದಲಾಯಿಸಬೇಕೆಂದು ಆಗ್ರಹಿಸುವುದೂ ಇಲ್ಲ. ತರ್ಕಶಾಸ್ತ್ರದಲ್ಲಿ ನೈಪುಣ್ಯ ಪಡೆದಿದ್ದು, ಶುದ್ಧ ಅತಾರ್ಕಿಕ ಮಾತುಗಳನ್ನಾಡುವುದು ಯಾವ ಪುಣ್ಯಕ್ಕೆಂದು ಮಾನ್ಯ ಪೇಜಾವರರೇ ತಿಳಿಸಬೇಕು!

ಒರಿಸ್ಸಾದಲ್ಲಿ ಜನವರಿ ೧೪ರಂದು ಭದ್ರಕ್ ಜಿಲ್ಲೆಯ ಅಖಂಡಾಳಮಣಿ ದೇವಸ್ಥಾನಕ್ಕೆ ಆ ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವೆ ಶ್ರೀಮತಿ ಪ್ರಮೀಳಾ ಮಲ್ಲಿಕ್ ಭೇಟಿ ನೀಡಿದ್ದರು. (ಆ ದಿನ 'ಮಕರ ಸಂಕ್ರಾಂತಿ' ಎಂದು ಹೇಳುತ್ತಾರೆ; ಆದರೆ ಖಗೋಳಶಾಸ್ತ್ರಜ್ಞೆ ಡಾ॥ ಬಿ. ಎಸ್. ಶೈಲಜಾ ಅವರನ್ನು ಕೇಳಿದರೆ ಅಂದು ಆಕಾಶಕಾಯಗಳು ಯಾವುವೂ ಸಂಕ್ರಾಂತಿಗೆ ಗುರಿಯಾಗುವುದಿಲ್ಲವೆನ್ನಬಹುದು. ಡಿಸೆಂಬರ್ ೨೨-೨೩ರಂದೇ ಆ ಸಂಕ್ರಾಂತಿ ಜರುಗಿಬಿಟ್ಟಿರುತ್ತದೆ. ಈ ಬಾರಿ ಡಿಸೆಂಬರ್ ೨೧ರಂದೇ ಉತ್ತರಾಯಣ ಆರಂಭವಾಯಿತು).

(೮ನೇ ಪುಟಕ್ಕೆ)




ಸಂಪುಟ-೧೧ ಸಂಚಿಕೆ-೭ ಫೆಬ್ರವರಿ ೨೦೦೯

*ಸಂಪಾದಕ*

ಜಿ. ರಾಮಕೃಷ್ಣ

*ಸಹಸಂಪಾದಕರು*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

*ವ್ಯವಸ್ಥಾಪಕ*

ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೫೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫೭೭೮೬೯, ೨೨೨೦೩೫೮೦
ಫ್ಯಾಕ್ಸ್ : ೨೨೫೭೭೫೨೨
**e-mail : navakarnataka@dataone.in**
**website : www.navakarnataka.com**
**http://navakarnataka.blogspot.com**

# ಸತ್ಯಂ : ಬಂಡವಾಳಕ್ಕೆ ಬಡಿದ ಅಸತ್ಯಗಳ ಪರಂಪರೆ

'ಭಯ ತಾನಾಗಿಯೇ ಉತ್ಪಾದನೆಯಾಗುವುದಿಲ್ಲ' ಎಂದು ಹಿಂದಿನ ಒಂದು 'ಹೊಸತು' ಸಂಪಾದಕೀಯದಲ್ಲಿ ವಿಮರ್ಶಿಸಿದ್ದೆವು. 'ಮಾಲೆಗಾಂವ್' ಇರಬಹುದು, 'ಸಮಜೌತ ಎಕ್ಸ್‌ಪ್ರೆಸ್' ಇರಬಹುದು, ಮುಂಬಯಿಯ 'ತಾಜ್', 'ಟ್ರೈಡೆಂಟ್' ಮತ್ತು ಛತ್ರಪತಿ ಶಿವಾಜಿ ರೈಲ್ವೆ ನಿಲ್ದಾಣದ ಪ್ರಕರಣಗಳಿರಬಹುದು. ಇಲ್ಲೆಲ್ಲಾ ಉದ್ದೇಶಪೂರ್ವಕವಾಗಿ ಭಯವನ್ನು ಬೇರಾವುದೋ ಕೇಂದ್ರಗಳಲ್ಲಿ ದೇಶೀಯವಾಗಿಯೋ ವಿದೇಶೀಯವಾಗಿಯೋ ಯೋಜಿಸಿ ಪ್ರಯೋಗಿಸಿರುವುದು ಸ್ಪಷ್ಟ. ಮುಂಬಯಿ ಪ್ರಕರಣ ಭಾರತದ ಖಾಸಗಿ ಕಾರ್ಪೊರೇಟ್‌ಗಳ ವಿರುದ್ಧ, ನಮ್ಮ ಶೇ. ೯ ಪ್ರಗತಿಯ ವಿರುದ್ಧ ನಡೆಸಿದ ಭಯೋತ್ಪಾದನೆಯೆಂದು ಪ್ರಧಾನಿಯೇ ಮೊದಲಾಗಿ ಧುರೀಣರು ಹೇಳುತ್ತಿದ್ದಾರೆ. ಇದರ ಬೆನ್ನಿಗೇ ಹೊರಗೆ ಬಂದ 'ಸತ್ಯಂ' ಭ್ರಷ್ಟಾಚಾರದ ಸುದ್ದಿ ಈ ಯಾವ ಭಯೋತ್ಪಾದನೆಯ ಪ್ರಸಂಗಗಳಿಗೂ ತನ್ನ ವ್ಯಾಪಕ ಪ್ರಭಾವದಲ್ಲಿ ಕಡಿಮೆಯಾದುದಲ್ಲ. ಮುಂಬಯಿಯ ಹೊಟೇಲುಗಳು ತಮಗೆ ಏನೂ ಆಗಲೆ ಇಲ್ಲವೆಂಬಂತೆ ಪುನಃ ನಿಗರಿ ನಿಂತಿವೆ, ಎಂದಿನಂತೆಯೇ ತಮ್ಮ ವ್ಯವಹಾರ ನಡೆಸುತ್ತಿವೆ. ಆದರೆ ವಾಣಿಜ್ಯ ವಲಯದಲ್ಲಿ 'ಸತ್ಯಂ' ಪ್ರಕರಣ ಉಂಟುಮಾಡಿರುವ ಅಲ್ಲೋಲಕಲ್ಲೋಲ ರಾಷ್ಟ್ರೀಯವಾಗಿಯೂ ಅಂತರರಾಷ್ಟ್ರೀಯವಾಗಿಯೂ ಭಾರತೀಯ ಖಾಸಗಿ ಅರ್ಥ ವ್ಯವಸ್ಥೆಗೆ ಸುನಾಮಿಯಾಗುವ ಸಾಧ್ಯತೆ ಇದೆ. ಈ ಆರ್ಥಿಕ ಭಯೋತ್ಪಾದನೆಯ ಮೂಲವೂ ಕೇವಲ ಆಂತರಿಕವಲ್ಲ. ಇದು ಅಂತರರಾಷ್ಟ್ರೀಯ ವಾಣಿಜ್ಯ, ಆರ್ಥಿಕ ಹಣಕಾಸು ವ್ಯವಸ್ಥೆಯಲ್ಲಿ ಅಂತರ್ಗತವಾದ, ಲಾಭದೃಷ್ಟಿಯ ಬಂಡವಾಳ ವ್ಯವಸ್ಥೆಯ ಮೂಲಭೂತ ದೋಷದಿಂದ ಉಂಟಾದದ್ದು ಎಂದು ಚಿಂತನಶೀಲರು ಗಮನಿಸುತ್ತಿದ್ದಾರೆ. ಅವರಿಗೆ ವರ್ಲ್ಡ್ ಕಾಂ, ಎನ್ರಾನ್, ಆ್ಯಂಡರ್‌ಸನ್, ಪ್ರೈಸ್ ವಾಟರ್‌ಕೂಪ್, ಸತ್ಯಂ, ಹರ್ಷದ್ ಮೆಹ್ತಾ, ಕೇತನ್ ಪಾರಿಖ್, ರಿಲೈಯನ್ಸ್ ಮತ್ತು ಯುಟಿಐ ಮುಂತಾದಲ್ಲಿ ಕಳೆದ ಕೆಲವೇ ವರ್ಷಗಳಲ್ಲಿ ವರ್ಷವರ್ಷವೂ ನಿರಂತರ ಹೊರಬರುತ್ತಿರುವ ಭ್ರಷ್ಟಾಚಾರ ಪ್ರಕರಣಗಳು ಅನಿರೀಕ್ಷಿತ ಆಶ್ಚರ್ಯಕರವೆನಿಸುವುದಿಲ್ಲ. ಜಾಗತಿಕವಾಗಿ ಹಳಸಿದ ಬಂಡವಾಳ ವ್ಯವಸ್ಥೆಯ ಹೂರಣ ಸ್ವಲ್ಪ ಸ್ವಲ್ಪವಾಗಿ ಅನಾವರಣವಾಗುತ್ತಿದ್ದು ಇನ್ನೂ ಮುಂದುವರೆಯುತ್ತದೆ. ಈ ವ್ಯವಸ್ಥೆಯಲ್ಲಿ ಇಂಥ ಪ್ರಕರಣಗಳು ಉಂಟಾದುದು ಸಹಜವೆಂಬಂತೆ ಸಾಧಾರಣವಾಗುತ್ತಿದೆ. ಈ ವ್ಯವಸ್ಥೆಯಲ್ಲೇ ಮೂಲಭೂತ ಬದಲಾವಣೆಯಾಗದೆ ಇದು ನಿಲ್ಲುವುದಿಲ್ಲ. ಅಂತೆಯೇ ಈ ಪ್ರಕರಣಗಳಿಗೆ ನೇರವಾಗಿ ಕಾರಣಕರ್ತರಾಗದೆಯೂ ಅದರ ಆಘಾತಕ್ಕೆ ಒಳಗಾಗಿ ಶೋಷಿಸಲ್ಪಡುವ ಲೆಕ್ಕವಿಲ್ಲದಷ್ಟು ಸಂಖ್ಯೆಯ ಸಾಮಾನ್ಯ ಜನರ ಗೋಳೂ ನಿಲ್ಲುವುದಿಲ್ಲ.

ಇಂಗ್ಲಿಷ್‌ನ 'SATYAM' ಅನ್ನು ಹಿಂದುಮುಂದಾಗಿಸಿದರೆ ಬರುವುದು 'MAYTAS' ಕಂಪನಿ. ಅದರೊಡನೆ ಈ ಭ್ರಷ್ಟಾಚಾರದಲ್ಲಿ ಅವಳಿಯಾಗಿ ಬೆಸೆದಿರುವ ಮತ್ತೊಂದು ಕಂಪನಿ! ಈ ಕಂಪನಿಗೆ ಅದರ ಅಳತೆಗೆ ನೂರುಪಟ್ಟು ಮೀರಿದ ಪ್ರಮಾಣದ ಸಾರ್ವಜನಿಕ ಕಂಟ್ರಾಕ್ಟುಗಳನ್ನು ರಾಜಕೀಯ ಪ್ರಭಾವದಿಂದ ನೀಡಲಾಗಿದೆ. ಅದರ ವಿಶ್ವಸನೀಯತೆಯನ್ನು ಹೆಚ್ಚಿಸುವ ಸಲುವಾಗಿ ಅದನ್ನು 'ಸತ್ಯಂ' ಜತೆ ಸೇರಿಸಲು ಮಾಡಿದ ಪ್ರಯತ್ನವನ್ನು 'ಸತ್ಯಂ'ನ ಹೂಡಿಕೆದಾರರು ವಿರೋಧಿಸಿದಾಗ 'ಸತ್ಯಂ'ನ ಬಣ್ಣ ಬಯಲಾಯಿತು. ಕಾರಣ ಸತ್ಯಂ ಕಂಪನಿಯಲ್ಲೇ ಅದರ ಅಪಾರ ನಗದು ಹಣವನ್ನು, ಬ್ಯಾಂಕುಗಳ ದಾಖಲೆಯನ್ನು ನಕಲಿಮಾಡಿಯೋ, ಅಥವಾ ಬ್ಯಾಂಕಿನವರೇ ಸುಳ್ಳು ಸಮರ್ಥನಾ ಪತ್ರ ನೀಡಿಯೋ, ಠೇವಣಿಯಲ್ಲಿಲ್ಲದ ಹಣವನ್ನು ಇರುವಂತೆ ತೋರಿಸಿ, ಮೇತಾಸ್ ಕಂಪನಿಯೂ ಸೇರಿದಂತೆ, ರಾಜು ಕುಟುಂಬದ ಇತರ ಕಂಪನಿಗಳಿಗೆ, ವ್ಯಕ್ತಿಗಳಿಗೆ ವರ್ಗಾಯಿಸಿಕೊಂಡಿದ್ದು ಒಂದು ಮೋಸವಾದರೆ, ವಾಸ್ತವದಲ್ಲಿ ಲಭ್ಯವಿದ್ದ ಎಂಟು ಸಹಸ್ರ ಕೋಟಿ ಹಣವನ್ನು ಸಂಸಾರದವರ ಹೆಸರಿನಲ್ಲಿ ಬೇನಾಮಿಯಾಗಿ ಭೂಮಿ ಕೊಳ್ಳಲು ಬಳಸಿದ್ದು ಮತ್ತೊಂದು ಮೋಸ. ಸುಲಭ ದರದಲ್ಲಿ ಮೇತಾಸ್ ಕಂಪನಿಗೆ ರೈಲ್ವೆ ಯೋಜನೆಗಾಗಿ ಸರ್ಕಾರಿ ಭೂಮಿ ಪಡೆಯುವುದೇ ಅಲ್ಲದೆ, ಅದೆ ಕಂಪನಿಗೆ ಕುಟುಂಬ ವರ್ಗದವರು ರಾಜಕೀಯ ಪ್ರಭಾವ ಬೀರಿ, ಸುಲಭ ದರದಲ್ಲಿ ಪಡೆದ ಬೇನಾಮಿ ಭೂಮಿಯನ್ನು ಹೆಚ್ಚು ಬೆಲೆಗೆ ಮಾರುವುದು ಇದೊಂದು ''ನೈಸಾದ'' ಕೆಲಸ! ಹೀಗೆ ಮೋಸದೊಳಗೆ ಒಂದು ಮೋಸ, ವಂಚನೆಯೊಳಗೆ ಒಂದು ವಂಚನೆ ಎದ್ದುಕಾಣುತ್ತಿದೆ. ಇವೆಲ್ಲ ಇನ್ನೂ ವಿಚಾರಣೆಯಲ್ಲಿ ಹೊರಬರಬೇಕು. ಅಂದರೆ ಈ ಹಿಂದಿನ ಅನೇಕ ಜೆಪಿಸಿಗಳಂತಾಗದೆ, ನಿಜವಾಗಿಯೂ ವಿಚಾರಣೆ ನಡೆದರೆ... !

'ಸತ್ಯಂ'ನ ಆಡಳಿತ ನಡೆಸುವವರು ಪದೇ ಪದೇ ಬಯಲಿಗೆ ಬರುತ್ತಿರುವ 'ಇನ್‌ಸೈಡರ್ ಟ್ರೇಡ್' ಅಂದರೆ ಕಂಪನಿಯ ಒಳಗುಟ್ಟು ಅರಿತವರೇ ಅದರ ಷೇರುಗಳ ಷೇರುಪೇಟೆ ವ್ಯವಹಾರ ನಡೆಸಿ ಅಪಾರ ಹಣ ಗಳಿಸಿರಬಹುದಾದ ಸಾಧ್ಯತೆಯೂ ಕೇಳಿಬರುತ್ತಿದೆ. ಇಂದು ಷೇರುಪೇಟೆಯಲ್ಲಿ ಪ್ರಭಾವ ಬೀರಿ ಷೇರಿನ ಬೆಲೆಯನ್ನು ಗಗನಕ್ಕೆ ಏರಿಸುವುದು, ಅದೇ ಷೇರನ್ನು ತಕ್ಷಣ ಮಾರುವುದು ಅಥವಾ ಅದನ್ನು ಅಡವಿಟ್ಟು ಬ್ಯಾಂಕಿನಿಂದ ಸಾಲ ಪಡೆಯುವುದು, ಅದರಲ್ಲಿ ಭೂಮಿ ಕೊಳ್ಳುವುದು, ಹೀಗೆಲ್ಲಾ. ಈ ಸಂಪಾದಕೀಯ ಬರೆಯುವ ವೇಳೆಗೆ ಸೆಬಿ ನಿಯಂತ್ರಣ ಸಂಸ್ಥೆಗೆ ರಾಜು ಸಹೋದರರನ್ನು ವಿಚಾರಣೆ ಮಾಡಲು ಇನ್ನೂ ಅವಕಾಶ ನೀಡಲಾಗಿಲ್ಲ. ಬೇರೆ ಎಲ್ಲ ವಂಚನೆಗಳಿಗಿಂತ ಈ ಇನ್‌ಸೈಡರ್ ಟ್ರೇಡ್‌ನ ಹಾದಿಯ ವಂಚನೆಯನ್ನು ಬಹಿರಂಗಪಡಿಸುವುದು ನಮ್ಮ ಖಾಸಗಿ ಉದ್ಯಮಪತಿಗಳಿಗೆ ಸುತರಾಂ ಇಷ್ಟವಿಲ್ಲ. ಕಾರಣ ಈ ಜಾಡು ಹಿಡಿದು ಬಹುಶಃ ಬಹುತೇಕ ಹಿರಿಯ ಉದ್ಯಮಗಳು ಲಕ್ಷಾಂತರ ಷೇರುದಾರರನ್ನು ವಂಚಿಸಿ, ಷೇರುಪೇಟೆಯಲ್ಲಿ ಏರುಪೇರುಗಳನ್ನು ಉಂಟುಮಾಡಿ, ಅಪಾರ ಹಣ ಶೇಖರಿಸುತ್ತಿರುವುದು ಒಳಗುಟ್ಟು. ಷೇರು ಸೂಚ್ಯಂಕ ೨೦೦೦೦ಕ್ಕೆ ಏರಿದಾಗ, ಮೂಲಭೂತ ಆರ್ಥಿಕತೆಯ ಆರೋಗ್ಯವನ್ನು ಪದೇ ಪದೇ ಎತ್ತಿಹೇಳಿ, ಮತ್ತಷ್ಟು ಏರುವಂತೆ ಬೆನ್ನು ಚಪ್ಪರಿಸುತ್ತಿದ್ದ ಅಂದಿನ ಅರ್ಥಮಂತ್ರಿಯ ಸೊಲ್ಲು ಈಗ ಕೇಳಿಸುತ್ತಿಲ್ಲ. ವಿದೇಶಿ ಹೂಡಿಕೆದಾರರನ್ನು ಆಕರ್ಷಿಸಲೂ ಸಹ ಅಸಹಜವಾಗಿ ನಮ್ಮ ಶೇರುಪೇಟೆಯ ಸೂಚ್ಯಂಕವನ್ನು ಏರಿಸಿದ್ದರೂ ಆಶ್ಚರ್ಯವಿಲ್ಲ. ಅಂತರರಾಷ್ಟ್ರೀಯವಾಗಿ ಅದರಲ್ಲೂ ಮುಖ್ಯವಾಗಿ ನಮಗೆ ಮಾದರಿಯಾದ ಅಮೆರಿಕಾದ ವ್ಯವಸ್ಥೆ, ಅದೂ ಇದೇ ವಂಚನೆಯ ಹಾದಿ ಹಿಡಿದು, ಕುಸಿದುಬಿದ್ದಾಗ, ನಮ್ಮ ಮಾರುಕಟ್ಟೆಯೂ ಕುಸಿದದ್ದು ಆಶ್ಚರ್ಯವಿಲ್ಲ. ಷೇರುಪೇಟೆಯ ಈ ಜೂಜಾಟಕ್ಕೂ,

ಅರ್ಥವ್ಯವಸ್ಥೆಯ ಶೇ. ೯ರ ಬೆಳವಣಿಗೆಗೂ ನೇರವಾದ ಸಂಬಂಧವಿಲ್ಲ. ಅದೊಂದು ಪ್ರಚಾರ ವೈಖರಿಯ ಮಾಯಾಲೋಕ, ಜೂಜುಕಟ್ಟೆ, ರಿಯಲ್ ಇಕಾನಮಿ ಅಲ್ಲ.

ಈಗ ಪಾರದರ್ಶಕ ತನಿಖೆ ನಡೆದು ಈ ಎಲ್ಲ ಪ್ರಕಾರದ ವ್ಯಭಿಚಾರಗಳೂ ಹೊರಬರುತ್ತವೆಯೇ? ಹಿಂದಿನ ಅನುಭವದಂತೆ ಅದು ಸಾಧ್ಯವಿಲ್ಲ ಹಾಗೂ ಅಪರಾಧಿಗಳನ್ನು ಶಿಕ್ಷಿಸುವುದು ನಮ್ಮ ವ್ಯವಸ್ಥೆಯಲ್ಲೇ ಇಲ್ಲ. ಒಂದು ವೇಳೆ ಆದರೆ? ಆಗ ಅದು ಇನ್ನೂ ಹಲವಾರು ಉಚ್ಚಮಟ್ಟದಲ್ಲಿರುವ ಕಂಪನಿಗಳ (ಅವು ಕೇವಲ ಐಟಿ ಕಂಪನಿಗಳೇ ಅಲ್ಲಾ) ಬಣ್ಣವನ್ನೂ ಬಯಲುಮಾಡುವ ಸಾಧ್ಯತೆ ಹೆಚ್ಚು. ಅಂಥದಕ್ಕೆ ಅವಕಾಶ ಕೊಡಬಹುದೇ? ಆದ್ದರಿಂದ ತಿಪ್ಪೆಸಾರಿಸುವುದೇ ಅನುಕೂಲವಾದ ಮಾರ್ಗ. ಸತ್ಯಂ ಮಾಲಿಕರಿಗೆ ಕೆಲವರಿಗೆ ಒಂದಷ್ಟು ಶಿಕ್ಷೆಯಾದರೆ ಸಾರ್ವಜನಿಕರಿಗೆ ಕಣ್ಣೊರೆಸಲು ಅದು ಸಾಕು. ಹೋಗಲಿ ಇಂಥ ಅಪರಾಧಗಳು ಇನ್ನು ಮುಂದೆ ಆಗದಂತೆ ಆಡಿಟ್ ಮತ್ತು ಇನ್ನಿತರ ಕಾನೂನುಗಳನ್ನೂ ಭದ್ರಗೊಳಿಸಬಹುದೇ? ಹಾಗೇನಾದರೂ ಆದರೆ ಷೇರುಪೇಟೆಯಿಂದ ಅಪಾರವಾಗಿ ಬಂಡವಾಳ ಸಂಗ್ರಹಿಸುವುದು ಹೇಗೆ? ಆದ್ದರಿಂದ ಈ ಮಾರ್ಗವೂ ಹೀಗೆಯೇ ಮುಂದುವರಿದರೆ ಆಶ್ಚರ್ಯವಿಲ್ಲ. ಕಂಪ್ಟ್ರೋಲರ್ ಮತ್ತು ಅಕೌಂಟೆಂಟ್ ಜನರಲ್ ಆಡಿಟ್ ಮಾಡಬೇಕು, ಖಾಸಗಿ ಆಡಿಟ್ ನಿಲ್ಲಬೇಕು ಎಂದರೆ ಇವರು ಒಪ್ಪುತ್ತಾರೆಯೋ?

ಕರ್ನಾಟಕ ಗೃಹ ನಿರ್ಮಾಣ ಸಂಘಗಳ ಸರ್ಕಾರಿ ಆಡಿಟ್‌ನಲ್ಲೂ ಅವ್ಯವಹಾರ ಕಂಡುಬಂದಾಗ, ಅವಕ್ಕೆ ಖಾಸಗಿ ಆಡಿಟ್ ಮಾಡಿಸಿಕೊಳ್ಳುವಂತೆ ಹೇಳಿ ಸರ್ಕಾರ ಕೈತೊಳೆದುಕೊಂಡಿತು. ಸರ್ಕಾರಿ ಅಧಿಕಾರಿಗಳನ್ನೇನೂ ಶಿಕ್ಷಿಸಲಿಲ್ಲ. ಅಂದರೆ ಕೊನೆಗೆ ಆ ಸಂಘಗಳ ಸಾಧಾರಣ ಸದಸ್ಯರು ಎಚ್ಚರಿಕೆ ವಹಿಸದೆ, ತಮ್ಮ ಹಕ್ಕುಗಳನ್ನೂ ಚಲಾಯಿಸದೆ, ಆ ಸಂಘಗಳಲ್ಲಿ ಅವ್ಯವಹಾರವನ್ನು ತಡೆಗಟ್ಟಲು ಆಗುವುದಿಲ್ಲ. ಹಾಗೆಯೇ ಷೇರುದಾರರು, ಹೂಡಿಕೆದಾರರು ಎಚ್ಚರಿಕೆ ವಹಿಸದೆ ಕಂಪನಿಯ ಆಡಳಿತವರ್ಗ, ಬೋರ್ಡ್ ಮೆಂಬರುಗಳು ಮುಂತಾದವರು ಶುದ್ಧರಾಗಿ ವರ್ತಿಸುವುದಿಲ್ಲ. ಕಂಪನಿಯ ಮೂಲ ಸ್ಥಾಪಕರು ಷೇರುಗಳ ಬಹುಭಾಗವನ್ನು ಅನೇಕ ಒಳದಾರಿಗಳಲ್ಲಿ, ಬೇನಾಮಿಯಾಗಿ ತಾವೇ ಖರೀದಿಸಿ, ಅದರ ಸರ್ವಸದಸ್ಯರನ್ನೂ ನಿಯಂತ್ರಿಸಿಬಿಡುತ್ತಾರೆ, ಅಂದರೆ ಆಧುನಿಕ ಖಾಸಗಿ ಕಂಪನಿಗಳು ಹೂಡಿಕೆದಾರರು ನಿಯಂತ್ರಿಸುವ ಪ್ರಜಾಸತ್ತಾತ್ಮಕ ಸ್ವರೂಪದ್ದೆಂಬುದು ಬರೀ ಬೊಗಳೆ. ಹೀಗಾಗಿ, ವ್ಯವಸ್ಥೆಯ ಒಳಗೇ ಬದಲಾವಣೆಯ ಪ್ರಯತ್ನ ವಿಫಲವಾಗುತ್ತದೆ ಅಥವಾ ಈ ರೀತಿಯ ವಂಚನೆ ಅವ್ಯವಹಾರ ಪ್ರಕರಣಗಳು ಈ ವ್ಯವಸ್ಥೆಯ ಆಂತರಿಕ ಸ್ವಭಾವ ಎಂಬುದಂತೂ ಸ್ಪಷ್ಟವಾಗುತ್ತದೆ. ಮತ್ತೊಂದು ಇದಕ್ಕೂ ದೊಡ್ಡ ವಂಚನಾ ಪ್ರಕರಣ ಹೊರಬಿದ್ದರೆ ಯಾರೂ ಅಚ್ಚರಿ ಪಡಬೇಕಾಗಿಲ್ಲ. 'ಸತ್ಯಂ' ಪ್ರಕರಣವು ಪಕ್ವವಾಗುತ್ತಿರುವ ಇದೇ ವ್ಯವಸ್ಥೆಯ ಅಧಃಪತನದ ಸಣ್ಣ ಸೂಚಕವಷ್ಟೆ.

ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ ಸತ್ಯಂ ನಡೆಸುತ್ತಿರುವ ವ್ಯವಹಾರ ಲಾಭದಾಯಕವಾದುದು, ಆರೋಗ್ಯಕರವಾದುದು. ಈಗಲೂ ಅದರ ನೌಕರರನ್ನು ಬಳಸಿಕೊಂಡು ಇರುವ ವ್ಯವಹಾರವನ್ನು ಸಮರ್ಥವಾಗಿ ನಡೆಸಿಕೊಂಡು ಹೋಗಬಹುದು. ಪ್ರಕಟವಾಗಿರುವ ಅವ್ಯವಹಾರಕ್ಕೂ ಇದರ ವ್ಯಾಪಾರಕ್ಕೂ ಯಾವ ಸಂಬಂಧವೂ ಇಲ್ಲ. ಕೇವಲ ಸಾಧಾರಣ ಲಾಭವಲ್ಲದೆ, ಅತಿ ಲಾಭಕೋರ ವೈಯಕ್ತಿಕ ಹೊಟ್ಟೆಬಾಕತನ ಇಲ್ಲಿಯ ಸಮಸ್ಯೆ. ಅಮೆರಿಕಾದ ಕಂಪನಿಗಳು ಹಣಕಾಸು ಅವ್ಯವಹಾರದಿಂದ ಕುಸಿದುಬಿದ್ದಿರುವ ಈ ಸಂದರ್ಭದಲ್ಲೇ ವಿಶ್ವಬ್ಯಾಂಕು ಭಾರತೀಯ ಕಂಪನಿಗಳು ಹಲವಾರು ವರ್ಷಗಳ ಹಿಂದೆ ವಿಶ್ವಬ್ಯಾಂಕಿನ ತನ್ನ ನೌಕರರಿಗೆ ಲಂಚ ನೀಡಿತೆಂದು ಇಂದು ಪ್ರಕಟಿಸುವುದರಲ್ಲಿ ಯಾವುದೋ ದುರುದ್ದೇಶವಿರುವುದು ಸ್ಪಷ್ಟ. ವಿಶ್ವಬ್ಯಾಂಕಿನ ಭ್ರಷ್ಟಾಚಾರ ಈಗಾಗಲೇ ಬಯಲಿಗೆ ಬಂದಿದೆ. ಜಾಗತೀಕರಣದೊಂದಿಗೆ ಇನ್ನೂ ಆಳವಾಗಿ ಬೆಸೆದುಕೊಳ್ಳದ ಭಾರತೀಯ ಅರ್ಥವ್ಯವಸ್ಥೆ ಜಾಗತಿಕವಾಗಿ ಕಳೆದ ಕೆಲವಾರಗಳು ಆರೋಗ್ಯಕರವಾಗಿ ಕಂಡುಬಂದಿತ್ತು. ಆದರೆ ಈಗ ಸತ್ಯಂ ಪ್ರಕರಣ ಬಹಿರಂಗವಾಗುತ್ತಿದ್ದಂತೆಯೇ, ನಮ್ಮ ವ್ಯವಸ್ಥೆಯೂ ಅಮೆರಿಕಾದ ಹಾದಿ ಹಿಡಿದರೆ ಅದು ಪಶ್ಚಿಮದವರಿಗೆ ಸ್ವಾಗತಾರ್ಹವಿರಬೇಕು.

ಯಾವುದೇ ಉದ್ದಿಮೆಯೂ ವಾಸ್ತವದಲ್ಲಿ ವೈಯಕ್ತಿಕ ಆಸ್ತಿಯಲ್ಲ. ಅದಕ್ಕೆ ಇರುವ ಬಹುಮುಖ್ಯ ಅಸ್ತಿತ್ವವೇ ಸಾಮಾಜಿಕ, ಸಾರ್ವಜನಿಕವಾದದು. ಸತ್ಯಂ ಕಂಪನಿಯೂ ಅಷ್ಟೆ. ಪಬ್ಲಿಕ್ ಲಿಮಿಟೆಡ್‌ನ ಪಬ್ಲಿಕ್‌ಗೆ ಅದೇ ಅರ್ಥ. ಇಂದಿನ ಪ್ರಕರಣಕ್ಕೆ ಸಂಬಂಧಪಟ್ಟವರನ್ನೆಲ್ಲಾ ತೀವ್ರವಾದ ಶಿಕ್ಷೆಗೆ ಒಳಪಡಿಸುವುದು ಹಾಗೂ ಯಾವುದೇ ಕಾರಣಕ್ಕೂ ರಾಜು ಕುಟುಂಬಕ್ಕೆ ಈ ಕಂಪನಿಯ ಆಸ್ತಿಯ ಚಿಕ್ಕಾಸೂ ಸಿಗದಂತೆ ನೋಡಿಕೊಳ್ಳುವುದು ಮುಖ್ಯ. ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕುವುದೂ ಅಗತ್ಯ. ಹಾಗೆಯೇ ಐಟಿ ಕಂಪನಿಗಳ ಮುಖ್ಯ ಬಂಡವಾಳವೇ ಅದರ ಕಾರ್ಮಿಕರ ಬೌದ್ಧಿಕ ಬಂಡವಾಳ ಮತ್ತು ಅವರಿಗೆ ಇರುವ ವ್ಯಾಪಾರದ ಮೂಲಗಳು. ಇವುಗಳ ಆಧಾರದ ಮೇಲೆ ಕಂಪನಿ ಉಳಿಯುವಂತೆ ನೋಡಿಕೊಳ್ಳುವುದು ಸಾಮಾಜಿಕ ಜವಾಬ್ದಾರಿಯ ನಿರ್ವಹಣೆ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಈ ಕಂಪನಿಯನ್ನು ನುಂಗಿಹಾಕಲು ಕಾರ್ಪೊರೇಟ್ ರಣಹದ್ದುಗಳು ಕಾಯುತ್ತಿವೆ. ಹಾಗೆ ಇತರ ಖಾಸಗಿ ಕಂಪನಿಗಳಿಗೆ ಇದನ್ನು ಒಪ್ಪಿಸುವುದು ಯಾವ ರೀತಿಯಲ್ಲೂ ಸಾಧುವಲ್ಲ. ಇದನ್ನು ಒಂದು ಸಾರ್ವಜನಿಕ-ಖಾಸಗಿ ಸ್ವರೂಪದ ಸ್ವಾಯತ್ತ ಸಂಸ್ಥೆಯಾಗಿ ಮಾದರಿಯಾಗಿ ನಿರ್ವಹಿಸುವುದು ಅಗತ್ಯ. ಅವರಿಗೆ ಸಾಲ ನೀಡಿದ ಬ್ಯಾಂಕುಗಳು, ಸರ್ಕಾರ ಮತ್ತು ನೌಕರರು ಭಾಗಿಗಳಾಗುವುದು ಸೂಕ್ತ. ಹೂಡಿಕೆದಾರರಿಗೆ ಆಡಳಿತದಲ್ಲಿ ಹೆಚ್ಚು ದನಿ ನೀಡಬೇಕು.

ಎಲ್ಲ ಖಾಸಗಿ ಉದ್ದಿಮೆದಾರರೂ ಒಕ್ಕೊರಲಿನಿಂದ ಹೇಳುತ್ತಿರುವುದು ಸರ್ಕಾರ ಇದನ್ನೇ ನೆಪವಾಗಿಟ್ಟುಕೊಂಡು ಉದಾರೀಕರಣವನ್ನು ಸ್ಥಗಿತಗೊಳಿಸಕೂಡದು, ಹೊಸ ಹೊಸ ನಿಯಂತ್ರಣಗಳನ್ನು ತರಕೂಡದು ಎಂದು. ಅದೇ ಜನ ಉದಾರೀಕರಣ ಮತ್ತು ಕಟುವಾದ ನಿಯಂತ್ರಣ ಇಂದಿನ ಅಗತ್ಯ ಎಂದೂ ಹೇಳುತ್ತಾರೆ. ನಿಯಂತ್ರಣ ಸ್ವಾಯತ್ತವಾದ ಸರ್ಕಾರೀ ಸಂಸ್ಥೆಯಾಗದೆ ನಿಯಂತ್ರಣ ಹೇಗೆ ಸಾಧ್ಯ? ಬಂಡವಾಳದ ಪ್ರವಾದಿಗಳಾದ ಪಶ್ಚಿಮ ರಾಷ್ಟ್ರಗಳೇ ಸರ್ಕಾರಿ ನಿಯಂತ್ರಣದ ಅಗತ್ಯವನ್ನು ಒಪ್ಪಿಕೊಂಡಿರುವಾಗ ನಮ್ಮ ಉದ್ದಿಮೆದಾರರ ಈ ಆತಂಕಕ್ಕೆ ಇರಬಹುದಾದುದು ಒಂದೇ ಕಾರಣ ಅಂದರೆ ಇವರೆಲ್ಲಾ ಮುಚ್ಚಿಕೊಳ್ಳಬೇಕಾದ್ದು ಬೇಕಾದಷ್ಟಿದೆ, ಅದಕ್ಕೆ ಅವರಿಗೆ ಸರ್ಕಾರಿ ಆಡಿಟ್, ಸರ್ಕಾರಿ

(೧೦ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಹೊಸತು ವಿಶೇಷ ಸಂಚಿಕೆ**
**ಜನವರಿ ೨೦೦೯**

ಜನವರಿ ೨೦೦೯ರ 'ಹೊಸತು' ಪತ್ರಿಕೆಯ ಮುಖಪುಟದಲ್ಲಿ ಇಬ್ಬರು ವೃದ್ಧೆಯರ ನಿರಾಸೆಯ ಮುಖಗಳು ಇನ್ನೆಷ್ಟು ಸಂಕಟಗಳಿಗೆ ಗುರಿಯಾಗಬೇಕೋ ಎನ್ನುವ ಭಯದ ಮನಃಸ್ಥಿತಿಯಲ್ಲಿ ಇದ್ದ ಹಾಗೆ ಚಿತ್ರಿತಗೊಂಡಿದೆ. ದುಗುಡ ಮತ್ತು ಅನಿಶ್ಚಿತತೆಯ ಸಾಕಾರರೂಪವಾಗಿ ಇಬ್ಬರು ಅಜ್ಜಿಯರು ಸಮಾಜದ ಕಣ್ಣು ತೆರೆಸಲು ಸಮರ್ಥರಾಗಿದ್ದಾರೆ. ನಮ್ಮ ದೇಶದ ಹೆಚ್ಚಿನ ಹಿರಿಯ ನಾಗರಿಕರ ಅವಸ್ಥೆಯ ಚಿತ್ರವೂ ಇದೇ ಆಗಿದೆ. ಮುಂದೆ ಒಳ್ಳೆಯ ದಿನಗಳು ಬರಬಹುದು, ನೆಮ್ಮದಿಯ ನಾಳೆ ನಮ್ಮದು ಎನ್ನುವ ಆಶಾಭಾವನೆಯಲ್ಲಿ ಬಾಳ ಸಂಜೆಯನ್ನು ದೂಡುತ್ತಾ ಇದ್ದಾರೆ. ಹಸಿವು ಅನಾರೋಗ್ಯ ಮುಂತಾದ ಸಮಸ್ಯೆಗಳಿಗೆ ಪರಿಹಾರ ಇಲ್ಲವೇ ಎನ್ನುವ ಪ್ರಶ್ನೆಗೆ ಉತ್ತರವೇ ಸಿಗಲೊಲ್ಲದು. ದುಡಿದು ತಿನ್ನಲು ಮೈಯಲ್ಲಿ ತ್ರಾಣವಿಲ್ಲ, ಹಸಿವೆ ನೀಗಿಸಲು ಕೈಯಲ್ಲಿ ಕಾಸಿಲ್ಲ, ಮಕ್ಕಳು ನೆಂಟರು ದೂರವಾಗಿದ್ದಾರೆ. ಸಂಬಂಧಿಕರನ್ನು ಅವಲಂಬಿಸಲು ಸ್ವಾಭಿಮಾನ ಬಿಡದು. ಸರಕಾರ ತನ್ನ ಜವಾಬ್ದಾರಿಯಿಂದ ದೂರ ಸರಿಯುತ್ತಿದೆ. ಇದು ಸಾಮಾನ್ಯವಾಗಿ ಕಂಡು ಬರುವ ಹಿರಿಯ ನಾಗರಿಕರ ದುಃಸ್ಥಿತಿ. ಹಿರಿಯ ನಾಗರಿಕರ ಬವಣೆಯ ಒಂದು ನೋಟವನ್ನು ಅರ್ಥೈಸುವಂತೆ ಸಂಚಿಕೆಯ ಮುಖಪುಟದಲ್ಲಿ ಪ್ರಕಟಿಸಿ ಸನ್ನಿವೇಶದ ಗಂಭೀರತೆಯ ಕಡೆ ಓದುಗರ ಗಮನ ಸೆಳೆದದ್ದಕ್ಕೆ ಸಂಚಿಕೆಗೆ ಅಭಿನಂದನೆಗಳು.

ಉಡುಪಿ **ಕೆ. ವಿಶ್ವಜ್ಞ ಶೆಟ್ಟಿ**

'ಹೊಸತು' ವಿಶೇಷ ಸಂಚಿಕೆ ಹೊರ ಮತ್ತು ಒಳಾವರಣಗಳು ತುಂಬ ತಿರುಳಿನಿಂದ ಕೂಡಿವೆ. ಎಲ್ಲ ಶಿಸ್ತುಗಳನ್ನು ಒಂದೇ ವೇದಿಕೆಯಲ್ಲಿ ಒಂದೇ ಓದಿಗೆ ಒಳಪಡಿಸುತ್ತಿರುವ ತಮ್ಮ ಶ್ರಮ ಸಾರ್ಥಕವಾದದ್ದು. 'ಹೊಸತು' ಓದುಗ ಹಾಗೂ ಲೇಖಕನಾಗಿ ತಮಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ರಾ. ಸೂರಿ ಅವರ 'ಅಲ್ಲೇ ಕುಂತವರು' ಮುಖಪುಟ (ವಿಶೇಷ ಸಂಚಿಕೆ) ಚಿತ್ರ ತುಂಬ ಸೊಗಸಾಗಿದೆ.

ಬಳ್ಳಾರಿ **ಡಾ|| ವೀರೇಶ ಬಡಿಗೇರ**

ಜನವರಿ - ೦೯ ತಿಂಗಳ 'ಹೊಸತು' ವಿಶೇಷಾಂಕ ಅದ್ಭುತವಾಗಿ ಮೂಡಿಬಂದಿದೆ. ಅಭಿನಂದನೆಗಳು.

ಅಪ್ಪಟ ಮಾರ್ಕ್ಸ್‌ವಾದಿ ರಂಗನಾಯಕಮ್ಮನವರ ಬದುಕು ಸಂದರ್ಶನ ಓದಿ ಸಂತೋಷವಾಯಿತು. 'ಕಮ್ಯುನಿಸ್ಟ್ ಹೋರಾಟಗಳ ತಗ್ಗುವಿಕೆಯೆಂದರೆ ಬಂಡವಾಳಶಾಹಿ ಸಂಬಂಧಗಳ ವೃದ್ಧಿ' ಎಂಬ ಅವರ ಮಾತು ಅಕ್ಷರಶಃ ಸತ್ಯ. ಇವತ್ತು ಜಾಗತೀಕರಣ ಪ್ರಬಲವಾಗಿ ಬೆಳೆಯುತ್ತಿರುವುದಕ್ಕೆ ಮುಖ್ಯಕಾರಣ ಮಾರ್ಕ್ಸ್‌ವಾದವು ಜನರಿಂದ ದೂರವಾಗುತ್ತಿರುವುದಾಗಿದೆ. ಕಮ್ಯುನಿಸ್ಟ್ ಪಕ್ಷಗಳು ಸಹ ಮಾರ್ಕ್ಸ್‌ವಾದದಿಂದ ದೂರಸರಿದು ರಾಜಿ ರಾಜಕಾರಣಕ್ಕೆ ಒತ್ತು ಕೊಡುತ್ತಿರುವುದು ಸಹ ಇದಕ್ಕೆ ಸಹಾಯವಾಗಿದೆ.

ರಷ್ಯಾದ ಸೋಲು ಮಾರ್ಕ್ಸ್‌ವಾದದ ಸೋಲು ಎಂಬಂತೆ ನಮ್ಮ ಮಾಧ್ಯಮಗಳು ಬಿಂಬಿಸಿದ್ದರ ಫಲವಾಗಿ, ಇವತ್ತಿನ ಜನಾಂಗಕ್ಕೆ ಮಾರ್ಕ್ಸ್‌ವಾದಿ ತತ್ವಗಳು ಬಹುತೇಕ ಅಪರಿಚಿತವಾಗುಳಿದುಬಿಟ್ಟಿವೆ. ಇಂತಹ ಮಬ್ಬು ಕವಿದ ವಾತಾವರಣದಲ್ಲಿ ರಂಗನಾಯಕಮ್ಮನಂಥವರು ಮಾರ್ಕ್ಸ್‌ವಾದವನ್ನು ಈಗಲೂ ನಂಬಿಕೊಂಡಿರುವ ನಮ್ಮಂತಹವರಿಗೆ ಒಂದು ಆಶಾಕಿರಣವಾಗಿದ್ದಾರೆ. ಇಂತಹ ಅದಮ್ಯ ಚೇತನವನ್ನು ಸಂದರ್ಶಿಸಿದ ಗಾಯತ್ರಿಯವರಿಗೆ ನನ್ನ ಕೃತಜ್ಞತೆಗಳು.

ರಂಗೇನಹಳ್ಳಿ **ಕು. ಸ. ಮಧುಸೂದನ**




'ಹೊಸತು' ವಿಶೇಷಾಂಕ ತುಂಬಾ ಸುಂದರವಾಗಿ ಮೂಡಿ ಬಂದಿದೆ. ವಿಚಾರ ಪ್ರಚೋದಕವಾಗಿರುವ ಹೊಸತು ನಿಜವಾಗಿಯೂ ಹೊಸತೇ ಆಗಿದೆ.

'ಗಫೂರನ ಎತ್ತು' ಮೂಲಕತೆಯನ್ನು ನಾವು ಪದವಿ ತರಗತಿಯಲ್ಲಿ ಓದಿದ್ದೆವು. ನನಗೆ ಅಂದು ಅದನ್ನು ಬೋಧಿಸಿದ್ದ ಹೆಚ್. ವಿ. ಲಕ್ಷ್ಮೀನಾರಾಯಣ ಅವರು. ಅಂದಿನಷ್ಟೇ ಸುಂದರವಾಗಿ ಕನ್ನಡದ ನಾಟಕ ಮಾಡಿದ್ದಾರೆ. ಭ್ರಮೆಯಿಂದ ವಾಸ್ತವದ ಕಡೆಗೆ ನಮ್ಮ ಪಯಣವಾದಾಗ ಅಂತಹ ಕತೆ, ನಾಟಕ ಬರೆಯಬಹುದು. ಡಾ|| ಸಬೀಹಾ ಭೂಮಿಗೌಡರ ಲೇಖನ ಕೂಡ ಚೆನ್ನಾಗಿದೆ.

ಮೂಡಬಿದರೆ **ಹರೀಶ್**

**ಬೇಕಿದ್ದಿಲ್ಲ...?**

ಕಮ್ಯುನಿಸ್ಟ್ ಮುಖಂಡ ಎಂ. ಕೆ. ಭಟ್ ನಿಧನರಾಗಿದ್ದಾರೆ. ಸಮತಾವಾದ ತತ್ವಕ್ಕಾಗಿ ತಮ್ಮ ಇಡೀ ಜೀವನವನ್ನು ಸಮರ್ಪಿಸಿಕೊಂಡಿದ್ದ ಭಟ್ ಡಿಸೆಂಬರ್ ೧೯೭೩ರಲ್ಲಿ ಭಾರತೀಯ ವಿದ್ಯಾರ್ಥಿ ಒಕ್ಕೂಟ (ಎಸ್.ಎಫ್.ಐ.) ರಾಜ್ಯ ಸಮ್ಮೇಳನದಲ್ಲಿ "ಬೇಕಿದ್ದಿಲ್ಲ..?" ಎಂಬ ವಿಷಯದ ಬಗ್ಗೆ ಹೇಳಿದ್ದು ನೆನಪಿಗೆ ಬಂದಿತು. ಅದರ ವಿವರವನ್ನು ಹೀಗೆ ಸಂಗ್ರಹಿಸಬಹುದು :

ಭಾರತ ದೇಶವನ್ನು ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ತಮ್ಮ ಇಚ್ಛೆಯಿಂದಲೇ ಬಿಟ್ಟುಹೋಗಿದ್ದರೆ ಜನಕೋಟಿಯು ಹೋರಾಡಬೇಕಾಗುತ್ತಿರಲಿಲ್ಲ. ಬ್ರಿಟಿಷರನ್ನು ಭಾರತದೇಶದಿಂದ ಓಡಿಸಿ ನಮ್ಮ ದೇಶದ ಪ್ರಜಾಕೋಟಿಗೆ ನಿಜವಾದ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ದೊರೆತಿದ್ದರೆ, ವರ್ಗ ಭೇದವಿಲ್ಲದ ಶೋಷಣಾ ರಹಿತವಾದ ಸಮಾಜವಾದಿ ಸಮಾಜ ಸ್ಥಾಪನೆಯಾಗಿದ್ದರೆ ನಮಗೆ ಎಸ್.ಎಫ್.ಐ. ಕಟ್ಟುವ ಕೆಲಸ ಬೇಕಿದ್ದಿಲ್ಲ. ನಿರಕ್ಷರತೆ, ನಿರುದ್ಯೋಗ, ಜಾತೀಯತೆ, ಭ್ರಷ್ಟಾಚಾರ, ಬಡತನ, ದಾರಿದ್ರ್ಯ, ಶೋಷಣೆ ಹಾಗೂ ಇತರೆ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳು ಇಲ್ಲವಾಗಿದ್ದರೆ ನಮಗೆ ಈ ಹೋರಾಟ ಬೇಕಾದ್ದಿಲ್ಲ. ಮಾನವನನ್ನೇ ಸುಲಿದು ತಿನ್ನುವ ಇಂದಿನ ವರ್ಗಸಮಾಜವಿಲ್ಲವಾಗಿದ್ದರೆ, ದುಡಿದು ತಿನ್ನುವ ಸಮಾನತೆಯಿಂದ ಬಾಳುವ ಸಮೃದ್ಧ ಸಮಾಜವನ್ನು ನಮ್ಮ ಹಿರಿಯರು ಸ್ಥಾಪಿಸಿದ್ದರೆ, ನಾವಿಂದು ಹೋರಾಡುವ ಅವಶ್ಯಕತೆಯಿದ್ದಿಲ್ಲ. ಡೊನೇಷನ್ ಫೀ ವಿರುದ್ಧ, ಶಾಲಾ ಕಾಲೇಜುಗಳಲ್ಲಿನ ನಿರಂಕುಶ ಆಡಳಿತದ ವಿರುದ್ಧ ವಿದ್ಯಾರ್ಥಿ ಚಳುವಳಿಗಳು ಬೆಳೆಯುತ್ತಲಿವೆ, ನಿಜ; ಆದರೆ ಜನತೆಯ, ನಿಸ್ವಾರ್ಥಿ ಯುವಜನರ ಹೋರಾಟಗಳಿಗೆ ಸರಿಯಾದ ಕ್ರಾಂತಿಕಾರಿ ನಾಯಕತ್ವ ಇಲ್ಲವಾಗಿದೆ. ಥಾಯ್‌ಲ್ಯಾಂಡ್‌ನಂತಹ ದೇಶಗಳಲ್ಲಿ ವಿದ್ಯಾರ್ಥಿಗಳು ಮಿಲಿಟರಿ ಸರಕಾರವನ್ನೇ ಉರುಳಿಸಿರುವಾಗ, ವಿಯೆಟ್ನಾಂ, ಕೊರಿಯಾ ಮೊದಲಾದೆಡೆ ವೀರ ವಿದ್ಯಾರ್ಥಿಗಳು ಸಾಮ್ರಾಜ್ಯಶಾಹಿ ರಾಷ್ಟ್ರಗಳ ಬಾಂಬ್‌ಗಳಿಗೆ ಬೆದರದೆ ಸ್ವಾತಂತ್ರ್ಯ, ಪ್ರಜಾಪ್ರಭುತ್ವಗಳಿಗಾಗಿ ಹೋರಾಡಿ ಸಮಾಜವಾದಿ ಸಮಾಜ ಸ್ಥಾಪನೆಗೆ ಅಹೋರಾತ್ರಿ ಶ್ರಮಿಸುತ್ತಿರುವಾಗ ನಾವೆಲ್ಲಿರುವೆವು ? ಸರಿಯಾದ ನಾಯಕತ್ವವಿದೆಯೇ ?

ನಮ್ಮ ವಿದ್ಯಾರ್ಥಿ ಯುವಜನತೆಗೆ ಇಂದು ಸರಿಯಾದ ನಾಯಕತ್ವವಿಲ್ಲ. ಇಂದು ವಿದ್ಯಾರ್ಥಿ ಯುವಜನತೆಯ ಸಮಸ್ಯೆಗಳನ್ನು ಅರ್ಥಮಾಡಿ, ಅವರ ಹೋರಾಟದ ಮನೋಭಾವನೆ ಅರಿತು, ಸರಿಯಾದ ನಾಯಕತ್ವ ಕಟ್ಟುವುದು ಉದ್ದೇಶವಾಗಬೇಕು. ವಿದ್ಯಾರ್ಥಿ - ಜನತೆ ಸಮಸ್ಯೆ ಎತ್ತಿಹಿಡಿದು ಸತತ ಶ್ರಮದಿಂದ ಐಕ್ಯ ಹೋರಾಟ ನಡೆಸಬೇಕು, ವಿದ್ಯಾರ್ಥಿ-ರೈತ-ಕಾರ್ಮಿಕರ ಐಕ್ಯತೆ ಸ್ಥಾಪಿಸಿ, ನವ ಸಮಾಜ ನಿರ್ಮಾಣಕ್ಕಾಗಿ ಶ್ರಮಿಸಬೇಕು. ಎಸ್.ಎಫ್.ಐ.ನಂತಹ ಸಂಘಟನೆಗಳು ಈ ದೆಸೆಯಲ್ಲಿ ಒಂದು ದಾರಿದೀಪ ಎಂದರು.

ತುಮಕೂರು **ಆರ್. ರವೀಂದ್ರ ನಾಯಕ್**

## ದಾಮೋದರ ಧರ್ಮಾನಂದ ಕೋಸಾಂಬಿ

ಡಿ. ಡಿ. ಕೋಸಾಂಬಿ ಭಾರತೀಯ ಚರಿತ್ರಶಾಸ್ತ್ರದಲ್ಲಿ ಯುಗಪಲ್ಲಟ, ಸ್ಥಿತ್ಯಂತರ ತಂದ ಧೀಮಂತ ಇತಿಹಾಸಕಾರ. ಭಾರತೀಯ ಇತಿಹಾಸದ ರಚನೆಯ ಪ್ರಶ್ನೆ ಬಂದಾಗ ಆಧಾರಗಳ ಕೊರತೆಯಿದ್ದಾಗ್ಯೂ ಕೂಡ ತೌಲನಿಕ, ಅಂತರ್‌ಶಿಸ್ತೀಯ ಅಧ್ಯಯನವನ್ನು ಮೊತ್ತ ಮೊದಲ ಬಾರಿಗೆ ಪ್ರಚುರಪಡಿಸಿದ ಇತಿಹಾಸಕಾರ.

ಪ್ರಾಚೀನ ಭಾರತದ ಆಧಾರಗಳನ್ನು ಮೊದಲು ಕೋಸಾಂಬಿ ಮುಟ್ಟಿದ್ದು ಭರ್ತೃಹರಿಯ ಕೃತಿಗಳ ವಿಮರ್ಶಾತ್ಮಕ ವಿಶ್ಲೇಷಣೆಯೊಂದಿಗೆ. ಸಂಸ್ಕೃತದಲ್ಲಿ ಅಪಾರ ಜ್ಞಾನ ಹೊಂದಿರುವಂತೆ, ಪ್ರಾಕೃತದಲ್ಲೂ ಪ್ರೌಢಿಮೆ ಇದ್ದ ಕಾರಣದಿಂದ ಕೋಸಾಂಬಿ ಮೊದಲ ಬೇರೆ ಬೌದ್ಧ ಚಿಂತಕರಿಗಿಂತ ಭಿನ್ನವಾಗಿ ಅವುಗಳನ್ನು ವಿಶ್ಲೇಷಿಸಿದರು. ಮೊದಲ ಶತಾಬ್ದಿಯ ಇತಿಹಾಸವನ್ನು ರಚಿಸುವಲ್ಲಿ ಸಂಸ್ಕೃತ ಮತ್ತು ಪ್ರಾಕೃತ ದಾಖಲೆಗಳನ್ನು ಪೂರಕವಾಗಿ ನೋಡುತ್ತಾ ಶಾಸನ ಮತ್ತು ಪ್ರಾಕ್ತನ ಶಾಸ್ತ್ರೀಯ ದಾಖಲೆಗಳನ್ನು ಬಳಸಿ ಬೌದ್ಧೀಯ ದಾಖಲೆಗಳನ್ನು ವಿಶಾಲವಾದ ತಳಹದಿಗೆ ತಂದರು. ಈ ರೀತಿ ಪ್ರಾಕೃತ ಮತ್ತು ಸಂಸ್ಕೃತ ದಾಖಲೆಗಳನ್ನು ಸಮೀಕರಣ - ವಿಮರ್ಶೆ ಮಾಡುವಾಗ ಅವುಗಳ ನಡುವೆ ವೈರುಧ್ಯಗಳನ್ನೂ ಗುರುತಿಸಿದರು. ಕೋಸಾಂಬಿ ಇಂತಹ ಗುಣ ಪಡೆದದ್ದು ಅವರ ತಂದೆ, ಪ್ರಖ್ಯಾತ ಪ್ರಾಕೃತ - ಸಂಸ್ಕೃತ ಪಂಡಿತ ಧರ್ಮಾನಂದ ಕೋಸಾಂಬಿಯವರಿಂದ.

ಕೋಸಾಂಬಿ ಅವರ ಸಂಸ್ಕೃತದ ಬಗೆಗಿನ ಜ್ಞಾನ-ಸಂಪತ್ತು ಹಲವಾರು ಪ್ರಯೋಗಶೀಲತೆಗೆ ಅವರನ್ನು ಪ್ರಚೋದಿಸಿತು. ಹಲವಾರು ಸರಣಿಯ, ಶಬ್ದವ್ಯುತ್ಪತ್ತೀಯ ವಿಮರ್ಶೆಗಳನ್ನು ಬರೆದರು. ಇದರೊಂದಿಗೆ ವೈದಿಕ ಅವಧಿಯ ಸಾಮಾಜಿಕ ಹಿನ್ನೆಲೆಯನ್ನೂ ಕೋಸಾಂಬಿ ತಿಳಿದುಕೊಂಡರು. ಇವುಗಳಲ್ಲಿ ವೇದದಲ್ಲಿ ಉಲ್ಲೇಖವಾಗಿ ಇರುವ ಹೆಚ್ಚಿನ ಬ್ರಾಹ್ಮಣರ ಹೆಸರುಗಳು ಆರ್ಯೇತರ ಎಂದು ಸಾಧಿಸಿದ್ದು ಬಹಳ ಮುಖ್ಯವಾದುದು. ಅಂತೆಯೇ ಏಳು ಗೋತ್ರಗಳು ಆರ್ಯ ಮತ್ತು ಅನಾರ್ಯವೆರಡರ ಮಿಶ್ರಣವೆಂದೂ ಸಾಧಿಸಿದರು.

ಕೋಸಾಂಬಿ, ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಂದ ಪ್ರಭಾವಿತರಾಗಿದ್ದರು. ಅವರೇ ಹೇಳುವ ಹಾಗೆ, ಅವರಿಬ್ಬರ ಗ್ರಂಥಗಳಲ್ಲಿಲ್ಲದ ವಿಷಯಗಳಿಗಾಗಿ ಸ್ವತಃ ಕೋಸಾಂಬಿ ನಡೆದರು, ನೋಡಿದರು. ಕೋಸಾಂಬಿ, ಪ್ರಾಕ್ತನ ಶಾಸ್ತ್ರವನ್ನು ಬಳಸಿ ಪ್ರಾಗಿತಿಹಾಸವನ್ನು ಪುನರ್‌ರಚಿಸಿದುದು ಭಾರತದ ಹಲವು ಭಾಗಗಳಲ್ಲಿ ಸಂಚಾರ ಮಾಡಿದ ಕಾರಣದಿಂದ. ಪುಣೆ, ಇನಾಮ್ ಗಾವ್, ಬಿಹಾರದ ಹಲವು ಸೂಕ್ಷ್ಮಶಿಲಾಯುಗೀಯ (ಮೈಕ್ರೋಲಿಥಿಕ್) ನಿವೇಶನಗಳನ್ನು ಸಂದರ್ಶಿಸಿ ಹರ್ಡರ್ಸ್, ಪಶುಪಾಲಕರು, ಕಿರು ಅಥವಾ ಮಿತಿಯ ವ್ಯಾಪಾರಿಗಳ ಬೇರನ್ನು ತಿಳಿಯಲು ಸಮರ್ಥರಾದರು. ಉತ್ಖನನಗಳಿಂದ ದೊರೆತ ಅರೆಯುವ ಕಲ್ಲುಗಳು ಇಂದಿಗೂ ಬಳಕೆಯಲ್ಲಿರುವುದು ಸಂಸ್ಕೃತಿಯ ಹರಿವು ಎನ್ನುತ್ತಾ, ಇದು ಇಂದಿಗೂ ನಾಶವಾಗಿಲ್ಲ ಎಂಬುದನ್ನು ವಿವರಿಸಿದರು. ಇದೇ ರೀತಿ ಬೃಹತ್ ಶಿಲಾಯುಗೀಯ ವಸ್ತುವಿನ ಬಗ್ಗೆಯೂ ಮೊತ್ತಮೊದಲಿಗೆ ಗಮನ ಸೆಳೆದ ಇತಿಹಾಸಕಾರರೆಂದರೆ ಕೋಸಾಂಬಿ. ಈ ರೀತಿಯ ಕ್ಷೇತ್ರಕಾರ್ಯದ ಜತೆಗೆ ಭೂರಚನಾಕೃತಿ ಶಾಸ್ತ್ರ ಮತ್ತು ಭೂಮೇಲ್ಮೈಶಾಸ್ತ್ರವನ್ನೂ ಅರಿತಿದ್ದ ಕಾರಣ ಪಶ್ಚಿಮ ತೀರ, ದಖ್ಖನ್ ಪ್ರಸ್ಥಭೂಮಿ, ಪಶ್ಚಿಮ ದಖ್ಖನ್‌ನಲ್ಲಿ ಪಸರಿಸಿದ್ದ ವ್ಯಾಪಾರೀಮಾರ್ಗ ಮತ್ತು ಬೌದ್ಧೀಯ ನೆಲೆಗಳನ್ನು ಅದ್ಭುತವಾಗಿ ಪೂರಕವೆಂಬಂತೆ ಸಮೀಕರಿಸಿದರು. ಪ್ರಾಕ್ತನ ಶಾಸ್ತ್ರದ ಸಮರ್ಪಕ ಬಳಕೆಯಿಂದಲೇನೇ ಕೋಸಾಂಬೀ ರೂಪಿಸಿದ್ದು ''ಜೀವಂತ ಪೂರ್ವೇತಿಹಾಸ''ದ ಪರಿಕಲ್ಪನೆಯನ್ನು.

ಕೋಸಾಂಬಿಯವರ ಇನ್ನೊಂದು ಮುಖ್ಯ ಚಿಂತನೆ 'ಮಿತ್‌ಗಳ ವಿಶ್ಲೇಷಣೆ'. ಭಾರತೀಯ ಪುರಾಣಗಳನ್ನು ಈ ಮೊದಲು ಮ್ಯಾಕ್ಸ್‌ಮುಲ್ಲರ್ ಮತ್ತು ಆತನ ಸಮಕಾಲೀನರು ಸಾಮಾನ್ಯ ಸ್ವರೂಪದಲ್ಲಿ ವ್ಯಾಖ್ಯಾನಿಸಿಲ್ಲವೆಂದಲ್ಲ. 'ಊರ್ವಶಿಯ ಅದೃಶ್ಯ'ದ ಮಿತ್ ಅನ್ನು ಇವರೆಲ್ಲಾ 'ಉಷೆ ಕಳೆದು ಸೂರ್ಯನಾಗಮನ' ಎಂಬರ್ಥದಲ್ಲಿ ವಿಶ್ಲೇಷಿಸಿದ್ದರು. ಕೋಸಾಂಬೀ ತಮ್ಮ 'ಮಿತ್ ಅಂಡ್ ರಿಯಾಲಿಟಿ' ಕೃತಿಯಲ್ಲಿ, ''ಪ್ರಾಗಿತಿಹಾಸದ ಸಮಾಜದಲ್ಲಿನ ಮದುವೆಯ ಸಾಂಸ್ಕಿಕರೂಪ ಮತ್ತು ಮಾತೃದೇವತೆಗೆ ಮಾಡುವ ಕ್ರಿಯಾವಿಧಿ'' ಎಂದು 'ಸಂರಚನೀಯ ಮಾನವ ಶಾಸ್ತ್ರೀಯ' ನೆಲೆಯಲ್ಲಿ 'ಊರ್ವಶಿ ಅದೃಶ್ಯ'ವನ್ನು ವ್ಯಾಖ್ಯಾನಿಸುತ್ತಾರೆ. ಕೌರವರು ಮತ್ತು ಕೆಲವು ಮುನಿಗಳು (ಕುಂಭ) ಮಡಿಕೆಯಲ್ಲಿ ಹುಟ್ಟುವುದು ಭ್ರೂಣ ಸೂಚಕ ಮತ್ತು ಮಾತೃದೇವತಾ ಸೂಚಕವೆಂದೂ ವ್ಯಾಖ್ಯಾನಿಸಿದರು.

ಅವೈದಿಕ ಧರ್ಮಗಳ ಉಗಮದ ಕುರಿತು ಸಾಂಪ್ರದಾಯಿಕ ಬರವಣಿಗೆಗಳಿಗಿಂತ ವಿಭಿನ್ನವಾಗಿ ಆಲೋಚಿಸಿದ ಮೊದಲ ಇತಿಹಾಸಕಾರ ಈತ. ಇವರ ಪ್ರಕಾರ, ತಾಂತ್ರಿಕತೆಯಲ್ಲದ ಬದಲಾವಣೆ ಮತ್ತು ನಗರೀಕರಣಗಳಿಂದ ಇವುಗಳು ಹುಟ್ಟಿದ್ದು.

ಕೋಸಾಂಬಿಯವರು ಭಾರತವನ್ನು ಒಂದು ನಾಗರಿಕತೆಯನ್ನಾಗಿ ವಿವಿಧ ಆಯಾಮಗಳಲ್ಲಿ ನೋಡಿದ್ದಾರೆ. ೧೯೬೫ರ ಪುರಾತನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಅವರ ಕೃತಿ ಸಂಪೂರ್ಣ ಭಾರತವನ್ನು ಒಂದು ನಾಗರಿಕತೆಯನ್ನಾಗಿ ಗ್ರಹಿಸುವ ಪ್ರಯತ್ನವಾಗಿದೆ. ಅಸ್ಪಷ್ಟ, ಅಮೂರ್ತ ನೆಲೆಯಲ್ಲಿ ಈ ಕುರಿತು ಮೊದಲು ಗಾಂಧೀಜಿ ತಮ್ಮ 'ಹಿಂದ್ ಸ್ವರಾಜ್'ನಲ್ಲಿ ರವೀಂದ್ರನಾಥ ಟಾಗೋರ್ 'ಭರತವರ್ಷದ ಇತಿಹಾಸ'ದಲ್ಲಿ ಹಾಗೂ ನೆಹರೂ ತಮ್ಮ 'ದಿ ಡಿಸ್ಕವರಿ ಆಫ್ ಇಂಡಿಯಾ'ದಲ್ಲಿ ಚಿಂತಿಸಿದ್ದರು. ಈ ಮೂವರಲ್ಲಿ ಗಾಂಧೀಜಿ ಅವರಿಗೆ ಮಾತ್ರ ಒಂದು ತಾತ್ವಿಕ ನೆಲೆಯಿದ್ದರೂ ಟಾಗೋರ್ ಮತ್ತು ನೆಹರೂರವರನ್ನು ಕೋಸಾಂಬಿ ಇತಿಹಾಸ ಅರಿಯದವರು ಎಂದೇ ಸಂಬೋಧಿಸಿದ್ದರು. ಭಾರತ ಒಂದು ನಾಗರಿಕತೆಯೇ, ಎಂಬ ಪ್ರಶ್ನೆಗೆ ನಿಖರವಾಗಿ, ಐತಿಹಾಸಿಕವಾಗಿ 'ದ್ವಂದ್ವಾತ್ಮಕವಾದ' ಅಂದರೆ ಡಯಲೆಕ್ಟಿಕ್ ನೆಲೆಯಲ್ಲಿ ಉತ್ತರ ದೊರಕಿಸಿಕೊಂಡದ್ದು ಕೋಸಾಂಬಿ ಒಬ್ಬರೇ. ಇಲ್ಲಿ ಕೋಸಾಂಬಿ ಚರ್ಚೆಯನ್ನು ಆರಂಭಿಸುವುದೇ ಈ ಪ್ರಶ್ನೆಯಿಂದ: ''ಇಷ್ಟೊಂದು ಸಾಂಸ್ಕೃತಿಕ ವೈವಿಧ್ಯತೆ ಇದ್ದಾಗ್ಯೂ ಭಾರತೀಯ ನಾಗರಿಕತೆಯನ್ನು ಬಂಧಿಸಿಟ್ಟಿದ್ದು ಯಾವುದು ?'' ಪ್ರಶ್ನೆ ಹಾಕಿದಷ್ಟೇ ಸುಲಭವಾಗಿ ಟಾಗೋರ್, ನೆಹರೂ ರೀತಿಯಲ್ಲಿ ತುಸು ಅನುಭಾವ ಮಿಶ್ರಿತ ಕಥನ ವಾಕ್ಯವಾಗಿ ಉತ್ತರವನ್ನು ಪಡೆಯದೇ ವೈಚಾರಿಕವಾದ, ಐತಿಹಾಸಿಕವಾದ, ''ಭಾರತೀಯ ಸಂಸ್ಕೃತಿಯ ತಳಹದಿ, ವಿಶೇಷವಾಗಿ ಭೌತಿಕ ತಳಹದಿ'' ಎಂಬ ಉತ್ತರವನ್ನು ಒಂದು ಸಮರ್ಪಕ ವಾದದ ರೀತಿಯಲ್ಲಿ ಕೋಸಾಂಬಿ ಪಡೆದರು.

ಭಾರತೀಯ ಚರಿತ್ರಶಾಸ್ತ್ರದಲ್ಲಿ ಕೋಸಾಂಬಿ ನಿಜಕ್ಕೂ ಒಬ್ಬ ಯುಗಪ್ರವರ್ತಕ, ಮಾದರಿ ನಿರ್ಮಾತೃ. ಆದಾಗ್ಯೂ ಮೌರ್ಯರು ಪಂಚ್‌ಡ್ ಮಾರ್ಕ್ ನಾಣ್ಯಗಳನ್ನು ಟಂಕಿಸಿಲ್ಲ, ಬದಲು ವರ್ತಕರು ಅಥವಾ ಆಗಿನ ವೃತ್ತಿ ಸಂಘಗಳು ಅದನ್ನು ಮಾಡಿದ್ದು ಎನ್ನುವ ಪ್ರಮೇಯ ಇತ್ತೀಚಿನ ದಿನಗಳಲ್ಲಿ ತಿರಸ್ಕೃತವಾಗಿದೆ. ಆರ್ಯನ್ ಒಂದು ಜನಾಂಗವಾಗಿ ವಾಯವ್ಯಭಾಗದಿಂದ ಬಂದು ಹರಪ್ಪಾದ ನೀರಾವರಿ ಮತ್ತು ನಗರ ವ್ಯವಸ್ಥೆಗಳನ್ನು ಹಾಳುಮಾಡಿದರು ಎಂಬ ಮಾರ್ಟಿಮರ್ ವೀಲರ್‌ನ 'ಇಂಡಿಯಾ ಸ್ಟ್ಯಾಂಡ್ಸ್ ಅಕ್ಯೂಸ್ಡ್' ತರಹದ ಉಕ್ತಿಯನ್ನೇ ಪುನರ್ ಸಂರಚಿಸಿದ್ದು ಕೂಡ ಇಂದು ಅಪ್ರಸ್ತುತ. ರೋಮಿಲಾ ಥಾಪರ್, ಥಾಮಸ್ ಟ್ರಾಟ್‌ಮನ್‌ರಂತಹ ಚಿಂತಕರು ಪ್ರಾಕ್ತನ ಶಾಸ್ತ್ರೀಯ, ಭಾಷಾ ಶಾಸ್ತ್ರೀಯ ಮತ್ತು ಮಾನವ ಶಾಸ್ತ್ರೀಯ ನೆಲೆಯಲ್ಲಿ 'ಆರ್ಯ ಆಕ್ರಮಣವಾದ'ವನ್ನು ತಳ್ಳಿಹಾಕಿದ್ದಾರೆ. ಇದೇ ರೀತಿ ಕೋಸಾಂಬಿ ಆರಂಭ ಸಮಾಜಗಳ ಬಗ್ಗೆ ಯೋಚಿಸುವಾಗಲೂ ಹೆಚ್ಚು ಪ್ರಸ್ತಾಪಿಸಿದ್ದು ಮಾರ್ಕ್ಸ್ ಮತ್ತು ಫ್ರೆಡ್ರಿಕ್ ಏಂಗೆಲ್ಸ್ ಮಾದರಿಯನ್ನು.

ಕೋಸಾಂಬಿಯವರ ಕೆಲವು ಸೀಮಿತತೆಗಳು ಅವರ ಅದ್ಭುತ ಗಂಭೀರ ಶ್ರೇಷ್ಠತೆಯ ಗುಣಮಟ್ಟದ ನಡುವೆ ಕಡಿಮೆಯೇ. ಕೋಸಾಂಬಿ ನೇರವಾಗಿ ಯಾವುದೇ ರೀತಿಯ ಕೊಸರಿಕೆ ಇಲ್ಲದೆ ಮಾರ್ಕ್ಸ್‌ವಾದವನ್ನು ಮಾನ್ಯ ಮಾಡಿದ್ದು ಅವರ ಬೌದ್ಧಿಕ ಪ್ರಾಮಾಣಿಕತೆಗೆ ಸಾಕ್ಷಿ. ಅಂತೆಯೇ ಕೋಸಾಂಬಿ ಸಮಕಾಲೀನ ಸಾಂಸ್ಕೃತಿಕ ಪುನರುಜ್ಜೀವನ, ಏಕಶಿಲೀಯ ಇದಮಿತ್ಥಮ್ ರಾಷ್ಟ್ರವಾದಗಳ ಹೊರಗೆ ನಿಂತು ಸೃಜನಶೀಲವಾಗಿ ಆಲೋಚಿಸಿದ್ದೂ ಕೂಡ ಅವರ ಹೆಗ್ಗಳಿಕೆ. ರೋಮಿಲಾ ಥಾಪರ್ ಹೇಳುವ ಹಾಗೆ ''ಹೊಸ ಸಾಕ್ಷ್ಯಗಳು, ಪ್ರಶ್ನೆಗಳ ಉತ್ತರಗಳನ್ನು ಪುನರ್ ಪರೀಕ್ಷೆಗೆ ಒಳಪಡಿಸುವ ಹಾಗೆ ಮುನ್ನಡೆದರೂ ಕೋಸಾಂಬಿ ಭಾರತೀಯ ಚರಿತ್ರಶಾಸ್ತ್ರದಲ್ಲಿ ಕೇಳಿದ ಪ್ರಶ್ನೆಗಳು ಮತ್ತು ಅವರು ಹೊಂದಿದ್ದ ಕಳಕಳಿ ಈಗಲೂ ಸಿಂಧುವಾಗಿವೆ.''

ಬಗ್ವಾಡಿ ಮನೆ ಕುಂದಾಪುರ ತಾ॥ ಪ್ರದೀಪ ಕುಮಾರ್ ಎಸ್. ಕೆ.

*ಈ ತಿಂಗಳು (೩ನೇ ಪುಟದಿಂದ)*

ಅದನ್ನು ಕುರಿತ 'ಪ್ರಜಾವಾಣಿ' ವರದಿ ಹೀಗಿದೆ: ''ಒರಿಸ್ಸಾದ ಸುಪ್ರಸಿದ್ಧ ದೇವಾಲಯವೊಂದರಲ್ಲಿ ಮಕರ ಸಂಕ್ರಾಂತಿಯ ದಿನ ನಡೆದ ಘಟನೆ ಆ ರಾಜ್ಯದಲ್ಲಿ ಇನ್ನೂ ಜೀವಂತವಾಗಿರುವ ಅಸ್ಪೃಶ್ಯತೆ ಆಚರಣೆ ಮೇಲೆ ಬೆಳಕು ಚೆಲ್ಲಿದೆ. ಕೆಳವರ್ಗದ ವ್ಯಕ್ತಿಯೊಬ್ಬರು ಸಚಿವರಂಥ ಉನ್ನತ ಸ್ಥಾನದಲ್ಲಿದ್ದರೂ ಮೇಲುಜಾತಿಯ ಜನ ಅವರನ್ನು ಸಹಿಸುವುದಿಲ್ಲ ಎಂಬುದಕ್ಕೆ ಇದು ನಿದರ್ಶನವಾಗಿದೆ'' (ಪ್ರ. ೧೫.೧.೨೦೦೯). ಇದು ಪೇಜಾವರರ ಬಣದ ಕಣ್ಣಿಗೆ ಬಿದ್ದಿಲ್ಲವೇಕೆ ಮತ್ತು ಬಿದ್ದಿದ್ದರೆ ಬಾಯಿಗೆ ಹಯಗ್ರೀವ ತುರುಕಿಕೊಂಡು ಕೂತಿರುವುದೇಕೆ ? ದೇವಸ್ಥಾನದಲ್ಲಿ ನಡೆದ ಈ ಘಟನೆಯು ಒಂದು ಪಿಡುಗಲ್ಲವೆ ಮತ್ತು ಅಂತಹ ಘಟನೆಗಳು ಮತಾಂತರಕ್ಕೆ ಪ್ರೇರಣೆ ನೀಡಬಹುದಲ್ಲವೆ ? ದಲಿತರಿಗೆ ಭಗವದ್ಗೀತೆಯ ಶ್ಲೋಕಗಳನ್ನು ಕೇಳಿಸುವುದಕ್ಕೆ ಮುಂಚೆ ಅವರನ್ನು ಸಮಾನರನ್ನಾಗಿ ನಡೆಸಿಕೊಳ್ಳುವುದು ಮಾಧ್ವಧರ್ಮವಲ್ಲದಿರಬಹುದು, ಆದರೆ ಅದು ಮಾನವಧರ್ಮವಂತೂ ಖಂಡಿತ ಆಗಿದೆ. ವರದಿಯ ಇನ್ನೊಂದು ಭಾಗ ಹೀಗಿದೆ: ''ಸಚಿವೆ ದೇವರ ದರ್ಶನ ಪಡೆದ ವಿಚಾರ ತಿಳಿದ ತಕ್ಷಣ ಅಲ್ಲಿನ ಅರ್ಚಕರು ದೇವಸ್ಥಾನದ ಬಾಗಿಲನ್ನು ಕೆಲಕಾಲ ಮುಚ್ಚಿದರು. ಶುದ್ಧೀಕರಣ ಪ್ರಕ್ರಿಯೆಯ ನಂತರವಷ್ಟೇ ಬಾಗಿಲು ತೆರೆಯಲಾಯಿತು.'' ದಲಿತರು ಸಾಮೂಹಿಕವಾಗಿ ಇದರಿಂದ ರೋಸಿಹೋದರೆ ಆಶ್ಚರ್ಯವೆಲ್ಲಿಯದು ? ಸಹಸ್ರ ವರ್ಷಗಳ ಹಿಂದೆಯೇ ''ಸರ್ವೇ ಜನಾಸ್ಸುಖಿನೋ ಭವಂತು'' ಎಂದು ಹೇಳಿದ ಪರಂಪರೆ ನಮ್ಮದೆಂದು ಹಿಗ್ಗುವವರಿಗೆ ಈ ಪ್ರಸಂಗವು ಕಸಿವಿಸಿ ಉಂಟುಮಾಡಿದೆಯೆ ? ''ಇತಿಹಾಸದ ತಪ್ಪುಗಳನ್ನು ತೊಡೆದುಹಾಕುವುದು'' ತಮ್ಮ ಉದ್ದೇಶವೆಂದು ಶ್ರೀ ಲಾಲಕೃಷ್ಣ ಅದ್ವಾನಿಯವರು ಅಯೋಧ್ಯೆಯ ಮಸೀದಿ ಉರುಳಿಸಿದಾಗ ಹೇಳಿದ್ದರು. ದಲಿತರೆಲ್ಲಾ ಒಟ್ಟಾಗಿ ಹೋಗಿ ಅಖಂಡಾಳಮಣಿ ದೇವಾಲಯಕ್ಕೆ ಕಲ್ಲೆಸೆದರೆ ಏನು ಹೇಳುತ್ತೇವೆ ? ಹಾಗೇನೂ ಆಗದಂತೆ ಸಾಮಾಜಿಕ ಪರಿವರ್ತನೆಯ ಹಾದಿಯನ್ನು ನೋಡುತ್ತಿರುವ ದಲಿತರು ಸಹನಾಶೀಲರು, ಒರಿಸ್ಸಾದ ಆ ದೇವಸ್ಥಾನದ ಅರ್ಚಕರಿಗಿಂತಲೂ ಹೆಚ್ಚು ಸಭ್ಯರು. ಅವರ ಸಾಮಾಜಿಕ ಮತ್ತು ಜೀವನ ಮೌಲ್ಯಗಳು ಪೇಜಾವರ ಬಣದವರ ದೃಷ್ಟಿಯನ್ನು ಅನರ್ಥಕವೆಂದು ಸಾರುತ್ತವೆ, ಉದಾತ್ತವಾಗಿವೆ. ಮತಾಂತರದ ಸಂದರ್ಭದಲ್ಲಿ ಆಮಿಷಗಳಿಗೆ ಮನಸೋಲಬಾರದೆಂದು ಅಪೇಕ್ಷಿಸುವ ಪೇಜಾವರರು ಬೇರಾವ ನೂತನವೂ ಆಕರ್ಷಕವೂ ಆದ ಆಮಿಷವನ್ನೊಡ್ಡುವುದು ಬೇಡ; ಅವರು ಮತ್ತು ಅವರ ಅನುಯಾಯಿಗಳು ಮಾನವಸಹಜವಾದ ಭಾವನೆಗಳನ್ನು ಬೆಳೆಸಿಕೊಂಡು ಬಾಳಲು ಕಲಿತರೆ ಸಾಕು.

ಒರಿಸ್ಸಾದಲ್ಲಿ ಜರುಗಿದ ಈ ಘಟನೆಯನ್ನು 'ಹೊಸತು' ಖಂಡಿಸುತ್ತದೆ ಮತ್ತು ಸಚಿವೆ ಪ್ರಮೀಳಾ ಮಲ್ಲಿಕ್ ಅವರು ನವೀನ ಪಟ್ನಾಯಕ್ ಎಂಬ ಒರಿಯಾ ಭಾಷೆ ಬಾರದ ಮುಖ್ಯಮಂತ್ರಿಯ ಸಂಪುಟದಿಂದ ಹೊರಬರಬೇಕೆಂದು ಒತ್ತಾಯಿಸುತ್ತದೆ.

* * *

ಮಂಗಳೂರಿನ 'ಕರಾವಳಿ ಅಲೆ' ಪತ್ರಿಕೆಯ ಕರಾಳ ಪುರಾಣ ಇನ್ನೂ ಮುಗಿದಿಲ್ಲ. ಬದಲಾಗಿ ಹೆಚ್ಚು ಕಠಿಣವಾಗುತ್ತಿದೆ. ಗೃಹ ಸಚಿವರು ಪತ್ರಿಕೆಯನ್ನು ಮುಚ್ಚಿಸಲು ಸರ್ವಪ್ರಯತ್ನವನ್ನೂ ಮಾಡುತ್ತಿದ್ದಾರೆಂಬ ಸುದ್ದಿ ಮಂಗಳೂರಿನಲ್ಲಿ ಕೇಳಿಬರುತ್ತಿದೆ. ಇವರು ಜೆ.ಪಿ.ಚಳುವಳಿಯನ್ನು ಬೆಂಬಲಿಸಿ ದೇಶಕ್ಕೆ ''ಎರಡನೆಯ ಸ್ವಾತಂತ್ರ್ಯ'' ತಂದುದಾಗಿ ಹೇಳಿಕೊಳ್ಳುವ ಅದ್ವಾನಿ ಪಕ್ಷದ ಹಿರಿಯ ನಾಯಕರು. ಪತ್ರಿಕೆಗಳಲ್ಲಿ ಅವರ ಪ್ರಣಾಳಿಕೆಯನ್ನು ವಿಮರ್ಶಿಸಿದರೆ ಕಡು ಕೋಪ ತಾಳುವ ಮಾನ್ಯ ಆಚಾರ್ಯರು ಪತ್ರಿಕಾ ಸ್ವಾತಂತ್ರ್ಯವನ್ನು ರಕ್ಷಿಸಬೇಕಾದವರ ಸ್ಥಾನದಲ್ಲಿದ್ದಾರೆ. ''ಕಳ್ಳನಿಗೊಂದು ಪಿಳ್ಳೆ ನೆವ'' ಎಂಬಂತೆ ಎರಡು-ಮೂರು ವರ್ಷಗಳ ಹಿಂದಿನ ತಕರಾರುಗಳನ್ನೆತ್ತಿ ಶ್ರೀ ಬಿ. ವಿ. ಸೀತಾರಾಂ ಅವರನ್ನು ಚೆಂಡಿನೋಪಾದಿಯಲ್ಲಿ ಅಲ್ಲಿಂದಿಲ್ಲಿಗೆ, ಇಲ್ಲಿಂದ ಇನ್ನೆಲ್ಲಿಗೋ, ಹೀಗೆ ಓಡಾಡಿಸುತ್ತಿದ್ದಾರೆ. ಇನ್ನಾದರೂ ಅವರಿಗೆ ಜಾಮೀನು ನೀಡಲಾಗುತ್ತದೆಯೆಂಬ ನಿರೀಕ್ಷೆ ಇದೆ. ಇಂದಿರಾ ಗಾಂಧಿಯವರ ಕಾಲದಲ್ಲಿ ಅವರ ಪುತ್ರ ಸಂಜಯ ಗಾಂಧಿ ದೆಹಲಿಯ ''ಮೇನ್‌ಸ್ಟ್ರೀಮ್'' ಪತ್ರಿಕೆಗೆ ಕಿರುಕುಳ ಕೊಡುತ್ತಿದ್ದಾಗ ಅದು ಎಲ್ಲ ಪತ್ರಿಕೆಗಳಿಗೂ ಒಂದು ರೀತಿಯ ಎಚ್ಚರಿಕೆಯೆಂದು ಪತ್ರಿಕಾ ಬಳಗ ತಿಳಿದಿತ್ತು, ಅದರ ವಿರುದ್ಧ ದನಿ ಎತ್ತಿದ್ದಿತು. ಪ್ರಕೃತದಲ್ಲಿ ಅಂತಹ ಪ್ರತಿಕ್ರಿಯೆ ಸಾಂದ್ರವಾಗಿ ಕಾಣಬರುತ್ತಿಲ್ಲವೆಂಬುದು ಆಚಾರ್ಯರಿಗೆ ಮತ್ತು ಅವರ ವಿವಿಧ 'ಸೇನೆ'ಗಳಿಗೆ ಮುಕ್ತ ಅವಕಾಶಗಳನ್ನು ತೆರೆದಿಟ್ಟಿದೆ. ದೇಶದ ಪ್ರೆಸ್ ಕೌನ್ಸಿಲ್‌ನ ಇಬ್ಬರು ಪ್ರತಿನಿಧಿಗಳು ಮಂಗಳೂರು ಮತ್ತು ಉಡುಪಿಗೆ ಭೇಟಿ ನೀಡಿ ಪರಿಸ್ಥಿತಿಯನ್ನು ಅಧ್ಯಯನ ಮಾಡಿದ್ದಾರೆಂದು ವರದಿಯಾಗಿದೆ. ಅವರು ಸೀತಾರಾಂ ಅವರನ್ನು ಭೇಟಿಯಾಗುತ್ತಾರೋ ಇಲ್ಲವೋ ಎಂಬುದನ್ನು ಕಾದುನೋಡಬೇಕು. ಪ್ರೆಸ್ ಕೌನ್ಸಿಲ್ ಬಂದು ತನಿಖೆ ಮಾಡಬೇಕಾದ ಸನ್ನಿವೇಶವನ್ನು ಸೃಷ್ಟಿಸಿರುವ ಡಾ|| ಯಡಿಯೂರಪ್ಪನವರ ಸರ್ಕಾರವು ರಾಜ್ಯದ ಪತ್ರಿಕೋದ್ಯಮಕ್ಕೆ ಮಸಿ ಬಳಿದಿದೆ ಎಂಬುದನ್ನು ಮನಗಂಡು ಗೃಹ ಸಚಿವರು ತಮ್ಮ 'ಸೇನೆ'ಗಳಿಗೆ ನಾಗರಿಕ ಹಕ್ಕುಗಳ ಬಗ್ಗೆ ಕನಿಷ್ಠ ತಿಳುವಳಿಕೆಯನ್ನಾದರೂ ನೀಡುತ್ತಾರೆಂದು ಆಶಿಸಬೇಕಾಗಿದೆ.

ಉಡುಪಿ-ಮಂಗಳೂರಿನ 'ಸೇನೆ'ಗಳ ಛಾಯೆ ಬೆಂಗಳೂರಿನಲ್ಲೂ ತೋರಿಬರುತ್ತಿದೆ. ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳ ಬಗ್ಗೆ ಸಾಹಿತ್ಯ ವಿಮರ್ಶೆಯ ರೂಪದಲ್ಲಿ ಕೆಲವು ಪ್ರಶ್ನೆಗಳನ್ನೆತ್ತಿರುವ ಶ್ರೀ ಬಿವೆಂಪು ಅವರ ಅನುಭವ ಇದಕ್ಕೆ ಸಾಕ್ಷಿಯಾಗಿದೆ. ಸಾಹಿತ್ಯ ಮತ್ತು ಸಂಸ್ಕೃತಿ ಏಕಮುಖವಾಗಿರಬೇಕೆಂಬ ಆಶಯವು ಯಾವುದಾದರೂ ಮತಧಾರ್ಮಿಕ ಗುಂಪುಗಳಿಗೆ ರುಚಿಸಬಹುದು, ಆದರೆ ಮಾಧ್ಯಮಗಳು ಮತ್ತು ಸರ್ಕಾರ ಅಂತಹ ನಿಲುವನ್ನು ಪೋಷಿಸಬಾರದು. ಯಾವ ಚರ್ಚೆಗೂ ಅವಕಾಶವಿರಕೂಡದೆಂಬುದು ಹಿಟ್ಲರ್‌ಶಾಹಿಗೆ ಮಾನ್ಯ; ಆದರೆ ನಮ್ಮ ಮಾಧ್ಯಮಗಳು ಮತ್ತು ಸರ್ಕಾರ ಅದನ್ನು ಮಾನ್ಯಮಾಡಬೇಕೆ ? ಇದಕ್ಕೆ ಪರ್ಯಾಯವಾದ ಸಂಗತಿಯೊಂದು ತಮಿಳುನಾಡಿನಿಂದ ವರದಿಯಾಗಿದೆ. ಚೆನ್ನೈನಲ್ಲಿರುವ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯು ಒಂದು ಹರ್ಷೋತ್ಸವವನ್ನು ಸದ್ಯದಲ್ಲೇ ಜರುಗಿಸಲಿದೆ. ಪಿಟೀಲು ವಿದುಷಿ ಕನ್ಯಾಕುಮಾರಿ ಸೇರಿದಂತೆ ಹತ್ತಾರು ಉನ್ನತ ಮಟ್ಟದ ಕಲಾವಿದರು ಅದರಲ್ಲಿ ಭಾಗವಹಿಸುತ್ತಿದ್ದಾರೆ; ರಾಮಾಯಣದ ಪ್ರಸಂಗಗಳನ್ನು ತನ್ನ ದೃಷ್ಟಿಯಿಂದ ರಾವಣನು ಪ್ರತಿಪಾದಿಸುವುದು ಒಂದು ಸಂಗೀತ ರೂಪಕದ ಸ್ವರೂಪದಲ್ಲಿ ಪ್ರದರ್ಶನಗೊಳ್ಳಲಿದೆ. ಇದು ನಮ್ಮ ಬಹುಮುಖಿ ಸಂಸ್ಕೃತಿಯ ದ್ಯೋತಕವೋ ಅಥವಾ ಪ್ರಶ್ನೆಯನ್ನೇ ಎತ್ತಕೂಡದೆಂಬ ಜಡ್ಡುಗಟ್ಟಿದ ಮನಸ್ಸಿನ ಪ್ರತಿಕ್ರಿಯೆಯು ನಮ್ಮ ಸಂಸ್ಕೃತಿಯ ಲಕ್ಷಣವಾಗಬೇಕೋ ಎಂಬುದನ್ನು ಜವಾಬ್ದಾರಿಯುತವಾಗಿ ವಿಮರ್ಶಿಸಿಕೊಳ್ಳಬೇಕಾದ ಕಾಲ ಈಗ ಬಂದಿದೆ. ಅಡ್ಡಗೋಡೆಯ ಮೇಲೆ ಕುಳಿತು ಕಣ್ಣು ಮುಚ್ಚಿಕೊಳ್ಳುವ ಸ್ವಭಾವವು ಫ್ಯಾಸಿಸ್ಟ್ ಶಕ್ತಿಗಳಿಗೆ ಆಹ್ವಾನ ನೀಡಿದಂತೆ ಎಂಬುದನ್ನು ಎಲ್ಲರೂ ಅರಿತುಕೊಳ್ಳಬೇಕು.

ಇಲ್ಲಿ ವ್ಯಕ್ತವಾಗಿರುವ ಅಭಿಪ್ರಾಯವು ''ಪ್ರಗತಿಪರರ ಧೋರಣೆ'' ಗೆ ಸಮನಾದರೆ ಅಥವಾ ಹತ್ತಿರ ಬಂದರೆ, ನಮ್ಮ ಲೇಖನಿಯಲ್ಲಿ ''ಕಾಮಾಟಿಪುರದ ವಾಸನೆ'' ಸ್ಪಷ್ಟವಾಗಿಯೇ ಇದೆಯೆಂದು ಬೆಂಗಳೂರಿನ ಏಕಮೇವ ವಿದ್ವಾಂಸರೆನಿಸಿಕೊಂಡಿರುವ ಮಾನ್ಯ ಶತಾವಧಾನಿ ಗಣೇಶ್ ಅವರು ದೂಷಿಸಬಹುದು. ಇತ್ತೀಚೆಗೆ ಭಾರತೀಯ ಜನತಾ ಪಕ್ಷದ ಬುದ್ಧಿಜೀವಿಗಳು ಮತಾಂತರದ ಸಮಸ್ಯೆಯನ್ನು ಚರ್ಚಿಸಿದರೆಂದೂ, ಆ ಸಂದರ್ಭದಲ್ಲಿ ''ಪ್ರಗತಿಪರರ ಬಾಯಲ್ಲಿ ಬರುವುದು ಕೇವಲ ಕಾಮಾಟಿಪುರದ ವಾಸನೆ'' ಎಂದು ಶತಾವಧಾನಿಗಳು ಅಧ್ವಾನದ ಮಾತುಗಳನ್ನು (ಅಂದರೆ, 'ದಾರಿಯೇ ಇಲ್ಲದಂತಹ ಮಾತು' ಎಂದರ್ಥವೆಂಬುದನ್ನು ವ್ಯಾಕರಣ ಸೂತ್ರಗಳನ್ನೆಲ್ಲಾ ಉದ್ಧರಿಸಿ ವ್ಯಾಖ್ಯಾನಿಸಲು ಶ್ರೀ ಗಣೇಶ್ ಸಮರ್ಥರು) ಆಡಿದರೆಂದೂ ವರದಿಯಾಗಿದೆ. ಪ್ರಸ್ತುತ ಸಂಪಾದಕನು ಪ್ರಗತಿಪರರ ಬಣದಲ್ಲಿ ಗುರುತಿಸಿಕೊಳ್ಳಲು ಅಂಜುವುದಿಲ್ಲ. ಆದರೆ ಆತನಿಗೆ ಕಾಮಾಟಿಪುರದ ಪರಿಚಯ ಅಷ್ಟೇನೂ ಉತ್ಸಾಹ ತುಂಬುವಂತಹ ಮಟ್ಟದಲ್ಲಿಲ್ಲ. (ಮುಂಬೈನ ಛತ್ರಪತಿ ಶಿವಾಜಿ ರೈಲ್ವೆ ನಿಲ್ದಾಣದಿಂದ ಕಾಮಾಟಿಪುರ ಹತ್ತಿರದಲ್ಲಿರುವುದರಿಂದ ಶತಾವಧಾನಿ ಗಣೇಶ್ ಅವರು ಎಂದಾದರೂ ಆ ಪ್ರಪಂಚದ ನೇರ ಪರಿಚಯ ಪಡೆಯಲು ಹೋಗಿದ್ದರೆಂಬ ಗುಲ್ಲನ್ನು ಯಾರೂ ಎಬ್ಬಿಸಬಾರದು; ಏಕೆಂದರೆ ಅದಕ್ಕೆ ಯಾವ ಪುರಾವೆಯೂ ಇಲ್ಲ.) ತಿಳಿದಿಲ್ಲದವರಿಗೆ ಆ 'ಪುರ'ದ ವೈಶಿಷ್ಟ್ಯವನ್ನು ತಿಳಿಯಹೇಳಲು ನಮ್ಮ ಪತ್ರಿಕೆಗೆ ಆಸಕ್ತಿ ಇಲ್ಲ. ಸಂಸ್ಕೃತದಲ್ಲಿ 'ಕುಟ್ಟನೀಮತ' ಎಂಬ ಒಂದು ಗ್ರಂಥವಿದೆ. ಅದನ್ನು ಮೀರಿಸುವ ಇನ್ನೊಂದು ಗ್ರಂಥವು ಚೀನೀಭಾಷೆಯಲ್ಲಿದೆಯೆಂದು ಸಾಹಿತ್ಯ ಚರಿತ್ರೆಯ ವಿದ್ಯಾರ್ಥಿಗಳಿಗೆ ತಿಳಿದಿರುತ್ತದೆ. ಆ ಎರಡೂ ಗ್ರಂಥಗಳು ವೇಶ್ಯಾವಿಶ್ವದ ವಿದ್ಯಮಾನಗಳಿಗೆ ಸಂಬಂಧಿಸಿವೆ. ಸಂಸ್ಕೃತದಲ್ಲಿ ಪಾರಂಗತರಾಗಿರುವ ಶತಾವಧಾನಿಗಳಿಗೆ 'ಕುಟ್ಟನೀಮತ'ದ ನೆನಪು ಬಂದು ಪ್ರಗತಿಪರರನ್ನು ದೂಷಿಸಲು ಅವರದೇ ಆದ ಕಾಮಾಟಿಪುರ ರೂಪಕವನ್ನು ರೂಪಿಸಿದರೋ ಏನೋ ತಿಳಿಯದು. ಸಂಸ್ಕೃತದ ಅಲಂಕಾರಶಾಸ್ತ್ರ ಗ್ರಂಥಗಳಲ್ಲಿ ರಸಿಕರಿಗೆ ಶೃಂಗಾರ ರಸದ ಅನುಭೂತಿ ನೀಡುವಂತಹ ನೂರಾರು ಪದ್ಯಗಳಿವೆ. ಆದರೆ ಅವು ಕಾಮಾಟಿಪುರದ ವರ್ಣನೆ ಮಾಡುವುದಿಲ್ಲ. ಹೀಗಿರುವಾಗ ನಮ್ಮನ್ನೆಲ್ಲಾ ತೀವ್ರವಾಗಿ ಬಯ್ಯಲು ಮಾನ್ಯ ಗಣೇಶ್ ಅವರಿಗೆ ಕಾಮಾಟಿಪುರವೇ ಏಕೆ ಹೊಳೆಯಿತೆಂಬುದನ್ನು ಅವರ ಸೈದ್ಧಾಂತಿಕ ಸಹಚರರು ಯಾರಾದರೂ ಸಂಶೋಧನೆ ನಡೆಸಿ ಉಪಕರಿಸಬಹುದು. ಒಂದು ಮಾತಂತೂ ನಿಜ : ಮತಾಂತರದ ಚರ್ಚೆಯಲ್ಲಿ ಕಾಮಾಟಿಪುರವು ಕಾಣಿಸಿಕೊಳ್ಳುವ ಧೀಮಂತಿಕೆಯು ಶೋಭಿಸುವುದಿಲ್ಲ.

* * *

ಹತ್ತಿಪ್ಪತ್ತು ಕೋಟಿ ರೂಪಾಯಿಗಳ ಒಡೆಯರಾದ ಆರ್. ವಿ. ದೇಶಪಾಂಡೆ ಮತ್ತು ಡಿ. ಕೆ. ಶಿವಕುಮಾರ್ ತಮ್ಮ ಪಕ್ಷದ ಚರಮಗೀತೆಯನ್ನು ಹಾಡಲು ಕರ್ನಾಟಕವನ್ನು ರಂಗಸ್ಥಳವನ್ನಾಗಿ ಮಾಡಿಕೊಂಡಿದ್ದಾರೆಂದು ಹೇಳಬಹುದೆ? ಇತ್ತೀಚಿನ ಮರುಚುನಾವಣೆಗಳ ಫಲಿತಾಂಶವು ಅದಕ್ಕೆ ಉತ್ತರ ನೀಡುವಂತಿದೆ. ಯಾವುದೋ ನಾಯಕನ ಅಥವಾ ನಾಯಕಿಯ ಜನ್ಮದಿನವನ್ನು ಆಚರಿಸುವುದನ್ನು ಬಿಟ್ಟರೆ ಈ ಮಹಾನ್ ಮುತ್ಸದ್ದಿಗಳ ಪಕ್ಷಕ್ಕೆ ಯಾವ ಸಾರ್ವಜನಿಕ ಕಾರ್ಯಕ್ರಮವೂ ಗೊತ್ತಿಲ್ಲ. ಜನಸಂಪರ್ಕವೂ ಬೇಡ, ಜನರ ಸಮಸ್ಯೆಗಳಿಗೆ ಪರಿಹಾರ ನೀಡುವಂತಹ ನೀತಿ ಮತ್ತು ಕ್ರಿಯೆಗಳೂ ಬೇಡ; ಆದರೆ ವೋಟು ಮಾತ್ರ ಬೇಕು. "ನಾನು ೧೫ ಕೋಟಿ ಮಾಡಿದ್ದೇನೆಂದರೆ ನಾನು ಬುದ್ಧಿವಂತನೆಂದರ್ಥ, ಆದ್ದರಿಂದ ನನಗೆ ವೋಟು ಕೊಡಿ. ನೀವು ಹಾಗೆ ಮಾಡದಿದ್ದರೆ ನಾನು ನಾಳೆ ಬೇರೊಂದು ಪಕ್ಷಕ್ಕೆ (ಅಂದರೆ ಜನಾರ್ದನ ರೆಡ್ಡಿ ಪಕ್ಷಕ್ಕೆ) ಹಾರಿಬಿಡುತ್ತೇನೆ" ಎಂದು ಮತದಾರರಿಗೆ "ಆಶ್ವಾಸನೆ" ನೀಡುವ ದೇಶಪಾಂಡೆ ಪಕ್ಷಕ್ಕೆ ಕಣ್ಣು ಬಿಟ್ಟು ನೋಡಿ ಆಲೋಚಿಸುವ ವಿಧಾನವೇ ತಿಳಿದಿಲ್ಲ. ಜೊತೆಗೆ, ಪಕ್ಷದ ಅಧ್ವರ್ಯುಗಳು ದೇಶಪಾಂಡೆಯಂಥವರು. ದೆಹಲಿಯಲ್ಲಿ ಅಮೆರಿಕಾದ ಬಾಲಬಡುಕರು ಮತ್ತು ಬೆಂಗಳೂರಿನಲ್ಲಿ ದೆಹಲಿಯ ಬಾಲಬಡುಕರು! ಕಾಂಗ್ರೆಸ್ ಕೊಚ್ಚಿಹೋಗಲು ಇಷ್ಟು ಸಾಕೆಂದು ಮರುಚುನಾವಣೆಯಲ್ಲಿ ಮತದಾರರು ಆದೇಶ ನೀಡಿದ್ದಾರೆ. ಸ್ವಲ್ಪ ಬಿಡುವು ಮಾಡಿಕೊಂಡು ಆಕಾಶವಾಣಿ ಮತ್ತು ದೂರದರ್ಶನದ ಕಾರ್ಯಕ್ರಮಗಳನ್ನು ಕಾಂಗ್ರೆಸ್ ನಾಯಕರು ಪರಿಶೀಲಿಸುವುದು ಆರೋಗ್ಯಕರ. ಕಾಂಗ್ರೆಸ್ ನಾಯಕತ್ವದಲ್ಲಿ ಈ ಮಾಧ್ಯಮಗಳನ್ನು ಭಾರತೀಯ ಜನತಾ ಪಕ್ಷದ ಪರಿವಾರಕ್ಕೆ ಸಂಪೂರ್ಣವಾಗಿ ಧಾರೆಯೆರೆದು ಕೊಡಲಾಗಿದೆ. ಸಾರ್ವಜನಿಕ ಚರ್ಚೆಗೆ ಬರುವ ವಿಷಯಗಳನ್ನೆಲ್ಲಾ ಇದೇ ಪರಿವಾರವು ಸೂಚಿಸುತ್ತದೆ. ಅದರ ಬಗ್ಗೆಯೇ ನಿರರ್ಥಕವಾಗಿ ಮಾತನಾಡುತ್ತಾ ಸಮಯವನ್ನು ವ್ಯರ್ಥಮಾಡುವ ಕಾಂಗ್ರೆಸ್ಸಿಗೆ ಅನಕ್ಷರತೆ, ಬಡತನ, ನಿರುದ್ಯೋಗ, ಬೆಲೆಯೇರಿಕೆ, ಸಾರ್ವಜನಿಕ ಸಂಪತ್ತಿನ ಲೂಟಿ, ಇವೆಲ್ಲಾ ಸಮಸ್ಯೆಗಳಾಗಿ ಗೋಚರಿಸುವುದೇ ಇಲ್ಲ. ಭಾರತೀಯ ಜನತಾ ಪಕ್ಷದ ಆಡಂಬರಕ್ಕೆ ಹಿನ್ನೆಲೆ ರಚಿಸಿಕೊಡುವ ಕಾಂಗ್ರೆಸ್ಸಿಗೆ ಭವಿಷ್ಯವು ಶೂನ್ಯಮಯವಾಗಿ ಕಾಣುವುದರಲ್ಲಿ ಅಸಹಜತೆ ಎಲ್ಲಿಯದು!

* * *

ಮರುಚುನಾವಣೆಯ ಪ್ರಚಾರದಲ್ಲಿ ಹಲವು ಅಕ್ರಮಗಳು ವ್ಯಾಪಕವಾಗಿ ನಡೆದುವೆಂದು ವರದಿಯಾಗಿತ್ತು. ಅದರಲ್ಲಿ ಹೊಸದೇನೂ ಇಲ್ಲ. ಚುನಾವಣಾ ಆಯೋಗವು ಅಬ್ಬರ ಮಾಡುತ್ತದೆ. ಆದರೆ ಅನುಷ್ಠಾನದ ಪ್ರಶ್ನೆ ಬಂದಾಗ ಸಪ್ಪಗಾಗುತ್ತದೆ, ತೆಪ್ಪಗಾಗುತ್ತದೆ. ಇಲ್ಲದಿದ್ದರೆ ಪ್ರತಿಬಾರಿಯೂ ಅಕ್ರಮಗಳು ನಡೆಯುವುದು ಹೇಗೆ? ಭಾಜಪವು ಚುನಾವಣೆಗೆ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುವ ಬಗೆಗೆ ಒಂದು ಚಿಕ್ಕ ಉದಾಹರಣೆ ಬೆಂಗಳೂರಿನ ಗಣೇಶ ಮಂದಿರ ವಾರ್ಡಿನಲ್ಲಿ ದೊರೆಯುತ್ತದೆ. ವಿಶ್ವ ಹಿಂದು ಪರಿಷತ್ತಿನ ಕಾರ್ಯಕರ್ತರೆನ್ನಲಾದ ಶ್ರೀ ಎಲ್. ಗೋವಿಂದರಾಜು ಅವರು ಆ ಕ್ಷೇತ್ರದ ಸಮಸ್ತರಿಗೆ ಒಂದು ಉಡುಗೊರೆ ನೀಡುತ್ತಿದ್ದಾರೆ : ಯಾರು ಬೇಕಾದರೂ ಧರ್ಮಸ್ಥಳ ಅಥವಾ ವೆಲ್ಲೂರಿಗೆ ಪುಕ್ಕಟೆಯಾಗಿ ಹೋಗಿಬರಲು ಬಸ್ ವ್ಯವಸ್ಥೆಯನ್ನು ಮಂಜುನಾಥ ಮತ್ತು ಲಕ್ಷ್ಮಿ ಭಕ್ತರಾದ ಗೋವಿಂದರಾಜು ಮಾಡುತ್ತಾರೆ; ಆಸಕ್ತರು ಅವರ ಕಚೇರಿಯಲ್ಲಿ ನೋಂದಾಯಿಸಿಕೊಂಡರೆ ಸಾಕು. ಅದು ಈ ವಾರ್ಡಿನ ನಿವಾಸಿಗಳಿಗೆ ಮಾತ್ರ ಲಭ್ಯ.

ಇದು ದೇವರ ಸೇವೆಯಾದ್ದರಿಂದ ಚುನಾವಣೆಗೆ ಸಂಬಂಧಿಸಿದ್ದಲ್ಲ. ಚುನಾವಣಾ ಆಯೋಗವು ಅದಕ್ಕೆ ಅಡ್ಡಿ ಬರುವಂತಿಲ್ಲ, ಏಕೆಂದರೆ ಇನ್ನೂ ಚುನಾವಣೆಯ ಘೋಷಣೆಯಾಗಿಲ್ಲ. ನಾಳೆಗಾಗಿ ಇಂದೇ ಬಂಡವಾಳ ಹೂಡುವುದನ್ನು ತಪ್ಪಿಸಲು ಯಾರಿಗೂ ಹಕ್ಕಿಲ್ಲ. ಯಾತ್ರೆ ಏರ್ಪಡಿಸುವುದರಿಂದಲೇ ಚುನಾವಣೆಯಲ್ಲಿ ಜಯಗಳಿಸಲು ಸಾಧ್ಯವಿಲ್ಲದಿರಬಹುದು, ಆದರೆ ಅದೂ ಒಂದು ಮಾರ್ಗ. ಹೆಂಡದ ನಶೆ ಕೆಲವರಿಗೆ, ದೇವರ ಸೇವೆ ಕೆಲವರಿಗೆ. ಎರಡರಿಂದಲೂ ಪಕ್ಷದ "ಅಭಿವೃದ್ಧಿ" ಮಾಡಿಕೊಳ್ಳಲು ಹಾದಿ ತೆರೆದಿದೆ. "ಹೇಗೂ ಕರೆದುಕೊಂಡು ಹೋಗುತ್ತೀರಿ, ಕೇದಾರಕ್ಕೋ ಕೈಲಾಸಕ್ಕೋ ಕಠ್ಮಂಡುವಿಗೋ ಕರೆದುಕೊಂಡು ಹೋಗಬಾರದೆ" ಎಂದು ಮತದಾರರು ಗೋವಿಂದರಾಜು ಅವರಲ್ಲಿ ಅರ್ಜಿ ಸಲ್ಲಿಸಿ ಕೃತಾರ್ಥರಾಗಲೆಂದು ಆಶಿಸೋಣ!

## ನಮ್ಮವರ ಬಣ್ಣ

ನಮ್ಮವರ ಬಣ್ಣ
ರೊಕ್ಕ ಇದ್ದ ಧಣಿಗಳ ತಾಕ
ಜೀತಕ್ಕಿಟ್ಟೈತಿ

ನಮ್ಮವರ ಬಣ್ಣ
ಮಹಡಿ ಮನೆಗಳ ಮಂದಿಗೆ
ಮೆಟ್ಟಿಲಾಗೈತಿ

ನಮ್ಮವರ ಬಣ್ಣ
ದೊಡ್ಡದೊಡ್ಡ ಅಧಿಕಾರಸ್ಥರ
ಕಾಲ ಕಸವಾಗೈತಿ

ನಮ್ಮವರ ಬಣ್ಣ
ಸೋಗಲಾಡಿ ರಾಜಕಾರಣಿಗಳ
ಲಂಗೋಟಿ ಬಟ್ಟೆಯಾಗೈತಿ

ನಮ್ಮವರ ಬಣ್ಣ
ನೀತಿ ಹೇಳೋ ಜಾತಸ್ತರ ತಾಕ
ಸುತ್ತಿಗೊಂಡು ಬಿದ್ದೈತಿ

ನಮ್ಮವರ ಬಣ್ಣ
ಸೂಳೆ ಬಜಾರದಾಗ
ಮಾರಾಟಕಿಟ್ಟೈತಿ

ನಮ್ಮವರ ಬಣ್ಣ
ಹುಡಕಬ್ಯಾಡ್ರೋSSS
ಹುಟ್ಟಿದಾಗಿಂದ
ಜಾತಿ ಒಲಿಯಾಗ
ಬಡತನದ ಬೆಂಕ್ಯಾಗ
ಸುಟ್ಟು ಕರಕಲಾಗೈತಿ
ಸಾಯೋಗಂಟ
ಅದೇ ನಿಜ ಆಗೈತಿ

ನಮ್ಮವರ ಬಣ್ಣ
ಬಾಲ ಸೂರ್ಯನಂಗ
ಕೆಂಪಗ
ಪೂರ್ಣ ಚಂದ್ರನಂಗ
ಬೆಳ್ಳಗ
ಹೊಳ್ಳಿ ಬರೋದ್ಯಾವಾಗ ???



**ವಿ. ಹರಿನಾಥ ಬಾಬು,** ಸದಾಶಿವ ನಗರ, ಸಿರುಗುಪ್ಪ - ೫೮೩೧೨೧, ಬಳ್ಳಾರಿ ಜಿಲ್ಲೆ

*ಸಂಪಾದಕೀಯ (೫ನೇ ಪುಟದಿಂದ)*

ನಿಯಂತ್ರಣವೆಂದರೆ ನಡುಕ. ಸರ್ಕಾರ ಬೇಡ ಅನ್ನುವುದಕ್ಕೆ ಬದಲು ಅವರು ಸರ್ಕಾರಕ್ಕೆ ರಾಜಕೀಯವನ್ನು ಪರ್ಯಾಯ ಪದವಾಗಿ ಬಳಸಿ, ಯಾವ ಎಗ್ಗೂ ಇಲ್ಲದೆ ರಾಜಕೀಯ ಪ್ರಕ್ರಿಯೆಯನ್ನೇ ಹಳಿಯಲು ಪ್ರಾರಂಭಿಸಿದ್ದಾರೆ. ಅಂದರೆ ಪ್ರಜಾಪ್ರಭುತ್ವ ಪ್ರಕ್ರಿಯೆಯ ವಿರುದ್ಧ ಇದು ಪ್ರಚ್ಛನ್ನ ಸಮರ. ದೇಶದ ಆರ್ಥಿಕ ವ್ಯವಸ್ಥೆಯ ಮೇಲೆ ಈ ರೀತಿ ಪದೇ ಪದೇ ಪ್ರಹಾರಮಾಡುತ್ತಿರುವ ಹಲವಾರು ಉದ್ಯಮಪತಿಗಳು ಯಾವ ಭಯೋತ್ಪಾದಕರಿಗೂ ಕಡಿಮೆ ಇಲ್ಲ. ಖಾಸಗೀ ಅರ್ಥವ್ಯವಸ್ಥೆಯೇ ಆದರೂ ಲಾ ಅಂಡ್ ಆರ್ಡರ್ ಸರ್ಕಾರದ ಹತೋಟಿಯಲ್ಲೇ ಇರಬೇಕು. ಅರ್ಥವ್ಯವಸ್ಥೆಯೊಳಗಿನ ಲಾ ಅಂಡ್ ಆರ್ಡರೂ ಅದರದೇ ಜವಾಬ್ದಾರಿ. 'ಸತ್ಯಂ' ಕಂಪನಿಗೆ ಅಮೆರಿಕಾದ ನ್ಯಾಯಾಸ್ಥಾನದಲ್ಲಿ ಶಿಕ್ಷೆಯಾಗುವುದು ಖಂಡಿತ. ಹಾಗೆಯೇ ಅವರದೇ ಪ್ರೈಸ್‌ವಾಟರ್ ಕಂಪನಿಗೂ ಪೆಟ್ಟು ಬೀಳಬಹುದು. ಹೀಗಾಗಿ ಭಾರತದಲ್ಲೂ ಇವರಿಗೆ ಒಂದಿಷ್ಟಾದರೂ ಶಿಕ್ಷೆಯಾಗುವುದು ಅನಿವಾರ್ಯ. ಇದು ಎಷ್ಟು ಬೇಗನೆ ಆದರೆ ಅಷ್ಟು ಇಂಡಿಯಾ ಇಂಕ್‌ಗೆ ಒಳಿತು. ರಾಜಕೀಯಕ್ಕೆ 'ಸತ್ಯಂ'ನಿಂದ ಹಣ ವಸೂಲಿ ಮಾಡಿದವರು ತಮ್ಮ ಮೂಗುತೂರಿಸದಂತೆ ಸಾರ್ವಜನಿಕ ಎಚ್ಚರ ವಹಿಸುವುದು ಅಗತ್ಯ. ಬಿಳಿಯ ಹಣಕ್ಕಿಂತ ಕಪ್ಪು ಹಣವೇ ಹೆಚ್ಚಾಗಿ ತುಂಬಿರುವ ಅರ್ಥವ್ಯವಸ್ಥೆಯಲ್ಲಿ ಭ್ರಷ್ಟಾಚಾರವೇ ಸಾಧಾರಣ ನಿಯಮ. ಆಂಧ್ರದ ಉದ್ಯಮಪತಿಗಳಿಗೆ ತೆರಿಗೆಯಿಲ್ಲದ ಕೃಷಿ ಆದಾಯ ಒಂದು ಲೆಕ್ಕ ನೀಡಬೇಕಾಗದ ಬಂಡವಾಳ. ಹಾಗೆಯೇ ಐಟಿ ಬಿಟಿಗಳಿಗೆ ಮತ್ತೆ ಐದು ವರ್ಷ ತೆರಿಗೆ ವಿನಾಯ್ತಿ ಘೋಷಿಸಿರುವುದು ಅಸಮರ್ಥನೀಯವೆಂದು ಎಲ್ಲರಿಗೂ ಸ್ಪಷ್ಟವಿದೆ. ಈ ಎರಡೂ ಲಾಬಿಗಳು ರಾಜಕೀಯಕ್ಕೆ ನಿಯತವಾಗಿ ಕಾಣಿಕೆ ಒಪ್ಪಿಸುವುದೂ ತೆರೆದ ಗುಟ್ಟು. 'ಸತ್ಯಂ' ಪ್ರಕರಣದಲ್ಲಿ, ಅವರು ಆದಾಯ ತೆರಿಗೆ ಲೆಕ್ಕ ಒಪ್ಪಿಸುವುದು ಅಗತ್ಯವಾಗಿದ್ದರೆ ಇಷ್ಟು ಸುಲಭವಾಗಿ ಸುಳ್ಳುಲೆಕ್ಕ ಬರೆಯಲಾಗುತ್ತಿರಲಿಲ್ಲ. ತೆರಿಗೆ ವಿನಾಯ್ತಿ ಕೊಡುವುದು ಬಿಡುವುದು ಎಂಬುದನ್ನು ಒತ್ತಟ್ಟಿಗಿಟ್ಟು ಎಲ್ಲರೂ ತೆರಿಗೆ ಲೆಕ್ಕ ಒಪ್ಪಿಸುವುದು ಕಡ್ಡಾಯವಾಗಬೇಕು. ಅಂಥ ಲೆಕ್ಕವನ್ನು ಪರಿಶೀಲಿಸಿದ ನಂತರ ಕಾನೂನಿನಂತೆ ವಿನಾಯ್ತಿ ನೀಡಬಹುದು. ಇದು ಕೃಷಿ ಆದಾಯಕ್ಕೂ ಅನ್ವಯಿಸಬೇಕು.

ಉದ್ಯಮಪತಿಗಳ ಸಂಘಗಳು 'ಸತ್ಯಂ' ಪ್ರಕರಣವನ್ನು ವಿಶ್ಲೇಷಿಸುತ್ತಾ, ಐಟಿ ಬಿಟಿ ಕಂಪನಿಗಳ ಮೂಲ ಬಂಡವಾಳವೇ ಅವುಗಳ ಸಹಸ್ರಾರು ಕಾರ್ಮಿಕರು ಪ್ರತಿನಿಧಿಸುವ ಬೌದ್ಧಿಕ ಬಂಡವಾಳವೆಂದು ಹೇಳಿ, ಕಾರ್ಮಿಕರನ್ನು ರಕ್ಷಿಸಲು 'ಸತ್ಯಂ' ಉಳಿಯಬೇಕೆನ್ನುತ್ತಿದ್ದಾರೆ. ಕಾರ್ಮಿಕರನ್ನು ಕುರಿತ ಉದ್ಯಮಪತಿಗಳ ಈ ಅಳಲು ಅನುಕಂಪನೀಯವೇ ಸರಿ! ಹಾಗಾದರೆ ಅದೇ ತರ್ಕದ ಜಾಡನ್ನು ಒಂದಷ್ಟು ಮುಂದುವರಿಸಿ, ಈ ಜನ ಈ ಬಂಡವಾಳವನ್ನು ಉತ್ಪಾದಿಸುವ ಶಿಕ್ಷಣಕ್ಷೇತ್ರಕ್ಕೆ ಅದನ್ನು ಮರುಪಾವತಿ ಮಾಡುವುದೂ ತಮ್ಮ ಕರ್ತವ್ಯವೆಂದು ಈಗಲಾದರೂ ಒಪ್ಪಿಯಾರೆ ? ಹಾಗಾದರೆ ಈ ದುಬಾರಿ ಶಿಕ್ಷಣ ಸ್ವಲ್ಪ ಸುಲಭ ವೆಚ್ಚದಲ್ಲಿ ಸಾಧಾರಣ ಜನರಿಗೂ ದೊರಕುವಂತೆ ಆದೀತು. ಇದಕ್ಕೆ ಒಪ್ಪದಿದ್ದರೆ ಕಾರ್ಮಿಕರ ಕುರಿತ ಇವರ ಕಳಕಳಿ ಹುಸಿಯಾದುದು ಎಂದು ಅರ್ಥವಾಗುತ್ತದೆ. ಯುದ್ಧದಲ್ಲಿ ಶತ್ರುಸೇನೆ ಹೆಂಗಸರನ್ನೂ ಮಕ್ಕಳನ್ನೂ ಮುಂಚೂಣಿಯಲ್ಲಿ ಒಡ್ಡಿ, ಮುಂದುವರಿಯುವ ತಂತ್ರದಂತೆ, ತಮ್ಮ ಎಲುಬು ಕಾಪಾಡಿಕೊಳ್ಳಲು ಕಾರ್ಮಿಕರ ಹಿತದ ಮಾತನಾಡುತ್ತಿಲ್ಲವಷ್ಟೆ!

ಇನ್ನೊಂದು ಅತ್ಯಗತ್ಯವಾದ ಸುಧಾರಣೆ. ದೊಡ್ಡ ದೊಡ್ಡ ಕಂಪನಿಗಳು ಷೇರುಪೇಟೆಯ ವ್ಯವಹಾರ ನಡೆಸಲು ತಮ್ಮದೆ ದಳ್ಳಾಳಿ ಕಂಪನಿಗಳನ್ನು ರಿಲೈಯನ್ಸ್ ಕ್ಯಾಪಿಟಲ್ ಥರದವನ್ನು ಸ್ಥಾಪಿಸಿಕೊಂಡಿವೆ. ಇದನ್ನು ಸಂಪೂರ್ಣವಾಗಿ ತಡೆಗಟ್ಟದೆ ಇನ್‌ಸೈಡರ್ ಟ್ರೇಡ್ ಎಂಬ ಒಳಗುಟ್ಟು ಅರಿತವರ ದುಷ್ಟ ಧಂಧೆಯನ್ನು ನಿಯಂತ್ರಿಸಲು ಆಗುವುದಿಲ್ಲ.

## ಉತ್ಸವಗಳು ಏತಕ್ಕಾಗಿ ?

**ಬೇ**ರಾವ ರಾಜ್ಯದಲ್ಲೂ ಇಲ್ಲದಷ್ಟು ಉತ್ಸವಗಳು ನಮ್ಮಲ್ಲಿವೆ. ಸರ್ಕಾರವೇ ನೇರವಾಗಿ ಆಯೋಜಿಸುವುದು ಒಂದು ವಿಶೇಷ. ಹಂಪಿ, ಕದಂಬ, ಕರಾವಳಿ, ಹೊಯ್ಸಳ, ಜಾನಪದ, ಹೀಗೆ ಹತ್ತಾರು. ರಾಜ್ಯೋತ್ಸವವೇ ಬೇರೆ. ಇನ್ನೂ ಗಂಗ, ಚಾಲುಕ್ಯ, ಸೇವುಣ ಮುಂತಾದುವು ಬಾಕಿ ಇವೆ. ಸರ್ಕಾರವಲ್ಲದೆ ಆಳ್ವ ಸಿರಿ, ಸಾಹಿತ್ಯ ಸಮ್ಮೇಳನ ಮುಂತಾದ ಉತ್ಸವಗಳು ಪ್ರತಿವರ್ಷ ಜರುಗುತ್ತವೆ. ಅವಕ್ಕೂ ಸರ್ಕಾರದ್ದೇ ಹಣ. ಸರ್ಕಾರ ಅಲ್ಲದಿದ್ದರೆ ಸಂಸ್ಕೃತಿಗೆ ಉತ್ತೇಜನ ನೀಡಲು ಬ್ಯಾಂಕುಗಳಿವೆ, ಜೀವವಿಮಾ ಕಾರ್ಪೊರೇಶನ್ ಇದೆ. ಒಟ್ಟಿನಲ್ಲಿ ಎಲ್ಲಾ ಸಾರ್ವಜನಿಕರ ಹಣ. ಖಾಸಗಿ ಉತ್ಸವಗಳಲ್ಲೂ ಸರ್ಕಾರದ್ದೇ ಬಹುಪಾಲು ಹಣ.

ಇಷ್ಟೊಂದು ಉತ್ಸವಗಳೇಕೆ ಎಂಬ ಪ್ರಶ್ನೆ ಕಾಡುತ್ತದೆ. ಜನರಿಗೆ ರಂಜನೆ ನೀಡಲು, ಎಂಬುದು ಸರಳ ಉತ್ತರ. ಜೊತೆಗೆ, ಕೆಲವರ ಜೇಬುಗಳು ತುಂಬುವುದೂ ಇದೆ. ಕಲಾವಿದರದ್ದು ಕೆಲವು, ಸಂಯೋಜಕರದ್ದು ಹಲವು. ಯಾವುದು ಹೆಚ್ಚೆಂಬ ಮಾಹಿತಿ ಇಲ್ಲ. ಮಾಹಿತಿ ಹಕ್ಕಿನ ಕಾಯಿದೆಯಡಿ ಅರ್ಜಿ ಗುಜರಾಯಿಸಿ ಮಾಹಿತಿ ದಕ್ಕಿಸಿಕೊಂಡರೆ ಸ್ವಾರಸ್ಯವಾದ ಅಂಕಿ-ಅಂಶಗಳು ಹೊರಬೀಳಬಹುದು. ಆದರೆ ಅದರಿಂದಲೂ ಪೂರ್ತಿ ಚಿತ್ರ ಸಿಗುವುದಿಲ್ಲ. ಕೃಷ್ಣನ ಲೆಕ್ಕವು ಮಾಹಿತಿ ಕಾಯಿದೆಯಡಿ ಸೇರುವುದಿಲ್ಲವಲ್ಲ!

ಇತ್ತೀಚೆಗೆ ಮಂಗಳೂರಿನಲ್ಲಿ ಕರಾವಳಿ ಉತ್ಸವ ನಡೆಯಿತು. ಅದರಲ್ಲಿ ಸಂಗೀತ ವಿಭಾಗವೂ ಒಂದು. ಅಲ್ಲಿ ಆಹ್ವಾನಿತ ಸಂಗೀತಗಾರರ ಪೈಕಿ ಚೆನ್ನೈನವರೇ ಹೆಚ್ಚು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಬಳಿ ಕರ್ನಾಟಕದ ಸಂಗೀತಗಾರರ ಪಟ್ಟಿ ಇಲ್ಲದಿರಬಹುದು ಅಥವಾ ಬೇರೆ ಕಾರಣಗಳೂ ಇರಬಹುದು. ಜನವರಿ ೧೧ರಂದು ಮಂಗಳೂರಿನ ಪುರಸಭಾ ಭವನದಲ್ಲಿ ಬೆಳಿಗ್ಗೆ ಸಂಗೀತ ಕಾರ್ಯಕ್ರಮಗಳು. ಬೆಳಿಗ್ಗೆ ಸುಮಾರು ೧೧-೩೦ರ ಸಮಯದಲ್ಲಿ ಸಂಗೀತ ಆಸ್ವಾದಿಸಲು ಒಟ್ಟು ೫೫ ಮಂದಿ ಇದ್ದರು. ಇದು ಖಚಿತವಾದ ಎಣಿಕೆ. ಖರ್ಚೆಷ್ಟೋ ತಿಳಿಯದು. ಅಂದೇ ಸಂಜೆ ಒಂದು ಪಾರ್ಕಿನಲ್ಲಿ ಹಿಂದಿ ಹಾಡುಗಳು ಮತ್ತು ಗಝಲ್‌ಗಳು. ಬೇಕಾದಷ್ಟು ಜನ ತುಂಬಿದ್ದರು. ಹಂಪಿ ಉತ್ಸವದಲ್ಲೂ ಕರ್ನಾಟಕದವರಲ್ಲದ ಕಲಾವಿದರಿಗೇ ಹೆಚ್ಚು ಮಾನ್ಯತೆ ಮತ್ತು ರೊಕ್ಕ. ಒಬ್ಬರಿಗೆ ೩೫ ಲಕ್ಷ, ಆಶಾ ಭೋಂಸ್ಲೆಗೆ ೨೫ ಲಕ್ಷ ಮತ್ತು ಧಾರವಾಡದ ಹಿಂದುಸ್ತಾನಿ ಗಾಯಕ ವೆಂಕಟೇಶ ಕುಮಾರ್ ಅವರಿಗೆ ೩೦ ಸಾವಿರ ಎಂದು ಹೇಳುತ್ತಾರೆ. ಅವೇಳೆಯಲ್ಲಿ ಹಾಡಲು ಕೇಳಲಾಯಿತೆಂದು ಶ್ರೀ ವೆಂಕಟೇಶ ಕುಮಾರ್ ಹಾಡದೆಯೇ ತೆರಳಿದರಂತೆ !

ಇದೆಲ್ಲಾ ಏನು ಹಗರಣ, ಏನು ಅವ್ಯವಸ್ಥೆ? ಉತ್ಸವದ ಉದ್ದೇಶವೇನು ಮತ್ತು ಅದು ಯಾರಿಗಾಗಿ ? ದಿನನಿತ್ಯದ ಜಂಜಾಟದ ಮೂಲ ಕಾರಣಗಳ ಬಗ್ಗೆ ಜನರು ಅವಜ್ಞೆ ಬೆಳೆಸಿಕೊಳ್ಳಲೆಂದೇನಾದರೂ ಇವನ್ನು ಆಯೋಜಿಸಲಾಗುತ್ತಿದೆಯೇ ? ಒಂದು ಕೃಷಿ ಮೇಳಕ್ಕೆ ಇಷ್ಟೇ ಮುತುವರ್ಜಿಯನ್ನು ಸರ್ಕಾರ ಏಕೆ ವಹಿಸುವುದಿಲ್ಲ ? ಒಂದು ವರ್ಷದ ಎಲ್ಲಾ ಉತ್ಸವಗಳಿಗಾಗಿ ಎಷ್ಟು ಕೋಟಿ ಖರ್ಚಾಗುತ್ತದೆ ? ಅಷ್ಟೇ ಕೋಟಿಗಳು ಒಂದು ಜಿಲ್ಲೆಯ ಪ್ರಾಥಮಿಕ ಶಾಲೆಗಳಿಗೆ ದೊರೆಯುವುದುಂಟೆ ? ಸರ್ಕಾರ ನಡೆಸುತ್ತಿರುವ ಉಚಿತ ವಿದ್ಯಾರ್ಥಿನಿಲಯಗಳ ದುರವಸ್ಥೆ ಒಂದು ಕಡೆ, ಉತ್ಸವಗಳು ಇನ್ನೊಂದು ಕಡೆ. ಊಟ ಸರಿಯಾಗಿಲ್ಲದಿದ್ದರೇನಂತೆ, ಉತ್ಸವದ ವಿಜೃಂಭಣೆ ಇದೆಯಲ್ಲಾ, ಅಷ್ಟೇ ಸಾಲದೆ ?

೧೮೪೦-೫೦ರ ದಶಕದಲ್ಲಿ ಬ್ರಿಟನ್ನಿನಲ್ಲಿ ಜನಸಾಮಾನ್ಯರು ಚಾರ್ಟಿಸ್ಟ್ ಚಳುವಳಿಯಲ್ಲಿ ಭಾಗಿಗಳಾಗಿ ಕೆಲವು ಮೂಲಭೂತ ಹಕ್ಕುಗಳು ಹಾಗೂ ಸೌಲಭ್ಯಗಳಿಗಾಗಿ ಆಗ್ರಹಿಸಿದರು. ಅದೇ ದಶಕದಲ್ಲಿ ಯೂರೋಪಿನಾದ್ಯಂತ ಭಾರಿ ಚಳುವಳಿಗಳು ನಡೆಯುತ್ತಿದ್ದವು. ೧೮೪೮ರಲ್ಲಿ ಮಾರ್ಕ್ಸ್ ಮತ್ತು ಏಂಗಲ್ಸರ ಕಮ್ಯುನಿಸ್ಟ್ ಪ್ರಣಾಲಿಕೆ ಹೊರಬಂದಿತು. ಜನಗಳನ್ನು ಹೊಸ ದಾರಿಗೆ ಹೋಗದಂತೆ ತಡೆಯಲು ಆಳುವ ವರ್ಗವು ಏನಾದರೊಂದು ಉಪಕ್ರಮ ಕಂಡುಕೊಳ್ಳಬೇಕಿತ್ತು. ೧೮೫೦ರಲ್ಲಿ "ಲಂಡನ್ನಿನ ಬೃಹತ್ ಪ್ರದರ್ಶನ"ವೆಂದು ಪ್ರಖ್ಯಾತವಾದ ಒಂದು ಪ್ರದರ್ಶನವನ್ನೇರ್ಪಡಿಸಲಾಯಿತು. ಅದು ನಮ್ಮ ಇಂದಿನ ಉತ್ಸವಗಳಿಗೆ ಪೂರ್ವರೂಪದ ಮಾದರಿ! ಸಹಸ್ರಾರು ಜನ ಪ್ರದರ್ಶನಕ್ಕೆ ಮುಗಿಬಿದ್ದರು, "ದೇಶದ ಅದ್ಭುತ ಬೆಳವಣಿಗೆ"ಯನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡರು, ಚಾರ್ಟಿಸ್ಟ್ ಮತ್ತು ಕಮ್ಯುನಿಸ್ಟ್ ಚಳುವಳಿಗಳಿಂದ ದೂರವಾದರು. ಒಂದು ವರ್ಷವಿಡೀ ಈ ಪ್ರದರ್ಶನ ಜಾರಿಯಲ್ಲಿತ್ತು. ಹಳ್ಳಿಗಳಿಂದ ಲಂಡನ್ನಿಗೆ ಬಂದು ಅದನ್ನು ನೋಡಲು ಜನರಿಗೆ ಉಚಿತ ಸಾರಿಗೆ ವ್ಯವಸ್ಥೆ ಕಲ್ಪಿಸಲಾಯಿತು.

ನಮ್ಮ ಉತ್ಸವಗಳಲ್ಲಿ ಹೊರನಾಡಿನವರ ಜೇಬು ತುಂಬುವುದು, ನಮ್ಮ ಕಲಾವಿದರನ್ನು ಉಪೇಕ್ಷಿಸುವುದು, ಕೆಲವು ಅಕ್ರಮಗಳಿಂದ ಸಂಯೋಜಕರು ಹಣ ಸೂರೆಮಾಡುವುದು, ಇವೆಲ್ಲಾ ಒತ್ತಟ್ಟಿಗಿರಲಿ; ದುಡಿಯುವ ಜನರನ್ನು ಹೋರಾಟಗಳಿಂದ ವಿಮುಖರನ್ನಾಗಿಸುವ ಹುನ್ನಾರವೂ ಇದರ ಹಿಂದೆ ಅಡಗಿದೆಯೆ ? ಗಂಭೀರವಾದ ಪ್ರಶ್ನೆ. ಅದನ್ನು ಹಾಕಿಕೊಳ್ಳಲು ಮುಂದಾಗೋಣ, ಆ ನಂತರದ ದಾರಿ ತಾನೇ ತೆರೆದುಕೊಳ್ಳುತ್ತದೆ.

# ಅಸಹಾಯಕತೆಯಲ್ಲೂ

ಸಿ. ರಾಮಸ್ವಾಮಿ



ನೆಲ ಬಿಸಿಲಿಗೆ ನಿಂತ ಅವನ ಕಾಲು ಅಂಗಾಲುಗಳು ಬಿಸಿ ಬಾಣಲೆಂಪಲ್ಲಿಟ್ಟಂತಿತ್ತು. ಹೊರಗಿನ ಸುಳ್ಳು ಅವನೊಳಗಿನ ನಿಜವನ್ನು ಸುಟ್ಟು ಭಸ್ಮಮಾಡುತ್ತಿರಲು... ಆ ನೋವುಗಳು ಅವನ ಒಡಲಾಳಕೆ ಬೇರುಗಳಾಗಿ ಇಳಿದು ಹರಡಿಕೊಳ್ಳುತ್ತಿದ್ದವು. ಆ ಅಸಹಾಯಕತೆಯಲ್ಲೂ ಪಕ್ಕದಲ್ಲೇ ತೇಲುವ ಅಪ್ಪನ ವ್ಯಕ್ತಿತ್ವವನ್ನು ಪ್ರೀತಿಯಿಂದ ನೋಡುತ್ತಿದ್ದ. "ಈ ಶಾಲೆ... ಓದು ಬರಹ... ಸುಳ್ಳುಗಳು ರೋಹಿದಾಸನಿಗೆ ನರಕದಂತೆ ಕಾಣುತ್ತಿದ್ದವು. ಆಗ... ಸಾಲೆ, ಓದು ಬರಹ ಅನ್ನೋದು ನಮ್ ಪಾಲ್ಗೆ ಈಚೆಗೆ ಅಂಬೇಡಕರರ ಕಾಲದಿಂದ ಸಿಕ್ಕಿರೊ ಅವ್‌ಕಾಸ ಮಗಾಽಽ... ಇದ್ನ ಬಿಡ್ದೆ ದಕ್ಕಿಸ್ಕೊಂಡ್ರೆ ಮುಂದುಕ್ಕೆ ಸರ್ಕಾರಿ ನೌಕ್ರಿ ಪಡ್ದು ಜೀವ್ನ ಸಾಗ್ಸಬೌದು ಕಂದಾಽ..." ಎಂದಿದ್ದ ಅಪ್ಪನ ಜೋಪಾನದ ನುಡಿ ಅವನ ನೆನಪಿನಲ್ಲಿ ದಟ್ಟವಾಗಿ ಹರಡಿಕೊಳ್ಳಲು ಬಾಯಿಪಾಠವನ್ನು ಮುಂದುವರಿಸಿದ.

ಹೇಳಿದ ಸಮಯಕ್ಕೂ ಮುಂಚೆ ಹಿಂತಿರುಗಿ ಬಂದ ನರಹರಿ ಮಾಸ್ತರ ಕೈಯಲ್ಲಿ ಬೆತ್ತ ಇತ್ತು. ಅವನ ಬಾಯಿಪಾಠವನ್ನು ಅಡ್ಡಪ್ರಶ್ನೆ ಹಾಕಿಯೂ ಪರೀಕ್ಷಿಸಿದರು. ಪಾಸಾಗಿದ್ದ. ಕೆಂಗಣ್ಣಿನೊಂದಿಗೆ ಬಿಳಿಹಲ್ಲುಗಳ ಮಸೆಯುತ್ತಾ "ಹೆಡ್ ಮಾಸ್ಟರ್ ಮುಂದೆ ತಪ್ಪಿದ್ರೆ ಅವ್ರು ಕೇಳೋ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸಬೇಕು ತಿಳಿತ್ತೇನೊ... ಹುಷಾರ್" ಎನ್ನುವ ಎಚ್ಚರಿಕೆ ನೀಡಿ ತರಗತಿ ಒಳಗಿದ್ದ ಪೂವಯ್ಯ ಮತ್ತು ವಿವೇಕನನ್ನು ಹೊರ ಕರೆದರು.

ಕುಲುಮೆಗೆ ಸಿಕ್ಕಿ ಬೆಂದು ಹೋದಂತಿದ್ದ ರೋಹಿದಾಸ ನೆರಳಿಗೆ ಬಂದ. ಮಸೆಯುತ್ತಿದ್ದ ಮಾಸ್ತರ ಬಿಳಿ ಹಲ್ಲುಗಳು ಅಲ್ಲಿಂದ ಎದ್ದು ಮಾಂಸ ಖಂಡವ ಕುಕ್ಕಿ ತಿನ್ನೊ ರಣಹದ್ದುವಾಗಿ ಮಾರ್ಪಡಲು... ರೋಹಿದಾಸ ಸುಳಿಗೆ ಸಿಕ್ಕ ಜೀವದಂತೆ ತಲ್ಲಣಿಸುತ್ತಿದ್ದ!... ಹೀಗೆ ತಲ್ಲಣಿಸುವ ದಿಗ್ಭ್ರಮೆಯಲ್ಲಿ ನರಹರಿ ಮಾಸ್ತರ ಹಿಂದೆ ವಿವೇಕ, ಪೂವಯ್ಯ ಹಿಂದೆ ರೋಹಿದಾಸ ಹೆಡ್ ಮಾಸ್ಟರ್ ಕೋಣೆಯತ್ತ ನಡೆದರು.

ನಡೆಯುತ್ತಿದ್ದ ರೋಹಿದಾಸನೊಳಗೆ ಅಪ್ಪನೂ ಆ ನಿಜ ಘಟನೆಯೂ ನೇಸರನಂತೆ ಮೂಡತೊಡಗಿತು... ಅಲ್ಲಿ.

ಮೊನ್ನೆ ದಿನ ಸಂಜೆ ಗಜಾನನ ಬಸ್ಸು ಹರಿದು ಟಾಮಿ ಸತ್ತ ನೆನಪಿಗೆ, ಅಲ್ಲಿನ ದುಃಖಕ್ಕೆ, ರೋಹಿದಾಸನಿಗೆ ಊಟ ಸೇರದೆ ಇಂದು ಮಧ್ಯಾಹ್ನ ಉಂಡ ಅನ್ನವೂ ಉಂಡಂತಾಗದೆ ದುಗುಡವನ್ನು ಭಾರವಾದ ಮನಸ್ಸಿನೊಂದಿಗೆ ಸ್ಕೂಲ್ ಬ್ಯಾಗ್ ಭಾರವನ್ನು ಹೊತ್ತುಕೊಂಡು ಮನೆ ಬಾಗಿಲ ದಾಟಿ ಅಂಗಡಿ ಬಾಗಿಲಿಗೆ ಒರಗಿ ನಿಂತುಕೊಂಡ. ಚಪ್ಪಲಿ ಹೊಲಿಯುತ್ತಿದ್ದ ಅಪ್ಪನಿಗೆ ಅವನ ಕಾಲು, ನಿಲುವು ಕಾಣಿಸಿ ಇಪ್ಪತ್ತು ಪೈಸೆ ಕೊಟ್ಟು ಪುನಃ ಹೊಲಿಯುವಂತಾದರು. ಆ ಎರಡೂ ನಾಣ್ಯಗಳನ್ನು ಗಾಢ ವಿಷಾದದಿಂದ ದಿಟ್ಟಿಸಲು ಅವನ ಎರಡೂ ನೇತ್ರಗಳ ತುಂಬಾ ನೀರು

ಇನ್ನೂ ಹಸಿಯಾಗಿರುವ ಘಟನೆ. ಅಲ್ಲಿನ ಅನುಭವದ ಎಲ್ಲವೂ ನಿಜವಲ್ಲ ಎಂಬಂತೆ ಅದರ ಮೇಲೆ ಸುರಿದ ಸುಳ್ಳುಗಳು... ಮುಳ್ಳುಗಳಾಗಿ ಎದ್ದು ನಿಂತ ರೀತಿಗೆ ರೋಹಿದಾಸ ಕಕ್ಕಾಬಿಕ್ಕಿಯಾಗಿಬಿಟ್ಟಿದ್ದ. ಅವು ಅವನ ಪ್ರಜ್ಞೆಯ ನಾಲಗೆಯ ಮೇಲೆ ಕೂತಿದ್ದ ಸತ್ಯವನ್ನು ನಿರ್ಭಯವಾಗಿ ಕತ್ತರಿಸುತ್ತಾ ಒಳಗೆ ಹೆಬ್ಬಾವಿನಂತಾಗಿ ಆವರಿಸಿಕೊಳ್ಳುವ ಕ್ರೂರತೆಗೆ ಅವನಿಗವನೇ ಪರಕೀಯ ಎಂಬಂತಾಗಿದ್ದ.

ಅಕ್ರಮವಾಗಿ ರೋಹಿದಾಸನ ನಾಲಗೆಯನ್ನು ವಶಪಡಿಸಿಕೊಂಡ ನರಹರಿ ಮಾಸ್ತರ ಒತ್ತಡದಿಂದ ಹೊರಬರಲಾಗದಂಥ ಭಯದ ಅಸಹಾಯಕತೆಯ ನಡುವೆಯೂ ಮಾಸ್ತರು ಸೃಷ್ಟಿಸಿಕೊಟ್ಟ ಸುಳ್ಳನ್ನು ನಿಜವೆಂಬಂತೆ ಬಾಯಿಪಾಠ ಮಾಡುವ, ಮಾಡಲಾಗದ ದ್ವಂದ್ವಕ್ಕೆ ಸಿಲುಕಿ ಕಂಪಿಸುತ್ತಿದ್ದ, ತೊದಲುತ್ತಿದ್ದ.

"...ಸಾರ್ಽಽ ನಡೆದದ್ದು ಹೀಗೀಗೆ" ಎಂದರೂ ದೇವರ ಮೇಲೆ ಅಪ್ಪ ಅಮ್ಮನ ಮೇಲೆ ಆಣೆ ಹಾಕಿ ಪರಿಪರಿಯಾಗಿ ವಿವರಿಸಿದರೂ ಮಾಸ್ತರ ಕಠಿಣತೆ ನೆತ್ತಿಗೆ ನೆಟ್ಟ ಸ್ಥಿರ ಸೂರ್ಯನಂತಾಗಿತ್ತು. ಸತ್ಯದ ಮೇಲೆ ಸುಳ್ಳನ್ನು ಮೆತ್ತುವ ಮಾಸ್ತರ ಕ್ರೌರ್ಯವನ್ನು ಕಂಡು ದಿಗ್ಭ್ರಾಂತನಾಗಿ ಮುಂದಕ್ಕೆ ಮಾತು ಕಳೆದುಕೊಂಡಂತಾಗಿಬಿಟ್ಟಿದ್ದ!

ತುಂಬಿ ಹಸ್ತವೇ ಅಲ್ಲದೆ ನಾಣ್ಯಕೂಡ ಮಂಜಾಗುತ್ತಿತ್ತು...

ಕಳೆದೆರಡು ತಿಂಗಳಿನಿಂದ ಹಣಕ್ಕಾಗಿ ಪೀಡಿಸಿ ಹೆದರಿಸಿ ಹೊಡೆಯುತ್ತಿದ್ದ ಪೂವಯ್ಯ ಮತ್ತು ವಿವೇಕನಿಗೆ ನಿತ್ಯವೂ ಅಥವಾ ದುಡ್ಡು ಸಿಕ್ಕಿದಾಗಲೆಲ್ಲಾ ನೀಡಿ ಅವರಿಬ್ಬರ ಕ್ರೂರತೆಯಿಂದ ರೋಹಿದಾಸ ಬಚಾವಾಗುತ್ತಿದ್ದ. ಹಾಗೆ ಮಧ್ಯಾಹ್ನದೊತ್ತು ಶಾಲೆಯ ಗೇಟಿನ ತನಕ ಬಂದು ಬಿಟ್ಟುಕೊಡುವ ಕಪ್ಪು ಟಾಮಿಗೆ ಹಿಂದೆ ನೀಡುತ್ತಿದ್ದಂತೆ ಈಗಲೂ ತಿಂಡಿ ನೀಡಲಾಗದಂಥ ತಾನೂ ತಿನ್ನಲಾಗದಂಥ ಅಸಹಾಯಕತೆಯ ಭಯದಲ್ಲೂ ಮುದ್ದು ಟಾಮಿಯ ತಲೆ ಸವರಿ ಕಳುಹಿಸಿ ಬಿಡುತ್ತಿದ್ದ. ಹೀಗೆ ಬಾಲವಾಡಿಸುತ್ತಾ ಹಿಂತಿರುಗುತ್ತಿದ್ದ ಟಾಮಿ ಮೊನ್ನೆ ದಿನ ಗಜಾನನ ಬಸ್ಸಿಗೆ ಸಿಕ್ಕಿ ಸತ್ತ ಸುದ್ದಿ ಕೇಳಿ ತನ್ನೊಳಗಿನ ಚೈತನ್ಯವೆಲ್ಲಾ ಬಸಿದು ಹೋದಂತೆ ರೋಹಿದಾಸ ರೋದಿಸಿ ಒದ್ದಾಡಿಬಿಟ್ಟಿದ್ದ!

ಟಾಮಿಯ ನೆನಪು, ದುಃಖ, ತಿಂಡಿ ಎಲ್ಲವೂ ಸೇರಿ ಕೈಯಲ್ಲಿದ್ದ ದುಡ್ಡನ್ನು ಅವರಿಬ್ಬರಿಗೂ ನೀಡದಂತೆ ವಿರೋಧಿಸುತ್ತಿದ್ದವು. ಆದರೆ ಹುಲಿಗಳ ಮುಂದೆ

ಕುರಿ... ಪ್ರತಿಭಟಿಸಲಾಗದಂಥ ಹಿಂಜರಿಕೆ, ಭಯ ರೋಹಿದಾಸನನ್ನು ಮುತ್ತಿಕೊಂಡಂತಲ್ಲಾ ಶಾಲೆಯೇ ಬೇಡ ಇಲ್ಲಿಗೆ ಸಾಕು...! ಎಂಬಂಥ ನೋವು ಅವನನ್ನು ಹಿಂಡಿ ಸುಸ್ತುಗೊಳಿಸುತ್ತಿತ್ತು.

ಆಶ್ಚರ್ಯಗೊಂಡ ಅಪ್ಪ ಇನ್ನೂ ನಿಂತೇ ಇರುವ ಮಗನನ್ನು ಅವನ ಮುಖಭಾವವನ್ನು ಕಂಡು, ಧಿಗ್ಗನೆ ಎದ್ದು ಬಂದು ಅವನ ಹೆಗಲ ಮೇಲೆ ಕೈಹಾಕಿ ಕಾರಣ ವಿಚಾರಿಸಿದರು. ತಡವರಿಸುತ್ತಾ ಎಲ್ಲವನ್ನು ಹೇಳಿದ. ಕಾಕಾ ಅಂಗಡಿ ಬಳಿ ನಿಂತಿದ್ದ ಆ ಅವರಿಬ್ಬರನ್ನು ತೋರಿಸಿದ. ಅಪ್ಪ ಅವರಿಬ್ಬರನ್ನು ಕರೆದರು.

''ಜಗಳ ಮಾಡೋದು, ಬಲವಂತದಿಂದ ದುಡ್ಡು ವಸೂಲಿ ಮಾಡೋದು ರೌಡಿಗಳು. ನೀವು ಓದೋ ಹುಡುಗ್ರು, ಚೆನ್ನಾಗಿ ಓದ್ಬೇಕು ತಿಳಿತಾ...'' ಎಂದ್ಹೇಳಿ ''ಮುಂದಕ್ಕೂ ಹೀಗೆ ನಡಕೊಂಡ್ರೆ ಮಾಸ್ತರಿಗೆ ಹೇಳ ಬೇಕಾಗುತ್ತದೆ'' ಎಂದು ಎಚ್ಚರಿಕೆ ನೀಡಿ ಕಳುಹಿಸಿದ್ದರು.

ಏನೂ ಹೇಳದೆ ತಪ್ಪಿತಸ್ಥರ ಭಂಗಿಯಲ್ಲಿ ಹೋಗುವ ಅವರಿಬ್ಬರ ವಿಚಿತ್ರ ನಡಿಗೆಯನ್ನು ಕಂಡ ರೋಹಿದಾಸನಿಗೆ, ಅಪ್ಪ ಎಷ್ಟು ಬೇಗ ಎಲ್ಲವನ್ನೂ ಸರಿಪಡಿಸಿಬಿಟ್ಟರೆಂಬ ಹರುಷಕ್ಕೆ ಅವನ ಕಣ್ಣೀರು ಆನಂದದ ಕಡಲಾಯಿತು...!

''ಏಯ್ ಕೆಪ್ಪ! ಕಿವಿ ಕೇಳ್ಸೊದಿಲ್ವೆನೋ... ಬೇಗ ಬಾರೊ'' ಬಾಣದಂತೆ ಚುಚ್ಚಿದ ಮಾಸ್ತರ ಕೂಗಿಗೆ ಬೆಚ್ಚಿಹೋದ ರೋಹಿದಾಸ ವಾಸ್ತವ ಸ್ಥಿತಿಗೆ ಬಂದು, ಕಣ್ಣೀರ ಒರೆಸಿಕೊಂಡು ಬೇಗ ಬೇಗನೆ ನಡೆದು ಹೆಡ್ ಮಾಸ್ಟರ್ ಕೋಣೆಯ ಬಳಿ ನಿಂತ.

''ಹೆಡ್ ಮಾಸ್ಟರ್ ಕೇಳೊ ಪ್ರಶ್ನೆಗಳಿಗೆ ನಾನು ಹೇಳಿ ಕೊಟ್ಟಂತೆ ಉತ್ರ ಹೇಳ್ಬೇಕು. ತಪ್ಪಿದ್ರೆ... ಗೊತ್ತಿದೆಯಲ್ಲಾ...'' ನರಹರಿ ಮಾಸ್ತರ ಎಚ್ಚರಿಕೆಗೆ ಮೂವರೂ ತಲೆಯಾಡಿಸಿದರು.

ಪೊಲೀಸ್ ಸ್ಟೇಷನ್ ಒಳಗೆ ನಿಂತಂತಾದ ಭಯಕ್ಕೆ ರೋಹಿದಾಸನಿಗೆ ಉಚ್ಚೆ ಬಂದು ಅದು ನಿಯಂತ್ರಣ ಮೀರಿ ಹನಿಹನಿಯಾಗಿ ಚಡ್ಡಿಗೆ ತಾಗಿ ವಿಸ್ತರಿಸಿಕೊಳ್ಳಲು ಹೆಡ್‌ಮಾಸ್ಟರ್ ಸೇರಿ ಯಾರಿಗೂ ಕಾಣದಂತೆ ಎರಡೂ ಕೈಗಳನ್ನು ಅಡ್ಡ ಮಾಡಿ ಕರೆದ ಹೆಡ್‌ಮಾಸ್ಟರ್ ಮುಂದೆ ನಡುಗುತ್ತಾ ನಿಂತುಕೊಂಡ.

ಹೆಡ್‌ಮಾಸ್ಟರ್ ಅವರ ಪ್ರಶ್ನೆ ರೋಹಿದಾಸನಿಗೆ:

ನಿನ್ನ ಹೆಸರೇನೋ? ನಿಮ್ಮಪ್ಪ ಏನು ಮಾಡಿ ಕೊಂಡಿದ್ದಾರೋ? ಉತ್ತರಿಸಿದ.

''ಚಪ್ಲಿ ಕೆಲ್ಸ ಮಾಡೋ ನಿಮ್ಮಪ್ಪ ನಿನಗೆ ರಾಜ ಹರಿಶ್ಚಂದ್ರನ ಮಗನ ಹೆಸರಿಟ್ಟಿದ್ದಾರೊ'' ಎಂಬ ವ್ಯಂಗ್ಯ ಧ್ವನಿಯಲ್ಲಿ ನಕ್ಕ ಹೆಡ್‌ಮಾಸ್ಟರ ಮುಂದಿನ ಪ್ರಶ್ನೆ ''ನಿಮ್ಮಪ್ಪ ಇವರಿಬ್ಬರಿಗೆ ಹೊಡೆದ್ರೇನೊ ?''

''ಹೊಡೆದ್ರು ಸಾರ್''

''ಎಷ್ಟೆಷ್ಟು ಏಟುಗಳು ?''

''ನಾಕೈದು ಏಟುಗಳು ಸಾರ್.''

''ಯಾವುದ್ರಲ್ಲಿ ಹೊಡೆದ್ರು ?''

''ಕೈಯಲ್ಲಿ ಸಾರ್''

''ಎಲ್ಲೆಲ್ಗೆ ಹೊಡೆದ್ರು ?''

''ಬೆನ್ನಿಗೆ ಮತ್ತು ಕಾಲಿಗೆ ಸಾರ್.''

''ಯಾಕೆ ಹೊಡೆದ್ರು ?''

ಎಲ್ಲದಕ್ಕೂ ನರಹರಿ ಮಾಸ್ತರು ರೂಪಿಸಿಕೊಟ್ಟ ಉತ್ತರ ನೀಡಿ ಸುಸ್ತಾದಂತಿದ್ದ ರೋಹಿದಾಸ ಈ ಪ್ರಶ್ನೆಗೆ ಉತ್ತರ ನೀಡದೆ ನಿಜ ಉತ್ತರವನ್ನು ನಿಯಂತ್ರಿಸಲಾಗದವನಂತಾಗಿ ಅಳುತ್ತಾ ಮಾಸ್ತರತ್ತ ನೋಡಿದ. ಮಾಸ್ತರ ಬೆನ್ನ ಹಿಂದೆ ಗತ್ತಿನಲ್ಲಿ ನಿಂತ ಅವರಿಬ್ಬರನ್ನೂ ನೋಡಿ ತಲೆ ತಗ್ಗಿಸಿದ. ತಕ್ಷಣ ಗರ್ಜನೆಯಂತೆ ಸಿಡಿಯಿತು, ಅದೇ ಪ್ರಶ್ನೆ ಹೆಡ್‌ಮಾಸ್ಟರ್ ಬಾಯಿಂದ.

ತಕ್ಷಣ ಪ್ರವೇಶಿಸಿದ ನರಹರಿ ಮಾಸ್ತರು ''ಅಗ್ಲೇ ಹೇಳ್ದನಲ್ಲಾ ಸಾರ್.. ಒಂದೆರಡು ತಿಂಗಳಿನಿಂದ ಇವರಿಬ್ರೂ ದುಡ್ಡಿಗಾಗಿ ಅವನನ್ನ ಹೊಡೆದು ಬಡಿದು ಪೀಡಿಸ್ತಾ ಇದ್ರಂತೆ... ಹೆದರ್‌ಕೊಂಡ ರೋಹಿದಾಸ ಇವರಿಬ್ಬರಿಗೆ ಹಣ ತಂದುಕೊಡುತ್ತಿದ್ನಂತೆ... ಇದ್ನ ನಂಬಬೌದಾ ಸಾರ್...! ಭಿಕ್ಷುಕ ಶ್ರೀಮಂತನಿಗೆ ಭಿಕ್ಷೆ ನೀಡಿದಂತಿದೆ ಇವ್ನ ಮಾತುಗಳು !! ಇವರಿಬ್ಬರೂ ನೋಡಿದ್ರೆ ಪ್ಲಾಂಟರ್ಸ್ ಮಕ್ಳು. ಅವ್ನ ನೋಡಿದ್ರೆ ಚಪ್ಲಿ ಅಂಗಡಿ ಇಟ್ಟುಕೊಂಡವನ ಮಗಾ. ಯಾಕೆ ಹೊಡೆದ್ರು ಅಂತ ನಾನು ಕೂಡ ಕೇಳಿದ್ದೆ. ಇದೆ ಉತ್ರ ನೀಡಿದಾಗ ನನ್ಗೆ ನಂಬಲಾಗದಷ್ಟು ನಗು ಬಂದುಬಿಡ್ತು ಸಾರ್‌ಽ...'' ಎಂದು ನಗುತ್ತಾ ನರಹರಿ ಮಾಸ್ತರು ಮಾತು ನಿಲ್ಲಿಸಿದಾಗ –

ವಿವೇಕ, ಪೂವಯ್ಯ ಇಬ್ಬರೂ ಮಾಸ್ತರು ಮಾತಿನ ಮೋಡಿ, ಚಾಲಾಕಿತನ, ತಮ್ಮನ್ನು ರಕ್ಷಿಸಲು ಸೃಷ್ಟಿಸಿದ ಕತೆಯ ವಿನ್ಯಾಸವನ್ನು ಕಂಡು ದಿಗ್ಭ್ರಾಂತರಾಗಿ, ಆಟವಾಡದೆ ಗೆಲುವು ಪಡೆದುಕೊಂಡವರ ಹಾಗೆ ಒಳಗೊಳಗೆ ಸಂತೋಷಿಸುತ್ತಿದ್ದರು.

ನಿರ್ಲಕ್ಷಿಸಲಾಗದ ಗಂಭೀರ ವಿಷಯವೆಂಬಂತೆ ಮುಖ ಮಾಡಿದ ಹೆಡ್‌ಮಾಸ್ಟರ್ ರೋಹಿದಾಸನ ತಂದೆಯನ್ನು ಕರೆತರಲು ಜವಾನನಿಗೆ ಆಜ್ಞಾಪಿಸಿದರು.

ಹೆಚ್ಚುಕಮ್ಮಿ ಹತ್ತು ನಿಮಿಷಗಳಲ್ಲಿ ರೋಹಿದಾಸನ ತಂದೆ ಹೆಡ್‌ಮಾಸ್ಟರ್ ಮುಂದೆ ಹಾಜರಾದರು.

ಜವಾನನಿಂದ ವಿಷಯವೇನೆಂದು ಸ್ಪಷ್ಟವಾಗದೆ ಹೊರಟುಬಂದ ಅವಸರಕ್ಕೆ, ಒಳಗಿನ ಉದ್ವೇಗಕ್ಕೆ, ಉಸಿರಾಟದ ವೇಗದಿಂದ ಅವರ ಎದೆಗೂಡು ಮುಂದಕ್ಕೂ ಹಿಂದಕ್ಕೂ ಚಲಿಸುತ್ತಿತ್ತು. ತೊಳೆದಿದ್ದರೂ ಕೈಯಲ್ಲಿನ ಕೆಂಪು ಪಾಲಿಷ ಕಲೆಗಳು ಅಲ್ಲಲ್ಲಿ ಇನ್ನೂ ಇದ್ದವು. ಪಂಚೆ ಜುಬ್ಬಾಗಳ ಮೇಲೂ ಅಲ್ಲಲ್ಲಿ ಚರ್ಮದ ತುಣುಕುಗಳು ಅಂಟಿಕೊಂಡಿದ್ದವು.

ಗೌರವದಿಂದ ದುಗುಡದಿಂದ ನಮಸ್ಕರಿಸಿ ನಿಂತ ರೋಹಿದಾಸನ ತಂದೆಗೆ ಹೆಡ್‌ಮಾಸ್ಟರ್ ಅವರ ಪ್ರಶ್ನೆ... ''ಯಾರು ಅಧಿಕಾರ ಕೊಟ್ರು ಅಂತ ಈ ಇಬ್ಬರು ಹುಡುಗರಿಗೆ ಹೊಡೆದ್ರಿ ? ದೂರು ಕೊಡಬಹುದಿತ್ತಲ್ಲಾ ?''

ಒಮ್ಮೆಗೆ ಕೊಡಲಿಯಿಂದ ಸೀಳಿಬಿಟ್ಟಂತಹ ಅನುಭವ. ಆ ದಿಗ್ಭ್ರಮೆಯಲ್ಲೂ ಅರ್ಥವಾಗದಂತಾದ ಅವರು ಮಗನತ್ತ ನೋಡಿದರು. ಮಗನ ನೋಟ ನಡುಗುತ್ತಾ ನೆಲಕ್ಕೆ ತಾಗಿತು. ಆ ಇಬ್ಬರು ಮಕ್ಕಳನ್ನು ನೋಡಿದರು. ಅವರ ಕಣ್ಣಿನ ಗಡಸು ನೋಟ ಸೂರಿನತ್ತ ತೇಲಿದವು.

ಇಂತಹ ಪ್ರಶ್ನೆಗಳನ್ನು ಕ್ರೂರತೆಯಿಂದಲೂ ಕಲ್ಪಿಸಿಕೊಳ್ಳಲಾರೆ ಎಂಬಂತಾದ ಅವರು, ವಿಷ ಮುಳ್ಳ ಹಾವುಗೆ ಮೇಲೆ ನಿಂತಂತಾಗಿ ಆ ನೋವಿನ ಭಾರಕ್ಕೆ ನೆಲವೂ ಅತ್ತ ಸರಿಯುತ್ತಿದೆಯೋ ಏನೋ ಎಂಬಂತಾಗಿಬಿಟ್ಟರು. ನಾಲಗೆಯೊಂದಿಗೆ ಒಡಲಾಳದ ಜೀವವೂ ಬತ್ತಿದಂತಾಗಿ ಉತ್ತರಿಸಲು ತಡಕಾಡುತ್ತಿರಲು –

''ನೋಡಿದ್ರಾ ಸಾರ್‌ಽ ಅವ್ರ ಮುಖ ! ಮಾತೇ ಇಲ್ಲ ಸ್ಥಿತಿ... ಅಪರಾಧಿ ಪ್ರಜ್ಞೆ...'' ನರಹರಿ ಮಾಸ್ತರ ವ್ಯಂಗ್ಯದ ಕಠೋರ ಧ್ವನಿಯು ರೋಹಿದಾಸನ ಅಪ್ಪನನ್ನು ನುಡಿಯಲಾಗದಂಥ ಸ್ಥಿತಿಗೆ ತಳ್ಳಿ ಛಿದ್ರಗೊಳಿಸುತ್ತಿತ್ತು. ಹೆಡ್‌ಮಾಸ್ಟರ್‌ಗೂ ಮಾಸ್ತರ ಧ್ವನಿ ಸರಿಯೆನಿಸುತ್ತಿತ್ತು.

ಏನೂ ಮಾಡಲಾಗದಂತಹ ಆ ಕ್ರೂರ ಅಸಹಾಯಕತೆಯಲ್ಲೂ ಬದುಕುವ ಆಸೆಯಂತೆ ರೋಹಿದಾಸನಿಗೆ ನೆನಪಾಗುತ್ತಿದ್ದದ್ದು ಮತ್ತು ಸಹಿಸುವ ತಾಳ್ಮೆ, ಸಂಯಮ ನೀಡುತ್ತಿದ್ದದ್ದು ಹಿಂದೆ ಅಪ್ಪ ನುಡಿದಿದ್ದ ''... ಕಂದಾಽ ಓದು ಬರಹ ಅನ್ನೋದು ನಮ್ ಪಾಲ್ಗೆ ಈಗೀಗ, ಅದೂ ಅಂಬೇಡಕರ್ರ ಕಾಲ್‌ದಿಂದ ಸಿಕ್ಕಿರೊ ಅವ್ಕಾಸ ಮಗಾಽ... ಈಗ್ ನೋಡು ! ನಿನ್ನ ಪಕ್ಕ ಬೇರೆ ಜಾತಿ ಮಕ್ಳು ಕುಂತ್ಕೊತಾರೆ... ಆಗ ನಮ್ಗೆಲ್ಲಾ ದೂರ್ದಲ್ಲಿ ಕೂರ್ಸೋರು. ಬೋರ್ಡಿನ ಅಕ್ಷರ ಕಾಣಸ್ತಾ ಇರ್ಲಿಲ್ಲ. ಪಾಠನೂ ಕೇಳಿಸ್ತಾ ಇರ್ಲಿಲ್ಲ. ಎದುರ್ತಾ ಕೇಳಿದ್ರೆ, ದಡ್ರು, ದನ ತಿನ್ನೋರು, ಹೊಲೇರು, ಮಾದಿಗ್ರು ಅಂತ ಅನ್ನೋರು. ಸ್ಕೂಲೇ ಗೊಳ್ಳೆಂದು ನಗೋದು. ಮುಸ್ಲಿಮು ಕ್ರಿಸ್ಚನ್ ಮಕ್ಳನ್ನ ಮೇಸ್ಟ್ರು, ಹುಡುಗ್ರು ಆಟಕ್ಕೆ ಸೇರ್ಸ್ಕೊಳ್ಳೊರು. ನಮ್ಮನ್ನ 'ಥೂ' ಅಂತ, ದೂರ ಇಟ್ಬು ಬಿಡೋರು ಮಗಾಽ... ತಡಿಲಾಗ್ದೆ ಸಾಲೆನೇ ಬಿಟ್ಬುಬಿಟ್ಟೊ... ನೀನಾದರೂ ಬಿಡ್ದೆ ಓದುನ್ನಾ ದಕ್ಕುಸ್ಕೊ...'' ಎಂದಿದ್ದ ಅಪ್ಪನ ನುಡಿ, ರೋಹಿದಾಸನನ್ನು ಬಲವಾಗಿ ನಿಯಂತ್ರಿಸುತ್ತಿತ್ತು, ಎಲ್ಲವನ್ನೂ ಸಹಿಸುವಂತೆ ಮಾಡುತ್ತಿತ್ತು.



ದಬಾಯಿಸುವ ಧ್ವನಿಯಲ್ಲಿ ''ಯಾಕೆ ಮೌನವಾಗಿದ್ದಿರಾ ? ಮಾತಾಡಿ'' ಎಂದು ಹೆಡ್‌ಮಾಸ್ಟರ್ ಪ್ರಶ್ನಿಸಲು, ಸೋಲ್ಲಾದ ರೋಹಿದಾಸದ ತಂದೆ ''...ಆ ಏಳುಮಲೆ ಮಾದೇಸ್ವರನ ಮೇಲಾಣೆ. ನಿಜವಾಗ್ಲೂ ಆ ಮಕ್ಳನ್ನ ನಾನು ಹೊಡೆದಿಲ್ಲ, ಬೈದಿಲ್ಲ. ರೌಡಿಗಳಂತೆ ದುಡ್ಡು ವಸೂಲಿ ಮಾಡ್ಬೇಡಿ. ಅಪ್ಪ ಅಮ್ಮಂಗೆ ಕೆಟ್ಟ ಹೆಸ್ರು ತರಬೇಡಿ ಅಂತ ಬುದ್ಧಿಮಾತು ಹೇಳಿ ಕಳುಹಿಸಿದ್ದೆ ಸ್ವಾಮಿ.''

ಇನ್ನೂ ಮುಂದುವರಿಯುತ್ತಿದ್ದ ಅವರ ಮಾತನ್ನು ಕತ್ತರಿಸುವಂತೆ ಹೆಡ್‌ಮಾಸ್ಟರ್ ''ನೋಡಿ, ಮಕ್ಕಳು ದೇವ್ರ ಸಮಾನ ಅಂತಾರೆ... ನಿಜ ಏನು ಅಂತ ನಿಮ್ಮ ಮಗ್ನ ಬಾಯಿಂದ್ಲೆ ಕೇಳಿ !'' ಹೆಡ್‌ಮಾಸ್ಟರ ಪ್ರತಿ ಪ್ರಶ್ನೆಗಳಿಗೂ ನುಡಿಯೊ ಆ ಘಟನೆಗೆ ಸಾಕ್ಷೀಭೂತನಾಗಿದ್ದ ಮಗನ ಉತ್ತರಗಳನ್ನು ಕೇಳಿಸಿಕೊಂಡಂತೆಲ್ಲಾ ಅಪ್ಪನ ಕರುಳಬಳ್ಳಿ ತುಂಬಾ ತುಂಬಿದ ಮಮತೆಯ ಸಂಬಂಧಗಳು ಛಿದ್ರಗೊಳ್ಳುತ್ತಾ ದಿಕ್ಕಾಪಾಲಾಗಿ ಸಿಡಿದುಹೋಗುವಂತಿದ್ದವು. ನಂಬಲಾಗದಂಥ ಕ್ರೌರ್ಯ ಅಲ್ಲಿ ಎದೆಬಿಚ್ಚಿ ನರ್ತಿಸುವಂತೆ ಕಾಣುತ್ತಿದ್ದವು... ಅಲ್ಲಿನ ಆ ನಾಲ್ಕೂ ನೇತ್ರಗಳಿಗೆ !

ಕೊನೆಯಲ್ಲಿ ಮಗನ ಮೊಗವನ್ನು, ಆ ಅವನ ಕಂಗಳನ್ನು ದಿಟ್ಟಿಸಿ ನೋಡಿದರು. ಅಲ್ಲೊಂದು ಚಕ್ರವ್ಯೂಹದಂಥ ರಚನೆ, ಗೋಜಲು ಗೋಜಲಾಗಿ ಹೆಣೆದು ಹೋದಂತೆ ಕಂಡಿತು ಅವರಿಗೆ. ಮುಂದಕ್ಕೆ ತಮ್ಮ ಕಣ್ಣೋಟವು ಕುಗ್ಗಿ ಮಾತು ಹಿಂಗಿಹೋಗಬಹುದೆಂಬ ಭಯದಲ್ಲಿ ''ಸಾರ್‌ಽ ತಪ್ಪಾಯಿತು ! ದಯವಿಟ್ಟು ಕ್ಷಮಿಸಿ'' ಎಂದು ನುಡಿದ ಅವರು, ಆ ಕೋಣೆಯ ಮೆಟ್ಟಲು ಇಳಿದು ಇಳಿಯುತ್ತಾ ಹೋಗತೊಡಗಿದರು...

ಅಪ್ಪನನ್ನು ನಿರ್ದಾಕ್ಷಿಣ್ಯವಾಗಿ ಅಪರಾಧಿಯನ್ನಾಗಿಸಿದ ನೋವು ಅವನನ್ನು ಸುಡುತ್ತಿತ್ತು. ಕರುಣೆಯಿಂದ ಅಪ್ಪನನ್ನು ನೋಡುತ್ತಿದ್ದ. ತುಂಬಿದ ಕಣ್ಣೀರಿನಲ್ಲಿ ಮಂಜು ಮಂಜಾಗಿ ಕಾಣದಂತಾಗಿ ಹೋಗುವ ಎತ್ತರ ನಿಲುವಿನ ಅಪ್ಪನನ್ನು ಇನ್ನಷ್ಟು ಕಣ್ಣಗಲಿಸಿ ಕಾಣಲು ಯತ್ನಿಸಿದಂತೆಲ್ಲಾ ಅವನಿಗೆ ಕಾಣಿಸದಂತಾಗುತ್ತಿದ್ದರು.

ಅವನಿಗೆ ಕಾಣಿಸುತ್ತಿತ್ತು; ಕೇಳಿಸುತ್ತಿತ್ತು; ಹೆಡ್ ಮಾಸ್ಟರ್ ಕೋಣೆ ತುಂಬಿದ ಗೆಲುವಿನ ಸಂಭ್ರಮದಂಥ ನಗುವಿನ ಕಲರವ... ಅದರೊಳಗಿಂದ ಹೊರಬಂದ ಪೂವಯ್ಯ ಹಾಗೂ ವಿವೇಕ. ತನ್ನ ಸತ್ವವನ್ನು ನಿರಾಕರಿಸಿ ಸುಳ್ಳಿನ ಚಕ್ರವ್ಯೂಹ ಹೆಣೆದು ಅವರಿಬ್ಬರನ್ನು ಉಳಿಸಿಕೊಂಡ ನರಹರಿ ಮಾಸ್ತರ ತಣ್ಣನೆಯ ನಿಗೂಢ ಕ್ರೌರ್ಯದ ಮರ್ಮ ರೋಹಿದಾಸನ ಗ್ರಹಿಕೆಗೆ ಸಿಗುತ್ತಿರಲಿಲ್ಲ. ಯೋಚಿಸಿದಷ್ಟೂ ಆ ಮೂಲಗಳು ಕಾಣಿಸದೆ ಸುಸ್ತಾಗಿಬಿಟ್ಟಿದ್ದ.

* * *

ಶಾಲೆ ಬಿಟ್ಟಿತ್ತು. ಶಾಲೆಯ ಗಂಟೆ ಶಬ್ದದೊಂದಿಗೆ ಭಯವೂ ಹಿಂಜರಿಕೆಯೂ ಹೆಚ್ಚಾಗುತ್ತಾ ಮನೆ ತಲುಪುವಷ್ಟರಲ್ಲಿ ರೋಹಿದಾಸ ತುಂಬಾ ಬಳಲಿಬಿಟ್ಟಿದ್ದ. ಮುಖ ಇನ್ನಷ್ಟು ಬಿಳಿಚಿಕೊಂಡಿತು. ಅಪ್ಪನನ್ನು ಹೇಗೆ ಮಾತಾಡಿಸಿ ಹೇಗೆಂದು ಕ್ಷಮೆ ಕೇಳಲಿ ಎಂಬುವ ದಾರಿಯು ಕಾಣಿಸದೆ, ಅನ್ಯಾಯವಾಗಿ ಅಪ್ಪನನ್ನು ಬಲಿಪಶು ಮಾಡಿದೆನಲ್ಲಾ ಎಂಬ ಪಾಪಪ್ರಜ್ಞೆಯ ಭಾರಕ್ಕೆ ಕುಸಿದು ಹೋದಂತೆ ಕಾಣುತ್ತಿದ್ದ. ಭಯದಲ್ಲೂ ಆತಂಕದಲ್ಲೂ ಎಷ್ಟೊಂದು ವಿಧಗಳು ಎಂಬಂತಾಗಿ ನಡುಗುತ್ತಾ ಕೆಲಸದಲ್ಲಿ ಮಗ್ನರಾದ ಅಪ್ಪನನ್ನೇ ನೋಡುತ್ತಿದ್ದ. ನನ್ನ ನಿಲುವು ಅಪ್ಪನಿಗೆ ಕಂಡಿರಬಹುದಾ ಎಂದುಕೊಂಡ.

ನನ್ನನ್ನು ನೋಡಿ ಒಳಗೆ ಎಳೆದುಕೊಂಡು ಹೋಗಿ ಹೊಡೆಯಲಿ... ಬೈಯಲಿ... ಕೈಕಾಲು ಕಟ್ಟಿ ಶಾಲೆಗೆ ಹೋಗದಂತೆ ಮಾಡಲಿ... ಒಂದೆರಡು ದಿನ ಉಪವಾಸ ಹಾಕಲಿ... ಮುಂದಕ್ಕೆ ದುಡ್ಡು ಕೊಡುವುದನ್ನು ನಿಲ್ಲಿಸಿ ಬಿಡಲಿ... ಈ ನನ್ನ ಕೋರಿಕೆ ಅಪ್ಪನಿಗೆ ಮಾತನಾಡಿದ ಹಾಗೆ ಕೇಳಿಸುವಂತಿದ್ದರೆ ಎಲ್ಲವೂ ಎಷ್ಟೊಂದು ನಿರಾಳವೆನಿಸುತ್ತಿತ್ತೆಂಬಂತೆ ನೋಡಿದ. ಅಪ್ಪನ ಎಡಗೈಯ ಮಧ್ಯ ಬೆರಳಿಗೆ ಸುತ್ತಿದ್ದ ಬಟ್ಟೆ ರಕ್ತಮಯವಾಗಿರುವುದನ್ನು ಕಂಡು ದಂಗಾಗಿ, ಅದು ಹೇಗಾಯಿತೆಂದು ಕೇಳಲಾಗದ ಸಂಕಟದಲ್ಲಿ ಆ ದಿಗ್ಭ್ರಮೆಯಲ್ಲಿ ರೋಹಿದಾಸ ಸ್ತಂಭೀಭೂತನಾಗಿ ನಿಂತುಬಿಟ್ಟ.

ಒಳಗೆ ತಟ್ಟಿಗೋಡೆ ಬದಿಯಿಂದ ಹೊರ ಇಣುಕಿದ ಅಮ್ಮ ''ಯಾಕೋ ಅಲ್ಲೆ ನಿಂತಿದ್ದಿಯಾ ಒಳಕ್ಕೆ ಬಾರೊಽ'' ಎಂದು ಕರೆಯುತ್ತಾ... ''ಸಾಲೆಯಿಂದ ಬಂದ ನಿಮ್ಮಪ್ಪ ಅರ್ಜೆಂಟು ಅನ್ನುತ್ತಾ ಅರ್ಧಕ್ಕೆ ನಿಲ್ಸಿದ್ದ ಷೂನ ಹೊಲೀತಿರೊವಾಗ ಅದ್ಯಾವ ಮಾಯ್ದಲ್ಲಿ ಆರೆ ನಿಮ್ಮಪ್ನ ಬೆರ್ಳಿಗೆ ಚುಚ್ತೊ ಗೊತ್ತಿಲ್ಲ... ರಕುತ ಜಲದಂತೆ ಹರಿಯುತ್ತಿತ್ತು. ಅಕಸ್ಮಾತ್ ನೋಡಿದ ನಾನು ಅಯ್ಯೊ ಸಿವುನೇಽ ಅನ್ತಾ ಕಾಫಿ ಪುಡಿ ಮೆತ್ತಿ ಬಟ್ಟೆ ಸುತ್ತಿದೆ...'' ಹೀಗೆ ಅಮ್ಮ ಹೇಳುತ್ತಿದ್ದಾಗ ರೋಹಿದಾಸ ತನ್ನ ಕಾಯಕದಲ್ಲಿ ತಲ್ಲೀನನಾಗಿದ್ದ ಅಪ್ಪನನ್ನು ಅಪ್ಪಿ ಸಂತೈಸುವ ಹಾಗೆ ನೋಡತೊಡಗಿದ...

ಕೆಲಸ ನಿಲ್ಲಿಸಿದ ಅಪ್ಪ ತಲೆಯೆತ್ತಿ ರೋಹಿದಾಸನನ್ನು ನೋಡಿದರು. ಹಣೆ ತುಂಬಿದ ಬೆವರ ಹನಿಗಳು ಒಂದಕ್ಕೊಂದು ತಾಗಿ, ಹರಿಯುವ ಬೆವರಿನ ಝರಿಗಳನ್ನು ಪಂಚೆಯ ತುದಿಯಿಂದ ಒರೆಸಿಕೊಂಡು, ''ಬಾರೋ ಒಳಕ್ಕೆ'' ಎಂದು ನಸುನಗುತ್ತಾ ಕರೆದ ಅಪ್ಪನ ಕರೆಯ ಸೊಲ್ಲಿನಲ್ಲಿ ಮುಖಭಾವದಲ್ಲಿ ಒಂದಿಷ್ಟು ವ್ಯಂಗ್ಯ, ಕೋಪ ಯಾವುದೂ ಕಾಣಿಸದೆ ಎಲ್ಲವೂ ಶುಭ್ರವಾಗಿ ಹೊಳೆದದ್ದನ್ನು ಕಂಡು ರೋಹಿದಾಸ ನಂಬಲಾಗದಷ್ಟು ಸುಸ್ತಾಗಿಬಿಟ್ಟಿದ್ದ! ನಿರೀಕ್ಷೆಗೂ ಮೀರಿದ ಆ ಕರೆಯಲ್ಲಿದ್ದ ಅಗಾಧ ಮಾನವೀಯ ಪ್ರಭೆಯನ್ನು ಅನುಭವಿಸುತ್ತಾ ಅದರ ಸತ್ವವನ್ನು ಜೀರ್ಣಿಸಿಕೊಳ್ಳಲಾಗದಂಥ ವಿಸ್ಮಯದಿಂದ ಅಪ್ಪನನ್ನು ತುಂಬಿಕೊಳ್ಳುತ್ತಿದ್ದ

ಮೌನ ಅಲ್ಲಿಯ ಜೀವಂತ ಮಾತಾಗಿತ್ತು. ಸೇತುವೆಯಾಗಿತ್ತು. ಕ್ಷಮೆಯೆಂಬ ಜೀವಜಲವು ಸೇತುವೆ ಮುಖೇನ ಮೌನವಾಗಿ ರೋಹಿದಾಸನ ಒಡಲಾಳವನ್ನು ತುಂಬಿದಂತಾಗುತ್ತಿದ್ದಂತೆ ಅವನ ಎರಡೂ ಕೆನ್ನೆಯನ್ನು ತುಂಬಿದ ಕಣ್ಣೀರು ಅಂಗಿಗೆ ಬಿದ್ದು ಹಿಂಗುತ್ತಾ ಎದೆಯಾಳಕ್ಕೂ ಇಳಿಯುತ್ತಿರಲು ''ಅಪ್ಪಾ ಬೆರಳು ಈಗಲೂ ನೋಯುತ್ತಿದೆಯಾ ?'' ಎಂದು ಕೇಳಿದ.

ಅರ್ಥವಾಗದ ಆಶ್ಚರ್ಯದಿಂದ ಅಮ್ಮ ರೋಹಿದಾಸನ ಕಣ್ಣೀರನ್ನು ನೋಡುತ್ತಿದ್ದರು.

ಐದ್ಹೆಜ್ಜೆಗೆ ಸಿಗುವ ಅಂಗಡಿ ಧಾಟಿ ಆರ್ಹೆಜ್ಜೆ ಉದ್ದ ಇರುವ ಮನೆಯೊಳಗೆ ಬಂದ ರೋಹಿದಾಸ, ಚೀಲವನ್ನು ಗೋಡೆಗೆ ನೇತ್ಹಾಕಿದ ನಿರಾಳತೆಯಲ್ಲೂ ಇಂದು ಮಧ್ಯಾಹ್ನದ ಘಟನೆ, ಅದರ ತೀವ್ರತೆ ಪಡೆದುಕೊಂಡ ವಿಕೃತ ನಡೆ-ನುಡಿ, ಈ ಈಗಲೂ ತನ್ನ ಸುತ್ತ ಮುತ್ತಲೂ ಹರಿದಾಡುತ್ತಿದೆಯೇನೊ ಎಂಬಂತಾಗಿ ಹೊರ ಇಣುಕುತ್ತಾ ಅಪ್ಪನನ್ನು ನೋಡುತ್ತಿದ್ದ.

ಈತನ ವರಸೆಯನ್ನು ವಿಸ್ಮಯದಿಂದ ಗಮನಿಸುತ್ತಿದ್ದ ಅಮ್ಮ, ''ಯಾಕೊ ? ಏನಾಯಿತು ?'' ಎನ್ನುವ ಕುತೂಹಲ ತುಂಬಿದ ಆತಂಕದ ಪಿಸುದನಿಯಲ್ಲಿ ಕೇಳುತ್ತಿದ್ದರು.

ಅಪ್ಪ ಒಳಬಂದಾಗ ನೇಸರನೂ ಕೆಲಸ ಮುಗಿಸಿ ಮಾಗಿದ ಹಣ್ಣಿನಂತಾಗಿ ಪಡುವಣದ ಹಸಿರು ಬಯಲಿಗೆ ಇಳಿಯುತ್ತಿದ್ದ...

ಇಳಿದು, ಕೂತ ಮಗನ ಪಕ್ಕ ಕೂತರು. ಅಪರಾಧಿ ಪ್ರಜ್ಞೆಯ ಭಾರಕ್ಕೆ ರೋಹಿದಾಸನ ಎದೆಬಡಿತವೂ ಅಪ್ಪನ ಸಾಮೀಪ್ಯದಿಂದ ಇನ್ನಷ್ಟು ಇಮ್ಮಡಿಸಿತು. ಅಪ್ಪನ ಬೆರಳುಗಳು ಅವನ ತಲೆಗೂದಲಿನಲ್ಲಿ ನಡೆಯುತ್ತಾ ಓಡಾಡಿದಂತೆಲ್ಲಾ ಒಲೆಯ ಮೇಲೆ ಟೀಗೆ ನೀರಿಟ್ಟ ಅಮ್ಮ ಅರ್ಥವಾಗದ ಬೆರಗಿನಿಂದ ಒಂದು ಕಣ್ಣು ಒಲೆಗೂ ಇನ್ನೊಂದು ಕಣ್ಣನ್ನು ಈ ಕಡೆಗೂ ಇಟ್ಟು ನೋಡುವಂತಾದರು.

ಮೆಲ್ಲನೆ ಮಾತಾಡಿದ ಅಪ್ಪ ''... ರೋಹಿದಾಸ‌ಽ ಹೆಡ್‌ಮಾಸ್ತರ ಎಲ್ಲಾ ಪ್ರಶ್ನೆಗಳಿಗೂ ನೀನು ಉತ್ರ ನೀಡುತ್ತಿದ್ದಾಗಾ ತೊದಲ್ತಾ ಇರ್ಲಿಲ್ಲ ಕಿಂಚಿತ್ತು ತಡವರಿಸ್ತಾ ಇರ್ಲಿಲ್ಲ... ಆಗಾಗ್ಗೆ ನರಹರಿ ಮಾಸ್ತರನ್ನ ನೋಡ್ತಾ ಇದ್ದೆ. ನನ್ನತ್ತ ನೋಡ್ತಾ ಇರ್ಲಿಲ್ಲ... ಅದ್ರೂ ನನ್ಗೆ ಕಾಣುತ್ತಿದ್ದವು; ನಿನ್ನ ಕಣ್ಣಲ್ಲಿದ್ದ ಆತಂಕ, ನೋವು ತುಂಬಿದಂಥ ಭಯ ಜೊತೆಗೆ ಏನನ್ನೊ ಬಚ್ಚಿಡುವಂಥ ಪ್ರಯತ್ನ. ನೋಡುತ್ತಿದ್ದೆ; ಬೆವರುತ್ತಿದ್ದ ನಿನ್ನ ಮುಖವನ್ನು. ಉಚ್ಚೆಯಿಂದ ಒದ್ದೆಯಾದ ನಿನ್ನ ಚಡ್ಡಿಯನ್ನು. ಅದರ ಅಂಚಿನಿಂದ ತೊಟ್ಟಿಕ್ಕುವ ಆ ಹನಿಗಳನ್ನು. ದಂಗಾಗಿಬಿಟ್ಟಿದ್ದೆ! ಸುಳ್ಳನ್ನು ಸತ್ಯವೆಂಬಂತೆ ಸರಾಗವಾಗಿ ನುಡಿಯುತ್ತಿದ್ದ ನಿನ್ನ ಏಕಾಗ್ರತೆಯ ಆ ಕ್ರೂರತೆಯನ್ನು ಕಂಡು !!

''...ಯಾಕೊ ನೋಡಬೇಕೆನಿಸಿ ನರಹರಿ ಮಾಸ್ತರತ್ತ ನೋಡಿದೆ. ಅವರು ನನ್ನತ್ತ ನೋಡಿದರು. ಅವರ ನೋಟವು ಎರಡು ತಿಂಗಳ ಹಿಂದೆ ನೋಡಿದ್ದ ಆ ನೋಟದ ಮುಂದುವರೆದ ಭಾಗದಂತೆ ನನಗೆ ಕಂಡಿತು...

''...ಕ್ಷಮೆ ಕೇಳಿ ನೋವು ತುಂಬಿಕೊಂಡು ಬರುವಾಗಲೂ ಆ ನೋಟವು ನನ್ನನ್ನು ಕೆಣಕಿ, ಚುಚ್ಚಿದಂತಾಗುತ್ತಿತ್ತು... ವಿಷದ ಹಾವು ಹಿಂಬಾಲಿಸಿದಂತಾಗುತ್ತಿತ್ತು. ನನ್ನ ವಿರುದ್ಧ ನಿನ್ನನ್ನು ಬಾಣವನ್ನಾಗಿ ಬಳಸಿಕೊಂಡಿರಬೌದಾ... ಎನ್ನುವ ಅನುಮಾನ ಬಂದು; ನಿನ್ನನ್ನೂ ನೆನಪಿಸಿಕೊಂಡು ಬಳಲಿದಷ್ಟು ಸುಸ್ತಾಗಿಬಿಟ್ಟಿದ್ದೆ...!

''...ಎರಡು ತಿಂಗಳ ಹಿಂದೆ ಇರಬೇಕು... ನರಹರಿ ಮಾಸ್ತರು ಅವರ ಮನೆಯತ್ರ ಸಿಕ್ಕಿದ್ದರು. ನಿನ್ನನ್ನ ಹೊಗಳಿದ್ರು. ಓದಿನಲ್ಲಿ ಹುಷಾರು ಎಂದಿದ್ರು. ಹೀಗೆ ಮಾತಾಡ್ತಾ... ಈ ಚಪ್ಲಿಯ ಪಟ್ಟಿ ಕಿತ್ತೋಗಿದೆ ತೆಗೆದುಕೊಂಡೋಗಿ ಒಲ್ಡು ಪಾಲಿಷ್ ಹಾಕಿ ನಿನ್ನ ಮಗ್ನ ಕೈಯಲ್ಲಿ ಶಾಲೆಗೆ ಕೊಟ್ಟು ಕಳುಹಿಸು ಎಂದಿದ್ರು. ಒಂದು ಕ್ಷಣ ಸುದಾರ್ಸಿಕೊಂಡು ನೀವೇ ಚಪ್ಲಿನಾ ಅಂಗ್ಡಿಗೆ ತಗೊಂಡು ಬನ್ನಿ... ಆಗ್ದೆ ಹೋದ್ರೆ ನಿಮ್ಮ ಮಗ್ನ ಕೈಲಿ ಕೊಟ್ಕಳ್ಸಿ ಸಾರ್ ಎಂದೆ. ಕೊಡ್ಲಿಯಂತಾದ ಅವ್ರ ಕಣ್ಣು ನನ್ನ ಸೀಳೊ ಹಾಗೆ ನೋಡಿತು. ಆಮೇಲೆ ಅವ್ರು ಮಾತಾಡ್ಲಿಲ್ಲ. ನಾನು ಸುಮ್ಮನಾಗಿ ಹೊರಟುಬಿಟ್ಟೆ...''

ಆತಂಕದಿಂದ ಕೇಳಿಸಿಕೊಳ್ಳುತ್ತಿದ್ದ ಅಮ್ಮ ''ಕುಡಿಯಿರಿ'' ಎಂದು ನೀಡಿದ ಗೊಡ್ಡು ಟೀಯನ್ನು ಮೂವರೂ ಕುಡಿಯುತ್ತಿದ್ದರು ಮೌನವಾಗಿ. ಟೀ ಹೀರೊ ಶಬ್ದವೂ ಮೌನದ ಮಾತಾಗಿ ಸಾಗಿರಲು... ಆ ಮೌನವನ್ನು ಮುರಿದ ಅಪ್ಪ :

''...ನಮ್ಗೆ ತಲತಲಾಂತರದ ವಿವೇಕ ಇದ್ರೂನೂ ಓದು ಬರಹದಿಂದ ಬರೊ ವಜ್ಞನ್ನೇ ಬೇರೆ! ಅದನ್ನು ಪಡ್ಕೊಳ್ಳಬೇಕಾದ್ರೆ ನಮ್ಮಂಥವ್ರು ತಾಳ್ಮೆ ಎಂಬೊ ಧೈರ್ಯದಿಂದ ತುಳಿಯೊ ಸಂದರ್ಭಗಳನ್ನು ಮುರಿಯುವ ಹಾಗೆ ಸಹಿಸಿಕೊಂಡೇ ಬಂಡೆ ಮೇಲಿನ ಚಿಗುರಾಗಬೇಕು ಕಂದಾಽ... ಏಕೆಂದ್ರೆ ನಮ್ಮಂಥ ಜಾತಿಗಳಿಗೆ ಇಲ್ಲಿಯ ಉದ್ದಗಲಕ್ಕೂ ಬಂಡೆ ಹಾಗೂ ಬಂಜರು ಭೂಮಿನೇ ನೆಲ ಇದ್ದಂಗೆ...

''... ಒಂದು ವೇಳೆ ನೀನು ಮಾಸ್ತರ ಸುಳ್ಳನ್ನ ಒಪ್ಪಿಕೊಳ್ದೆ, ನಿಜವನ್ನೆ ಸಾಧಿಸ್ತಾ ನಿಂತಿದ್ರೆ ನಾಳೆ ಏನಾಗಿರುತ್ತಿತ್ತು... ಯೋಚ್ಸು! ನಿನ್ನ ಭಯ ಹಿಗ್ಗಿ, ಅದು ನಮ್ಮೆಲ್ಲರ ಭಯನೂ ಆತಂಕವೂ ಆಗಿ; ಆಗ ಮಾಸ್ತರೂ ಶಾಲೆಯೂ...??!''

ಎಂಬುವ ದಿಗ್ಭ್ರಮೆಯಲ್ಲಿ ಮಾತು ನಿಲ್ಲಿಸಿದ ಅಪ್ಪ; ಮಗನ ಭುಜವನ್ನು ಅಮುಕಿ, ''ನಾಳೆಯಿಂದ ಶಾಲೆಗೆ ಹೋಗ್ತಿಯಲ್ಲಾ ?'' ಅವನ ಗಲ್ಲ ಹಿಡಿದು ಕೇಳಿದರು.

''ಹೂಂ ಹೋಗ್ತಿನಪ್ಪಾ. ಏಳ್ನೇ ಕ್ಲಾಸಲ್ವಾ... ಪಬ್ಲಿಕ್ ಪರೀಕ್ಷೆ ಇದೆ ! ವಿಜ್ಞಾನದ ಮೇಸ್ಟ್ರು ನನ್ನ ಮಾರ್ಕ್ಸ್ ನೋಡಿ ಆಗಾಗ ನನ್ನ ಬೆನ್ನ ತಟ್ಟಿ ಮೆಚ್ಚುಗೆಯಿಂದ ಚೆನ್ನಾಗಿ ಓದು ಎನ್ನುತ್ತಿದ್ದಾರೆ...'' ಎನ್ನುವ ಸಂಭ್ರಮದಿಂದ ಅಪ್ಪನನ್ನು ಅಮ್ಮನನ್ನು ನೋಡಿದ. ಇಬ್ಬರ ಕಣ್ಣಲ್ಲೂ ಆನಂದದ ಕಣ್ಣೀರು... ಇದನ್ನು ಕಂಡ ರೋಹಿದಾಸನ ನೇತ್ರದಲ್ಲೂ ನೀರು ತುಂಬಿಬರಲು ಅಮ್ಮ ದೀಪ ಹಚ್ಚಿ ಬೆಳಕು ಮಾಡಿದರು.

ಸಿ. ರಾಮಸ್ವಾಮಿ
ಸೌಮ್ಯಶ್ರೀ ನಿಲಯ, ಆರ್. ಸಿ. ರಸ್ತೆ, ನ್ಯೂ ಎಕ್ಸ್‌ಟೆನ್‌ಶನ್, ಮಡಿಕೇರಿ - ೫೭೧ ೨೦೧

## ಹೊರಟು ಹೋಗು

ಏಕೆ ಹೀಗೆ ಕಾಡುತ್ತೀ
ಹೋಗು ದೂರ ಹೋಗು
ಆಕಾಶದಾಚೆಗೆ ಹೋಗು
ಕಣ್ಮರೆಯಾಗು
ನನ್ನ ತಲೆಯಿಂದ, ಮರೆತುಹೋಗು
ಮರೆತುಹೋಗು
ದಿನವೂ
ನೆನಪಿನಂಗಳಕೆ ಬಂದು
ಕಳೆದುಹೋದ
ಹಳೆಯ ನೂರಾರು
ಸಿಹಿ, ಕಹಿ
ಘಟನೆಗಳನ್ನು
ಮತ್ತೆ ಮತ್ತೆ
ಕೆದಕುತ್ತಾ
ಹಿಂಸಿಸಬೇಡ
ಪ್ರಿಯ ಗೆಳೆಯ.

ಬಿಡುವಿಲ್ಲ ನನಗೆ
ಬಿಡುತ್ತಿಲ್ಲ
ಈ ಸಂಸಾರನೌಕೆ
ನಾವಿಕ ನಾನೆ
ನಡೆಸಬೇಕು ದಡ
ಸೇರಿಸಬೇಕು
ಬರಬೇಡ ಬಿಟ್ಟುಹೋಗು
ಕಾಡಬೇಡ
ಹೋಗು ಹೋಗು ಹೋಗು
ಮನಸ್ಸಿಂದ, ನೆನಪಿಂದ
ಹೊರಟುಹೋಗು



ಕಮಲಂ ಅರಸು

ಆ ಶಿವಮ್ಮ ಮುದುಕಿ ಮಗ್ಗಲಾಗ ಎಲ್ಲಾ ಪೋರಗೊಳು ನಾ ಒಲ್ಲೆ, ನೀ ಒಲ್ಲೆ ಎನವರು. ಯಾಕಂದರ ಆಕಿ ತನ್ನ ತಲಿ ಬಾಜೂ ಒಂದು ಒಡಕ ಬುಟ್ಟಿ, ಅದರಾಗ ಒಂದಿಟು ಬೂದಿ ಇಟಗೊಂಡು ಮಲಗಕ್ಕಿ, ರಾತ್ರಿ ಯಾವಾಗಂದ್ರ ಆವಾಗ ಗಂಟಲಕ ಸಾಣಿ ಹಿಡಿದು, ಕ್ಯಾಕರಿಸಿ ಉಗುಳುವಕ್ಕಿ. ಬೆರಕೀ ಹುಡುಗುರಂತ್ರೂ 'ಆಕಿ ಮಗಲಾಕ ಮಲಗಬ್ಯಾಡ್ರೆಲೆ ಆಕಿ ಬತ್ತಾಸ್ ಒಗೀತಾಳ' ಅನ್ನವರು.

# ಬಳುವಳಿ

■ ಎಸ್. ಬಿ. ಜೋಗುರ

ಆ ಊರಾಗ ದೊಡ್ಡ ಮನಿ ಗೌಡ್ರು ಅಂದ್ರ ಒಂಥರಾ ವಜನದ ಮನಿತನ. ಅದು ಹೆಸರಿಗಿ ತಕ್ಕಂಗ ದೊಡ್ಡ ಮನೀನೇ ಆಗಿತ್ತು. ನಾಕೂ ನಿಟ್ಟಿನ್ಯಾಗ ನಿಂತು ನೋಡದರ ಸುತ್ತಲೂ ಕೋಟೆ ಗೋಡೆ ಕಂಡಂಗ ಆಗೂದು. ಆ ಮನಿಗಿ ಅಜಮಾಸ ಐದು ನೂರು ವರ್ಷ ಸರದಾವ. ಕರಿಕಲ್ಲಿನ್ಯಾಗ ಬಾಳ ಜಬರದಸ್ತ ಕಟ್ಟಿದ ಮನಿ ಅದು. ಮನಿ ಗ್ವಾಡಿ ಬೇಸನೆಗೆ ದೊಡ್ಡ ಆಳ ಕೈ ಅಗಲ ಮಾಡಿ ನಿಂತರೂ ಒಂದು ಮಾರ ಇದ್ದಂಗ ಕಾಣತಿದ್ದು. ಥೇಟ್ ಹಿಂಗೇ ಇನ್ನೊಂದು ಮನಿ ಆ ಉರಾಗಿತ್ತು, ಅದು ಶೆಟ್ಟರ ಪೈಕಿ. ಹಿಂದಕ ಸಿನಿಮಾದವರು ಗೌಡರ ಮನಿ ಬಳಸಕೋಳಾಕ ಕೇಳದರ ದೊಡ್ಡ ಗೌಡ ವಿರುಪಾಕ್ಷಪ್ಪ ನಮ್ಮ ಮನಿ ನಾಟಕದವರಿಗಿ, ಸಿನೇಮದವರಿಗಿ ಕೊಡಂಗಿಲ್ಲ ಅಂದಾಗ ಅವರು ಒಂದು ವಾರದ ಮಟ್ಟಿಗಿ ಬಾಡಗಿ ಮಾಡಿ ಆ ರುದ್ರಪ್ಪ ಶೆಟ್ಟರ ಮನಿ ತಗೋಂಡಿದ್ದರು. ಗೌಡರ ಮನಿ ಒಳಗ ಹೋಗೂದು ಅಂದ್ರ ಒಂಥರ ರಾಜವಾಡಿಯೊಳಗ ಹೋದಂಗ ಆಗತಿತ್ತು. ದೊಡ್ಡ ತೊಲೆ ಬಾಗಿಲು, ಬಾಗಿಲ ಸುತ್ತಾ ತಾಮ್ರದ ಹೂವಿನ ಚಿತ್ರ, ಮ್ಯಾಲ ಎರಡೂ ಮಗ್ಗಲ ಒಂದೊಂದು ಕುದುರಿ ಮುಖ. ಬರೊಬ್ಬರಿ ಹೊಸ್ತಿಲ ನಡುವ ಒಂದು ಅಮಿ ಚಿತ್ರ. ಅದು ದಾಟಿ ನೀವು ಒಳಗ ಹೋದ್ರ ಆಜೂ ಬಾಜೂ ಎರಡೂ ಕಡಿ ಪಟಾಂಗಣ. ಅಲ್ಲಿ ಕುತಗೊಂಡು ಗೌಡ್ರು ಊರ ಪಂಚಯತಿಕಿ ಮಾಡವರು. ಹಂಗೇ ತುಸು ಮುಂದ ಹೋದ್ರ ದೊಡ್ಡದೊಂದು ಅಂಗಳ ಅಲ್ಲೆ ಎದರಾಬದರಾ ಜೋಳ ತುಂಬಲಿಕ್ಕ ಅಂತ ಎರಡು ಹಗೆ ಇದ್ದು. ಒಳಗ ಸೂತ್ತಲೂ ಗಗ್ಗರಗಟ್ಟ ಅದಕ್ಕ ಹತಕೊಂಡೇ ಸುತ್ತಾ ಹದನಾರು ಕಂಬ. ಅಂಗಳದಾಗ ನಿಂತು ಮ್ಯಾಲ ಮುಖ ಮಾಡದರ ನೀಲಿ ಮುಗಲ ನಿಚ್ಚಳವಾಗಿ ಕಾಣುತ್ತಿತ್ತು. ಪ್ರತಿ ಕಂಬದ ಮ್ಯಾಗ ಈ ಮನಿತನದಾಗ ಆಗಿಹೋದ ಹಿರೇರದು ಒಂದೊಂದು ಪೋಟೊ. ಯಾವ ಪೋಟೋದಾಗೂ ಯಾರೂ ಬರೀ ನೆತ್ತೀಲೇ ಇದ್ದವರಲ್ಲ ಎಲ್ಲರೂ ಹುರಿ ಮೀಸೆ ಬಿಟಕೊಂಡು, ರೇಷಮಿ ಪಟಕಾ ಸುತಗೊಂಡು ಬಾಳ ವೈನಾಗಿ ಕಾಣವರು.

ಇಂಥಾ ದೊಡ್ಡ ಮನಿ ಈಗ ನಾಕು ಭಾಗದಾಗ ಹಂಚಿಕಿ ಆಗಿತ್ತು. ವಿರುಪಾಕ್ಷಪ್ಪ ಗೌಡನ ನಾಕು ಮಂದಿ ಗಂಡ ಮಕ್ಕಳು. ಹಿರಿಯಾಂವ ಮಲ್ಲಪ್ಪ, ಎರಡನೆಯಂವ ರುದ್ರಪ್ಪ, ಮೂರನೆಯಂವ ಶಿವಲಿಂಗ, ನಾಕನೆಯಂವ ಶಂಕ್ರಪ್ಪ. ಮತ್ತ ಅವರಿಗೂ ತಲಿಗಿ ನಾಲ್ಕೈದು ಮಕ್ಕಳು. ಹಿಂಗಾಗಿ ಇಡೀ ದೊಡ್ಡ ಮನಿ ಯಾವಾಗಲೂ ಮಂದಿ ಮಕ್ಕಳಿಂದ ತುಂಬಿ ಗಿಜಿಗಿಜಿ ಅನಿಸುತ್ತಿತ್ತು. ದೊಡ್ಡಗೌಡ ವಿರುಪಾಕ್ಷಪ್ಪ ಇದ್ದಾಗ ಇದ್ದಂತ ವಜನ ಈಗಿಲ್ಲ. ಅಂವಾ ಹೋಗಿ ಹೆಚ್ಚೂ ಕಮ್ಮಿ ಐವತ್ತು ವರ್ಷ ಐತು. ಅವಾಗಿನ ಕಾಳ ಕಡಿ, ಮಂದಿ ಮಕ್ಕಳು, ಆಳು ಕಾಳು, ಎತ್ತು ಎಮ್ಮೆ ಈಗಿಲ್ಲ. ಯಾವಾಗ್ಯೂ ಎರಡೂ ಹಗೆ ತುಂಬಿರುತ್ತಿದ್ದು. ಈಗ ಹಾಂಗಿಲ್ಲ. ವಿರುಪಾಕ್ಷಪ್ಪನ ಎಲ್ಲಾ ಮಕ್ಕಳು ಅಪ್ಪ ಮಾಡಿಟ್ಟದ್ದನ್ನ ಒಂದೊಂದಾಗಿ ಗೊತ್ತಿಗಿ ಹಚಕೊಂತ ಬಂದರು. ಬರೀ ಅಪ್ಪನ ಹೆಸರಮ್ಯಾಲ ಒಂದಿಟು ವರ್ಷ ಹೊಟ್ಟಿ ಹೊರದರು ಆದ್ರ ಈಗ ಮನಿ ತುಂಬ ಮಕ್ಕಳು, ಎಲ್ಲರೂ ಬ್ಯಾರೆ ಆಗ್ಯಾರ, ಅವರವರ ಸಂಸಾರ ಅವರವರ ಹೆಗಲಿಗಿ. ಎಲ್ಲರಿಗೂ ಅವರ ಸಂಸಾರನೇ ವಜ್ಜಿ ಆಗಿದ್ದು, ಊರಾಸ ಮಂದಿ ''ಗೌಡನ ಮಕ್ಕಳು ನಾಕೂ ಸುಮಾರೇ ಹೊಂಟು ಎಂಥಾ ಆಸ್ತಿ, ಏನು ಕತಿ ಇವತ್ತ ಎಲ್ಲಾ ಝುಳ ಝುಳ ಮಾಡಿಟ್ಟರು'' ಅಂತ ಮಾತಾಡತಿದ್ದರು. ವಿರುಪಾಕ್ಷಪ್ಪ ಗೌಡನ ನಾಕು ಮಕ್ಕಳ ಪೈಕಿ ತುಸು ಕಲತಂವ ಅಂದ್ರ ಎರಡನೆಯಂವ ರುದ್ರಪ್ಪಗೌಡ. ಉಳಿದವರು ಸುಮ್ಮ ಅಟ್ಟೆ ಓದಾಕ, ಬರಿಯಾಕ ಬರಷ್ಟು ಕಲತವರು. ಆದರ ಯಾರೂ ಮನಿತನದ ಹೆಸರ ಉಳಿಸು ವಷ್ಟರಮಟ್ಟಿಗಿ ಬೆಳೀಲಿಲ್ಲ. ಎಲ್ಲರೂ ಅಪ್ಪ ನೆಟ್ಟ ಆಲದ ಮರಕ್ಕ ಜೋತು ಬೀಳವರೇ ಹೊಂಟ್ರು. ಇವರ ಕಿರಿಕಿರಿ, ಉಡಾಳತನಕ ವಿರುಪಾಕ್ಷಪ್ಪಗೌಡ ಉಜ್ಜಳ ಆಗಲಾರದೇ ಹಾಸಗಿ ಹಿಡದ ಅಂತ ಊರ ಮಂದಿ ಮಾತಾಡವರು.

ಹಿರಿಮಗ ಮಲ್ಲಪ್ಪಗೌಡಗ ನಾಲ್ಕು ಮಕ್ಕಳು. ಮೂರು ಗಂಡ, ಒಂದು ಹೆಣ್ಣ. ಆಕಿ ಹೆಸರ ಶಾರದಾ. ತಾವಂತೂ ಕಲೀಲಿಲ್ಲ ಎಟ್ಟೆ ಕಷ್ಟ ಆಗಲಿ ಮಕ್ಕಳಿಗಿ ಕಲಿಸೇ ತೀರೊದು ಅಂತ ಮಲ್ಲಪ್ಪ ಗೌಡ ತನ್ನ ಮೂರು ಗಂಡ ಮಕ್ಕಳಿಗಿ ಸಾಲಿಗಿ ಸೇರಸದ. ನಮ್ಮ ಮನಿತನದಾಗ ಹೆಣ್ಣಮಕ್ಕಳಿಗಿ ಎಲ್ಲೂ ಹೊರಗ ಕಳಸೇ ಇಲ್ಲ ಅನ್ನೋಂತ ಹೆಣ್ಣ ಮಗಳಿಗಿ ಸಾಲಿ ಕಲಿಸಲೇ ಇಲ್ಲ. ಇನ್ನ ಮೂರು ಗಂಡ ಮಕ್ಕಳಲ್ಲಿ ದೊಡ್ಡಂವ ಬಸವರಾಜ, ನಡುವಿನಂವ ನಾಗರಾಜ, ಕಡೀಯಂವ ಶೇಕರಪ್ಪ. ದೊಡ್ಡಂವನ ತಲಿಗಿ ಅದ್ಯಾಕೋ ಶಿಕ್ಷಣ ಹತ್ತಲಿಲ್ಲ ಹಿಂಗಾಗಿ ಅಂವಗ ಒಕ್ಕಲತನಕ್ಕ ನಿಲ್ಲಿಸಿಬಿಟ್ಟ. ನಡುವಿನಂವ ಬಿ.ಎ. ಮಟ ಕಲಿತರೂ ಒಮ್ಮೊ ಭೇಷನೆಗೆ ಪಾಸ್ ಆಗಲಿಲ್ಲ. ಹಿಂಗಾಗಿ ಮಲ್ಲಪ್ಪಗೌಡ ಅಂವಗ ಮುಂದ ಓದಸೂ ಯೋಚನೆನೇ ಬಿಟ್ಟ, ಕಡೀಯಂವ ತುಸು ಪಾಡ ಅದಾನ ಅಂವಂಗ ಹ್ಯಾಂಗರೇ ಮಾಡಿ ಓದಸಬೇಕು ಅಂತ ಗೌಡ-ಗೌಡತಿ ಕೂಡೇ ನಿರ್ಧಾರ ಮಾಡಿದ್ರು.

ಬಿಜಾಪುರ ಜಿಲ್ಲಾದಾಗ ದೇವರ ಹಿಪ್ಪರಗಿ ಅನ್ನೋದೊಂದು ಊರು. ಇತ್ಲಾಗ ತಾಲೂಕು ಅಲ್ಲ ಆತ್ಲಾಗ ಹಳ್ಳೀನೂ ಅಲ್ಲ ಎರಡರ ನಡುವ ಅನ್ನೂವಂಗ ಅದು ಇತ್ತು. ನೋಡವರ ಕಣ್ಣಿಗಿ ಊರ ಬಾಳ ಪೈನ್ ಆಗಿ ಕಂಡರೂ ಮನಿಗೊಳು ಮಾತ್ರ ದಟ್ಟಾಗಿ ಇರಲಿಲ್ಲ. ಆವಾಗ ಮಲ್ಲಪ್ಪಗೌಡನ ಮಕ್ಕಳು ಇನ್ನೂ ಬಾಳ ಸಣ್ಣವರು. ದೇವರ ಹಿಪ್ಪರಗಿ ಮಲ್ಲಯ್ಯನ ಜಾತ್ರಿ ಬಾಳ ದೊಡ್ಡದು. ಮಂದಿ ಮಕ್ಕಳು ಗಾಡಿ ಕಟಗೊಂಡ ಬಂದು ಒಂದೆರಡು ದಿನ ನಿಂತು ಜಾತ್ರಿ ಮುಗಸಿಕೊಂಡು ಹೋಗುವರು. ಮಲ್ಲಪ್ಪಗೌಡನ ಹೆಂಡತಿ ನೀಲವ್ವ ಗೌಡತಿ ತವರಮನಿ ಅಲ್ಲೇ ದೇವರ ಹಿಪ್ಪರಗಿ ಸನ್ಯಾಕ ಇರೋ ಹಂದಿಗನೂರ. ಆ ಗೌಡತಿ ಅವ್ವ ಶಿವಮ್ಮ ಸುತ್ತ ನಾಕು ಹಳ್ಳಿಗಿ ಗೂರಲು ಶಿವಮ್ಮ ಅಂತೇ ಹೆಸರಾದಕ್ಕಿ. ಅದ್ಯಾಕ ಹಂಗ ಕರೀತಾರ ಅನ್ನೋದು ಗೌಡನ ಮಕ್ಕಳಿಗಿ ಗೊತ್ತ ಇರಲಿಲ್ಲ. ಮಕ್ಕಳೆಲ್ಲರೂ ಆಕಿ ಜೋಡಿ ಬಾಳ ಹುಡುಗಾಟ ಮಾಡವರು. ''ಶಿವಮ್ಮಾಯಿ ಸೊಂಟದಾಗ ಗಂಟ ಇಟಕೊಂಡಾಳ ನೋಡ್ರೆಲೆ'' ಎಂದು ಗೌಡನ ದೊಡ್ಡ ಮಗ ಹೇಳಿದ್ದೇ ಮಗಳು ಶಾರದಾ ಸೊಂಟಕ್ಕ ಕೈ ಹಾಕಿ ಜಗ್ಗಿ ಬಿಡಕ್ಕಿ. ಒಳಗಿಂದ ಚಲ್ ಅಂತ ಚಿಲ್ಲರೆ ರೊಕ್ಕ, ಸುಣ್ಣದ ಡಬ್ಬಿ, ಅಡಕಿ ಚೂರ, ಸೇಫ್ಟಿ ಪಿನ್ ಹೊರಗ ಬೀಳೂದು.



ಆಗ ಗೌಡತಿ ''ಅಕಿಗ್ಯಾಕ ಹಂಗ ಮಾಡತೀರಿ ಅಕೇನು ಸಣ್ಣ ಹುಡುಗೇನು ?'' ಅಂದದ್ದೇ ಶಿವಮ್ಮ ನೇಟ್ ಆಗಿ ''ತಂಗಿ ನಿನ್ನ ಮಕ್ಕಳು ಬಾಳ ಅದಾವ ಅದಕ್ಕೇ ನಿಮ್ಮೂರಿಗ ನನಗ ಬರಲಾಕ ಒಲ್ಲೆ ಅನಸತೈತಿ'' ಅನ್ನಾಕಿ.

ಜಾತ್ರಿಗಿ ಬಂದ ಮಂದಿ ಮಕ್ಕಳು ಎಲ್ಲಾ ಅಂಗಳದಾಗ ಮಲಗವರು. ಗೌಡ ಗೌಡತಿ ಬಿಟ್ಟರೆ ಮಂದಿ, ಮಕ್ಕಳ ಎಲ್ಲರೂ ಅಂಗಳದಾಗೇ ಠಿಕಾಣಿ ಹಾಕವರು. ಜಾತ್ರಿ ಹೇಳಿಕೇಳಿ ಬ್ಯಾಸಾಗ್ಯಾಗೇ ಬರತ್ತಿತ್ತು. ಹಿಂಗಾಗಿ ಗುದ್ದಿನ್ಯಾಗಿನ ಹಾಂವ, ಚೇಳ, ಉಬಾರ ತಡಿಲಾರದಕ ಬೈಲಿಗಿ ಬೀಳೂವಂಗ, ಅಟ್ಟೂ ಮಂದಿ ಅಂಗಳದಾಗೇ ಮಲಗವರು. ಚಿಕಪ್ಪ ದೊಡ್ಡಪ್ಪನ ಮಕ್ಕಳು ಊರಿನಿಂದ ಬಂದ ಸಂಬಂಧಿಕರ ಮಕ್ಕಳು ಎಲ್ಲರೂ ಊಟ ಮುಗಿಸಿ ಅಂಗಳದಾಗ ಜಾಗಾ ರಿಜರ್ವ ಮಾಡವರು. ಆ ಶಿವಮ್ಮ ಮುದುಕಿ ಮಗ್ಗಲಾಗ ಎಲ್ಲ ಪೋರಗೋಳು ನಾ ಒಲ್ಲೆ, ನೀ ಒಲ್ಲೆ ಎನವರು. ಯಾಕಂದರ ಅಕಿ ತನ್ನ ತಲಿ ಬಾಜೂ ಒಂದು ಒಡಕ ಬುಟ್ಟಿ, ಅದರಾಗ ಒಂದಿಟು ಬೂದಿ ಇಟಗೊಂಡ ಮಲಗಕ್ಕಿ. ರಾತ್ರಿ ಯಾವಾಗಂದ್ರ ಅವಾಗ ಗಂಟಲಕ ಸಾಣಿ ಹಿಡಿದು, ಕ್ಯಾಕರಿಸಿ ಉಗುಳುವಕ್ಕಿ. ಬೆರಕೀ ಹುಡುಗುರಂತೂ ''ಅಕಿ ಮಗಲಾಕ ಮಲಗಬ್ಯಾಡ್ರೆಲೆ ಅಕಿ ಬತ್ತಾಸ್ ಒಗೀತಾಳ'' ಅನ್ನವರು. ಹಂಗ ಅಂದ್ರ ಏನು ಅಂತ ಸಣ್ಣ ಮಕ್ಕಳಿಗಿ ಗೊತ್ತಾಗಲಾರದೇ ''ಆಯಿ, ಆಯಿ ಬತ್ತಾಸ್ ಒಗಿ'' ಅಂತ ಕಾಡಸವರು. ಅಕಿ ನೋಡದರ ಮಲಗು ಮುಂದ ತನ್ನ ಕುಬಸಾ ತಗದು ಸೊಟ್ಟ ಮೊಲಿ ಜೋತು ಬಿಟಗೊಂಡು ಉಶ್ ! ಹುಂ... ಉಶ್ ! ಹುಂ... ಅಂಥ ಥೇಕ ಬಿಡಕ್ಕಿ. ಪಕ್ಕಕ್ಕ ಗೌಡತಿ ಕುಂತು ಒಂದು ನೋಟ್‌ಬುಕ್ ರಟ್ಟ ತಗೊಂಡು ಗಾಳಿ ಹಾಕಕ್ಕಿ. ಅಕಿ ಕೆಮ್ಮೂದು, ನರಳೊದು ನೋಡಿ ಸಣ್ಣ ಮಗ ಶೇಕಪ್ಪ ''ಯವ್ವಾ ಆಯಿಗಿ ಯಾಕ ಹಿಂಗ ಆಗತೈತಿ ?'' ಅಂತ ಕೇಳದರ ''ಅಕಿಗಿ ದಮ್ಮ ಐತೆಪಾ ಪಾಪ !'' ಅಂತ ಅವ್ವನ ಉತ್ತರಕ ಹಾಂಗಂದರ ಏನು ಅಂತ ಮತ್ತ ಕೇಳೂ ಧೈರ್ಯ ಮಾಡತಿರಲಿಲ್ಲ. ಒಣ್ಯಾಗ ಚನ್ನಪ್ಪ ಮುತ್ಯಾ ಅನ್ನಂವ ಥೇಟ್ ಈ ಶಿವಮ್ಮಾಯಿ ಹಂಗೆ ಮಾಡ್ತಾನ. ಅಂವಗೂ ಈ ದಮ್ಮ ಇದ್ದಿರಬೇಕು ಅಂತ ಆ ಹುಡುಗ ಲೆಕ್ಕ ಹಾಕದ.

ಅವತ್ತ ಒಂದು ದಿನ ಅವರಾತ್ರಿಯೊಳಗ ಶಿವಮ್ಮಾಯಿ ಕೆಮ್ಮ ಶುರು ಆಯ್ತು, ಎದಿ ಒಂದೇ ಸವನೇ ಸೊಂಯ್... ಸೊಂಯ್... ಗೊಡರ್... ಗೊಡರ್... ಅಂತಾ ಬಡಕೋತಿತ್ತು. ಮೊಸರ ಕೆಟ್ಟರ ಗುಳ್ಳಿ ಬಂದು ಜಿಡರ್ ಜಿಡರ್ ಅನ್ನೋ ಥರಾ ಅವಾಜ ಬಂದಂಗ ಕೇಳಾಕತ್ತು. ನಾಲ ಹಚ್ಚಿ ನುಗ್ಗುವಂಗ ಕೆಮ್ಮ ಶುರು ಆಯ್ತು. ಮುದುಕಿ ನೋಡಾಕ ಬಾಳ ಬೆಳ್ಳಗ ಇದ್ದಾಕಿ. ಬೆಳದಿಂಗಳಾಗ ಅಕಿ ಬೆತ್ತಲೆ ಮೈ ಮಿಂಚತ್ತಿತ್ತು. ಬೆವರ ಒಂದೇ ಸವನ ಅಡರಗಟ್ಟಿತ್ತು. ಉಶ್ ! ಉಶ್ ! ಅನ್ನೋಂತ ಬಾಳ ಹೊತ್ತ ಕುಂತಳು. ನಸುಕಿನ್ಯಾಗ ಮುಲ್ಲಾ ಒದರೋ ಮಟ ಅಕಿ ಪಟ್ಟ ತ್ರಾಸ ನೊಡಿ ಗೌಡನ ಸಣ್ಣ ಮಗ ಶೇಕಪ್ಪ ಈ ದಮ್ಮ ಅನ್ನೊದು ಇಟ್ಟು ಕೆಟ್ಟ ಇರತೈತಿ ಅಂತ ಅವತ್ತೇ ಅಂವಂಗ ಗೊತ್ತಾಗಿತ್ತು. ''ಯವ್ವಾ ಶಿವಮ್ಮಾಯಿ ರಾತ್ರಿ ಬೆಳತನ ಮಲಗೇ ಇಲ್ಲ'' ಅಂತ ಅವ್ವನ ಮುಂದ ಹೇಳದ. ''ಹೌದಪಾ ಶೇಕು ಅದು ಬಾಳ ತ್ರಾಸ ಮಾಡತೈತಿ'' ಅಂತ ಗೌಡತಿ ದನಿ ಕೂಡಿಸಿದ್ದಳು. ಶಿವಮ್ಮಾಯಿಗಿ ಮಂದಿ ಯಾಕ 'ಗೂರಲ ಮುದುಕಿ' ಅಂತ ಕರೀತಾರ ಅನ್ನೂದು ಅಂವಗ ಈಗ ಗೊತ್ತಾಗಿತ್ತು. ಅವತ್ತ ರಾತ್ರಿ ಬೆಳತನ ಶಿವಮ್ಮನನ್ನು ಆ ದಮ್ಮು ಹಿಂಡಿತ್ತು, ಮೆತ್ತಗ ಮಾಡಿತ್ತು. ಈಗೀಗ ಅದು ಯಾವಾಗಂದ್ರ ಅವಾಗ ದುತ್ತನೆ ಸೆಟೆದು ನಿಂತು ಬಿಡತೈತಿ. ಹಿಂಗಾಗಿ ಶಿವಮ್ಮಗ ಯಾವಾಗ ಮ್ಯಾಲ ಹೋದೇನು ಅನ್ನುವಂಗ ಆಗತಿತ್ತು.

* * *

ಮಲ್ಲಪ್ಪಗೌಡ ತನ್ನ ಮಗಳಿಗಿ ಮಹಾರಾಷ್ಟ್ರ ಗಡಿಯೊಳಗ ಬರೋ ಅಕ್ಕಲಕೋಟಿಗೆ ಕೊಟ್ಟು ಮದುವಿ ಮಾಡಿದ್ದ. ಅಳ್ಯಾ ರೇಡಿಯೋ ಅಂಗಡಿ ಇಟ್ಕೋಂಡಿದ್ದ. ಅವಾಗಿನ್ನೂ ವರದಕ್ಷಿಣೆ ಹಾವಳಿ ಅಟ್ಟಿರಲಿಲ್ಲ. ಹಿಂಗಾಗಿ ಗೌಡಗ ಅಟ್ಟು ಭಾರ ಅನಸಲಿಲ್ಲ. ಈಗ ಶೇಕಪ್ಪ ಬಿ. ಎ. ಮುಗಿಸಿ ಎಂ. ಎ. ಮಾಡಲಿಕ್ಕ ಧಾರವಾಡಕ್ಕ ಹೊಂಟು ನಿಂತಾನ. ಗೌಡ ಯಾರಾರಿಗೋ ಕೈಕಾಲ ಹಿಡದು, ಯಪ್ಪಾ, ಯಣ್ಣಾ ಅಂದು ಎರಡು ಸಾವಿರ ರೂಪಾಯಿ ಇಸಗೊಂಡು ಬಂದು ಕೊಟ್ಟಿದ್ದ. ''ಅವರಂತೂ ಒದಲಿಲ್ಲ ನೀಅರೇ ಚಲೋತನೆಗೆ ಒದು'' ಅಂತ ಹೇಳಿದ್ದ. ಶೇಕಪ್ಪ ಹಂಗೇ ಅವಾಗಾವಾಗ ರೊಕ್ಕ ಕಳಸು ಅಂತ ಪತ್ರ ಬರೀತಿದ್ದ. ಶೇಕಪ್ಪನ ಪತ್ರ ಬಂದರೆ ಸಾಕು ಮಲ್ಲಪ್ಪ ಗೌಡನ ಎದಿ ಧಸಕ್ ಅಂತಿತ್ತು. ಯಾಕಂದ್ರ ಹಿಂದ ಏನೂ ಇಲ್ಲ ಎಲ್ಲರೂ ಇರೋ ಜಮೀನ ಮ್ಯಾಲೇ ಬದಕವರು. ಈಗ ಇದ್ದ ಜಮೀನೂ ಬಾಳ ಕಡಿಮಿ. ಅಂತದರಾಗ ಆ ವರ್ಷ ಬರಗಾಲ ಬ್ಯಾರೆ ಹಿಂಗಾಗಿ ಎಲ್ಲೂ ಸಾಲಾನೂ ಹುಟ್ಟಂಗಿಲ್ಲ. ಬಾಳ ಇಸಮಿನ ಮನುಷ್ಯಾ, ಸಂಬಂಧಿಗಳ ಮುಂದ ಕೈ ಚಾಚ ಬಾರದು ಅನ್ನಂವ ಹಿಂಗಾಗಿ ನಿರ್ವಾಹವಿಲ್ಲದೇ ಹೊಲದಾಗಿನ ಎರಡು ದೊಡ್ಡ ಬೇವಿನ ಮರ ನೆಲ ಕಂಡು.

ಅಕ್ಟೋಬರ್ ಸೂಟಿಗೆಂದು ಶೇಕಪ್ಪ ಊರಿಗಿ ಬಂದ. ಆರೇ ತಿಂಗಳಲ್ಲಿ ಅವ್ವ ಬಾಳ ಸಣ್ಣ ಆದಂಗೆ ಕಂಡಳು. ಅಪ್ಪನೂ ಈಗ ಮೊದಲಿನಂಗ ಇಲ್ಲ. ಅಪ್ಪನ ಕೈ ಈಗ ಕಟ್ಟಿ ಆದಂಗ ಆಗಿ ಮೊದಲಿನಂಗ ಮನ್ಯಾಗ ಹಣ್ಣ ಹಂಪಲ, ಮತ್ತೊಂದು ಮಗದೊಂದು ತಂದು ತುಂಬಂಗಿಲ್ಲ. ತಾ ಕಲಿಯೂ ಖರ್ಚ. ಬ್ಯಾರೆ ಹಿಂಗಾಗಿ ಶೇಕಪ್ಪಗ ಒಳಗೊಳಗೇ ಚಿಂತಿ ಶುರು ಆಯ್ತು. ಆದ್ರ ಅವ್ವ ನೋಡದರ ಬರೀ ತನ್ನ ಬಗ್ಗೆಯೇ ಕೇಳತಾಳ ''ಅಲ್ಲೆಲ್ಲಾ ಎಂಥಾ ಊಟ ಹಾಕ್ತಾರೋ ಏನೋ ? ಹೊಟ್ಟಿ ಅನೂಲಿ ಮಾಡಕೊಂಡು ಕಲಿಬ್ಯಾಡಪಾ, ಹಸಿವಾದ್ರ ಹೊಟೆಲನ್ಯಾಗ ತಿಂತಾ ಇರು. ರೊಕ್ಕ ಇಲ್ಲಂತ ಖಾಳಜಿ ಮಾಡಬ್ಯಾಡ. ನಿಮ್ಮಪ್ಪ ಏನರೇ ಮಾಡಿ ಕಳಸ್ತಾರ'' ಅನ್ನೋಂತ ''ನಿನ್ನ ಸಲುವಾಗಿ ಇವತ್ತ ಹುಗ್ಗಿ ಮಾಡತೀನಿ'' ಅನ್ನೋಂತ ತನ್ನ ಕೆಲಸಾ ಶುರು ಮಾಡದಳು. ಈಗ ಮೊದಲಿನಂಗ ಮನ್ಯಾಗ ಮಂದಿ ಮಕ್ಕಳು ಅಷ್ಟಾಗಿ ಇಲ್ಲ. ಜಾತ್ರೆ ಟೈಮ್‌ದಾಗೂ ಮೊದಲಿನಂಗ ಗಾಡಿ ಕಟ್ಗೊಂಡು ಬರುವಂಗಿಲ್ಲ. ''ನಗಾಗ ಎಲ್ಲಾ ನೆಂಟ್ರು ಅಳಾಗ ಯಾರೂ ಇಲ್ಲ'' ಅನ್ನಂಗ ಆಗಿತ್ತು ಈ ಗೌಡರ ಮನಿತನ.

ಗೌಡತಿ ಬೆಳಿಗ್ಗಿಂದಾ ಕೆಮ್ಮಕೋಂತೇ ಅಡಗಿ ಮುಗಿಸಿದ್ದಳು. ಆವಾಗಾವಾಗ ಅಲ್ಲೇ ಒಲಿ ಮುಂದ ಉಗಳತಿದ್ದಳು. ಪಾಪ ! ಅವ್ವ ಬಾಳ ಸೋತಾಳ ಅನ್ನೋಂತ ರಾತ್ರಿ ಅವ್ವ ಮಲಗೂ ಖೋಲ್ಯಾಗ ಶೇಕಪ್ಪಾ ಸವಕಾಶ ಬಂದ. ''ಯಾರು ? ಶೇಕೂ ಅನೂ, ಯಾಕಪಾ ನಿದ್ದಿ ಬರಲಿಲ್ಲನೂ ?'' ಅಂತ ಗೌಡತಿ ಕೇಳಿದಳು. ''ನಿಂಗೇನು ಅರಾಮ ಇಲ್ಲನವಾ ಎಲ್ಲೆರೆ ದವಾಖಾನಿಗಿ ತೋರಸ ಬೇಕಿಲ್ಲೋ'' ಅಂದಾಗ ''ಏನಿಲಪಾ ತುಸು ಅಶಕ್ತ ಆದಂಗ ಆಗೈತಿ ಅದಕ್ಕೆ ಹಿಂಗ'' ಅಂತ ಕೆಮ್ಮತಾನೇ ಇದ್ದಳು. ರಾತ್ರಿ ಪ್ರಶಾಂತವಾಗಿತ್ತು. ಮಲ್ಲಪ್ಪಗೌಡ ಒಳಗ ಧಗಿ ಅಂತ ಹೇಳಿ ಹೊರಗಡೆ ಮಲಗಿದ್ದ. ಅವ್ವನ ಕಾಲ ಒತ್ತಕೊಂತ ಶೇಕಪ್ಪ ಅಲ್ಲೇ ನಿದ್ದೆ ಹೋದ. ಮಧ್ಯರಾತ್ರಿಯಲ್ಲಿ ಒಂದು ಬಗೆಯ ಗೂರಲು ಸದ್ದು. ಅದೇ ಹಳೆಯ ಸದ್ದು! ಶಿವಮ್ಮಾಯಿದು. ಈಗ ಅವ್ವನ ಎದೆಯನ್ನು ಹಿಂಡ್ತಿದೆ. ಕನಸಿರಬಹುದೇ ಎಂದು ಶೇಕಪ್ಪ ಪಕ್ಕನೇ ಕಣ್ಣು ಬಿಟ್ಟ. ಅವ್ವ ತುಂಬಾ ತ್ರಾಸ್‌ನಿಂದ ಉಸಿರು ಬಿಡತಿದ್ದಳು. ಅದೇ ಹಳೆಯ ರಾಗ ಸೊಂಯ್... ಸೊಂಯ್... ಗೊಡರ್... ಗೊಡರ್... ಅನ್ನೋ ಸದ್ದು. ಒಂದು ಬಾರಿ ಶೇಕಪ್ಪ ಬೆವೆತು ಹೋದ. ತಟ್ಟನೇ ಶಿವಮ್ಮಾಯಿ ನೆನಪಾದಳು. ಆಕೆ ಮರಣ ಹೊಂದಿ ಅದಾಗಲೇ ಹತ್ತು ವರ್ಷಗಳಾಗಿದ್ದವು. ಮನದಲ್ಲಿ ಅವಳನ್ನು ಶಪಿಸತೊಡಗಿದ. ನಿನ್ನ ಮಗಳಿಗೆ ಬಳುವಳಿಯಾಗಿ ಈ ಗೂರಲು ಬಿಟ್ಟುಹೊದೆಯಾ, ಎಂದು ಮನದಲ್ಲೇ ಜರಿದಿದ್ದ. ಉಸಿರಾಡಲು ಚಟಪಡಿಸುತ್ತಿದ್ದ ಅವ್ವನ್ನು ಮೆಲ್ಲಗೆ ಮುಟ್ಟಿದ ಕೈ ಹಸಿಯಾಯಿತು. ಹೌದು ಇದು ಅದೇ, ಆ

ದರಿದ್ರ ದಮ್ಮು ನನ್ನಮ್ಮನಿಗೆ ಅಂಟಕೊಬೇಕಿತ್ತಾ, ಎಂದು ತುಂಬಾ ನೊಂದು ಕೊಂಡ. ಅವ್ವ ಯಾಕ ತನಗ ಆ ಖೋಲ್ಯಾಗ ಮಲಗಬ್ಯಾಡ ಅಂದಳು ಅನ್ನೂದು ಈಗ ಅಂವಗ ಗೊತ್ತಾಯ್ತು. ಬೆಳಿಗ್ಗೆ ಎದ್ದು ಗೌಡತಿ ಕೆಮ್ಮಕೋಂತ ಒತ್ತಲಕ ಪುಟು ಹಾಕುವಾಗ ಶೇಕಪ್ಪ "ಇದೇನವ ಈ ದಮ್ಮ ನಿನಗ ಗಂಟ ಬಿತ್ತನೂ" "ಹೌದು ನೋಡಪಾ ಈಗೀಗ ಶುರು ಆಗ್ಯೆತಿ ಖೋಡಿ, ಬಾಳ ತ್ರಾಸ ಮಾಡತೈತಿ ಅಪಾ" ಅಂದಾಗ ಶೇಕಪ್ಪನ ಕಣ್ಣಾಗ ನೀರು ತುಂಬಿತ್ತು. ಅದರ ಜೋಡಿ ಹತಾಶತನನೂ ಇತ್ತು. ಮನ್ಯಾಗ ಗೌಡತಿ ಜೋಡಿ ಕೆಲಸಾ ಮಾಡಲಿಕ್ಕ ಮತ್ತ ಮತ್ತ ಯಾರೂ ಇಲ್ಲ, ಅಕಿನೇ ಪೇಚಾಡಬೇಕು. ಒಕ್ಕಲುತನದ ಮನಿತನ ಬ್ಯಾರೆ ನಸುಕಿನ್ಯಾಗ ಎದ್ದು ರೊಟ್ಟಿ ತಟ್ಟೂದು ಬಿಟ್ಟಿದ್ದಲ್ಲ. ಶೇಕಪ್ಪ ಸೂಟಿ ಮುಗಸಿ ಹೋಗಾಗ "ನೋಡಪಾ ನಾವೆಲ್ಲಾ ಹನ್ನೊಂದು ತಾಸ ಹೋಗಿ ಇನ್ನೊಂದು ತಾಸ ಆಟ್ಟೆ. ನೀ ಏನೂ ತಲಿ ಕೆಡಸಕೋಬ್ಯಾಡ ಈ ಹಾಳ ದಮ್ಮು ನನ್ನ ಜನಮಕ್ಕ ಅಂಟಿದ್ದು. ನೀ ಅದೇ ಗೇನಸಗೋಂತ ಕೂಡಬ್ಯಾಡ ಎಲ್ಲಾ ತಾನೇ ಚುಲೋ ಆಗತೈತಿ" ಅಂತ ಹೇಳಿ ಶೇಕಪ್ಪನ ಧೈರ್ಯ ತುಂಬಿ ಬೀಳ್ಕೊಟ್ಟಿದ್ದಳು.

ಶೇಕಪ್ಪ ತಾಯಿ ಮ್ಯಾಲ ಬಾಳ ಜೀಂವ ಇದ್ದಂವ. ದಿನ್ನಾ ಹಾಸ್ಟೆಲ್‌ದಾಗ ಮಲಗೂ ಮುಂದ ಅವ್ವನ ಸ್ಥಿತಿ ಹ್ಯಾಂಗ ಐತೋ ಏನೋ, ಅಂತ ಯೋಚ್ನೆ ಮಾಡಂವ. ಅವಾಗ ಈಗಿನಂಗ ಮೊಬೈಲ್ ಬಂದಿರಲಿಲ್ಲ ಪತ್ರ ಬರದರ ಅದಕ್ಕ ಪರತ್ ಉತ್ತರ ಬರಬೇಕಾದರ ಒಂದು ವಾರ ಹೋಗೂದು. ಶೇಕಪ್ಪ ಕಲಿಯೋ ಹುಡುಗ. ಅಂವಂಗ ತಮ್ಮ ಗೋಳಿನ ಕಥಿ ಎಲ್ಲಾ ಬರಿಯೂದು ಬ್ಯಾಡ ಅಂತ ಹೇಳಿ ಎಲ್ಲಾ ಪತ್ತರದಾಗೂ "ಅವ್ವ ಅಪ್ಪ ಆರಾಮದಿಂದ ಇದ್ದಾರ" ಅನ್ನೋ ಸಾಲೇ ಇರತಿತ್ತು. ಏನು ಮಾಡಲಿಕ್ಕ ಆಗತೈತಿ. ಜಡ್ಡು ಜಾಪತ್ರಿ ಯಾರಿಗೂ ಬಿಟ್ಟಿದ್ದಲ್ಲ ಅಂದ್ಕೋಂಡು ಮನಸ ಕಲ್ಲ ಮಾಡ್ಕೊಂಡು ಓದತಿದ್ದ. ಮೊದಲ ವರ್ಷ ಮುಗೀತು ಸೂಟಿ ಬಿಟ್ಟದ್ದೇ ಸೀದಾ ಊರಿಗಿ ಬಂದ. ಅವ್ವ ಈಗ ಮತ್ತೂ ಮೆತ್ತಗಾಗಿದ್ದಳು. ಅದಕ್ಕ ಕಾರಣ ಗೊತ್ತಿತ್ತು. ಆದರು ಏನೂ ಮಾಡೂವಂಗಿರಲಿಲ್ಲ. ಶೇಕಪ್ಪ ಅವತ್ತೊಂದಿನ ಅವ್ವನ ಬಿಜಾಪೂರಕ್ಕ ಕರಕೊಂಡು ಹೋಗಿ ಕುಲಕರ್ಣಿ ಡಾಕ್ಟರಿಗೆ ತೋರಸಿಕೊಂಡು ಬರತೀನಿ ಅಂತ ಹೇಳಿ ಹೊಂಟ. ಮಲ್ಲಪ್ಪಗೌಡಗ ಈ ಜಡ್ಡ ಬಾಳ ಖೋಡಿ ಇದಕ್ಕ ಎಟ್ಟು ತೋರಸದ್ರು ಅಟ್ಟೇ ಅಂತ ಗೊತ್ತಿತ್ತು. ಆದ್ರೂ ಒಂದು ಸಾವಿರ ರೂಪಾಯಿ ಹೊಂದಿಸಿ ಕೊಟ್ಟ. ಮನಿಯಿಂದ ಬಸಸ್ಟ್ಯಾಂಡ ಮಟ ಹೋಗೂತನ ಊರಾನ ಮಂದಿ ಎಲ್ಲರೂ ಗೌಡತಿಗೆ "ಯಾಕ್ರಿ ಯವ್ವಾ ಏನಾಗೈತಿ? ಬಾಳ ಸೊರಿಗೀರಲ್ಲರಿ" ಅನ್ನವರೇ. ಗೌಡತಿ 'ತುಸು ಆರಾಮಿಲ್ಲ' ಅಂತ ಸರಳಾಗಿ ಉತ್ತರಿಸಿ ನಡೆವಳು.



ದವಾಖಾನೆ ಮುಂದ ದೊಡ್ಡದೊಂದು ಕ್ಯೂ. ಚೀಟಿ ಮಾಡಿಸಿ ಶೇಕಪ್ಪ ಕ್ಯೂದಲ್ಲಿ ನಿಂತ. "ಯವ್ವಾ ನೀ ಅಲ್ಲೆ ಕೂಡು ಅಮ್ಯಾಗ ಬರೂವಂತಿ" ಅಂತ ಹೇಳಿ ತಾ ಪಾಳಿಯೊಳಗ ನಿಂತಕೊಂಡ. ಗೌಡತಿ ಒಳೊಳಗೆ ಮಗಾ ಆಟ್ಟೊತ್ತು ನಿಲ್ಲೊದನ್ನು ನೋಡಿ ಮರಗಾಕತ್ತಳು. ಅಲ್ಲೂ ಕೆಲ ಮಂದಿ ವಶೀಲಿಬಾಜಿ ಮಾಡಿ ನಡುವೇ ಬಂದು ಲಗೂನೇ ತೋರಿಸಿಕೊಂಡು ಹೋದರು. ಮುಂಜಾನೆದ್ದು ಬರೀ ಒಂದಿಟು ಚಾ ಕುಡದು ತಾಯಿ ಮಗ ಮನಿ ಬಿಟ್ಟವರು ಒಂಬತ್ತಾಸಾದರೂ ಇನ್ನೂ ಇವರ ಪಾಳಿ ಬರಲಿಲ್ಲ "ಈ ಡಾಕ್ಟ್ರು ಉಳಿದವರಂಗ ಅಲ್ಲ ದಿನಕ್ಕ ಇಷ್ಟೇ ಪೇಷೆಂಟ್ ನೋಡತಾನ. ಗಡಿಬಿಡಿ ಮಾಡೂದಿಲ್ಲ" ಅಂತ ಕ್ಯೂ ನಿಂತವರು ಮಾತಾಡತಿದ್ದರು. ಗೌಡತಿ ಕುಳಿತಲ್ಲಿಂದಲೆ ಮಗನಿಗೆ ಕೈ ಮಾಡಿ ಹೋಗಿ 'ಊಟ ಮಾಡಿ ಬಾ' ಅಂತಿದ್ದಳು. ಮಗ ಒಂದು ದಿನ ಊಟ ಮಾಡದಿದ್ದರೆ ಏನೂ ಆಗಲ್ಲ ಎಂದು ಮನಸನ್ನು ಗಟ್ಟಿ ಮಾಡಿಕೊಂಡು ನಿಂತಿದ್ದ. ಅವರ ಪಾಳಿ ಬರುವ ಹೊತ್ತಿಗೆ ಸಂಜೆ ಆಗಾಗಿತ್ತು. "ನಿಮ್ಮ ಮನೆಯಲ್ಲಿ ಈ ಮೊದಲು ಇದು ಯಾರಿಗಿತ್ತು?" ಅಂದಾಗ ಶೇಕಪ್ಪ "ಇವರಮ್ಮನಿಗೆ" ಎಂದು ಬಾಯಿಬಿಟ್ಟಿದ್ದ. "ಇದು ಅನುವಂಶೀಯತೆಯಿಂದಲೂ ಬರುತ್ತದೆ. ಹಾಗಾಗೇ ಇವರಿಗಿ ಬಂದಿದ್ದು. ನೀವು ಧೂಳಲ್ಲಿ ಇರಬಾರದು, ಹೊಗೆಯಲ್ಲಿ ಕೆಲಸ ಮಾಡಬಾರದು, ಎಣ್ಣೆ, ಮಸಾಲೆ ತಿನಬಾರದು, ಹೊಲದಲ್ಲಿ ಕಠಿಣ ಕೆಲಸ ಮಾಡಬಾರದು" ಎಂದೆಲ್ಲಾ ಡಾಕ್ಟ್ರು ಗೌಡತಿಗೆ ಸಾಧ್ಯವಾಗದಿರುವ ಸಲಹೆಗಳನ್ನು ಕೊಟ್ಟರು. ಕೆಲ ಗುಳಿಗಿ, ಔಷಧಿಯನ್ನು ಕೊಟ್ಟು "ನೀರು ಹೆಚ್ಚು ಕುಡೀರಿ" ಅನ್ನೋ ಮಾತನ್ನು ಹೇಳಿದರು. ಗೌಡತಿಗೆ ಈ ರೋಗ ಗುಳಿಗಿ, ಇಂಜಕ್ಷನ್‌ನಿಂದ ಗುಣ ಆಗಲ್ಲ ಅನ್ನೂದು ಗೊತ್ತಿತ್ತು. ಮಗಾ ಬಾಳ ಹೇಳದ ಅನ್ನೊ ಕಾರಣಕ್ಕ ಆಕಿ ಬಂದಿದ್ದಳು...

* * *

ಅಂದು ರಾತ್ರಿ ಶೇಕಪ್ಪ ಬ್ಯಾಸಗಿ ಅನ್ನೋ ಕಾರಣಕ್ಕ ಮ್ಯಾಳಗಿಮ್ಯಾಲ ಮಲಗಿದ್ದ. ಅವನ ಜೋಡಿ ಅವರ ಚಿಕ್ಕಪ್ಪನ ಮಗಾನೂ ಇದ್ದ. ಧಾರವಾಡ ಯುನಿವರ್ಸಿಟಿ, ಹಾಸ್ಟೆಲ್ ಬಗ್ಗೆ, ಗೆಳೆಯರ ಬಗ್ಗೆ ಮಾತಾಡುತ್ತಲೇ ಅವನು ಮುಗಿಲ ಮ್ಯಾಲ ಕಣ್ಣ ಬಿಟ್ಟ. ಅಲ್ಲಿ ನಕ್ಷತ್ರಗಳು ಶುಭ್ರವಾಗಿ ಹೊಳೆಯುತ್ತಿದ್ದು. ಊರ ಹೊರಗಿನ ಬಸವಣ್ಣನ ಗುಡಿಯಲ್ಲಿಯ ಭಜನಾ ಪದ ಗರಿಗರಿಯಾಗಿ ತೇಲಿ ಬರುತ್ತಿತ್ತು. ಕುಂಬಿಯ ಮೇಲೆ ಬೆಕ್ಕುಗಳ ಕೂಗಾಟ, ಪಕ್ಕದ ಮನೆಯ ಮಾಳಿಗೆಯಲ್ಲಿ ಹಾಸಿಗೆಗಳು ಸದ್ದಾಗುತ್ತಿವೆ, ಯಾರೋ ನೀರನ್ನು ಬಾಯಿಗೆ ಹಾಕಿಕೊಂಡು ಮುಕ್ಕಳಿಸುತ್ತಿದ್ದಾರೆ. ಶೇಕಪ್ಪ ತನ್ನ ಕೌದಿಯನ್ನು ಮುಖಕ್ಕೆ ಮುಸುಕು ಹಾಕಿಕೊಂಡ. ಎಲ್ಲೋ ಒಂದೆಡೆ ಅವನೆದೆಯ ಮೂಲೆಯಲ್ಲಿ ಸಣ್ಣದಾಗಿ ಸೊಂಯ್... ಸೊಂಯ್... ಎನ್ನುವ ಅದೇ ಗೂರಲು ನಾದ. "ನಿಮ್ಮನೆಯಲ್ಲಿ ಇದು ಯಾರಿಗಿತ್ತು?" ಎಂದು ಕುಲಕರ್ಣಿ ಡಾಕ್ಟ್ರು ಕೇಳಿದ ಪ್ರಶ್ನೆ ನೆನಪಾಯಿತು. ಆ ತಣ್ಣನೆಯ ಗಾಳಿಯ ಮಧ್ಯೆಯೂ ಅವನು ಒದ್ದೆಯಾಗಿದ್ದ, ಮುದ್ದೆಯಾಗಿದ್ದ

* * *

ನಲವತ್ತು ವರುಷಗಳು ಸರಿದವು. ಶೇಕಪ್ಪನಿಗೆ ಮುಂಗಡವಾಗಿಯೇ ಚಾಳೀಸ್ ಬಂದಾಗಿತ್ತು. ಮದುವೆಯಾಗಿ ಎರಡು ಮಕ್ಕಳು. ಒಂದು ಗಂಡು ಒಂದು ಹೆಣ್ಣು. ಶೇಕಪ್ಪನ ಅವ್ವ ಅಪ್ಪ ಇಬ್ಬರೂ ಒಳಗಿನ ಕೋಲಿಯ ಗ್ವಾಡಿ ಮ್ಯಾಲ ಭಾರತ ಫೋಟೋ ಸ್ಟುಡಿಯೋ ಫ್ರೇಮ್‌ದಾಗ ಫಿಕ್ಸ್ ಆಗಿದ್ದರು. ಹಿಂದಿನ ಅಮವಾಸ್ಯೆಗೆ ಹಾಕಿದ ಸೇವಂತಿ ಹೂವಿನ ಮಾಲಿ ಬಾಡಿ ಉದರಾಕತ್ತಿತ್ತು. ಶೇಕಪ್ಪ ಮಗನಿಗಿ ರಮೇಶ ಅಂತ ಹೆಸರಿಟ್ಟು, ಮಗಳಿಗಿ ಅವನ ಅವ್ವನ ಹೆಸರೇ ಇಟ್ಟಿದ್ದ. ಮಗಳು ಈಗ ಎರಡನೆತ್ತೆದಾಗ ಇದ್ದರ ಮಗಾ ಇನ್ನೂ ಈಗ ಬಿನ್ನೆತ್ತೆದಾಗ ಇದ್ದ. ದೊಡ್ಡ ಮನಿ ಮೊದಲ ಬರೇ ನಾಕು ಮಂದ್ಯಾಗ ಹಂಚಿಕಿ ಆಗಿತ್ತು. ಈಗ ಹಂಗಲ್ಲ. ಹದಿನಾರು ಮಂದಿ ಅಣ್ಣ ತಮ್ಮಂದಿರ ನಡುವ ಅದು ಪಾಲ ಕಂಡಿತ್ತು. ಹ್ಯಾಂಗ ಬೇಕು ಹಂಗ ನಡುವ ಗ್ವಾಡಿ ಎದ್ದಿದ್ದು. ಒಂದಿಬ್ಬರು ತಗುಡು ಜಡದು ಭಾಗ ಮಾಡಿ ಕೊಂಡಿದ್ದರು. ಅಂದದ ಅರಮನಿ ಯಂಗ ಇದ್ದ ಮನಿ ಅಂದ ಕಳಕೊಂಡು ಕಳಗೇಡಿಯಾಗಿತ್ತು. ಶೇಕಪ್ಪ ಕನ್ನಡ ಶಾಲಿ ಮಾಸ್ತರಕಿ ಮಾಡತಿದ್ದ. ಅಲ್ಲೇ ಹಿಪ್ಪರಗಿ ಮಗ್ಗಲಾಗ ಕನ್ನೊಳ್ಳಿ ಅನ್ನೋ ಊರಾಗ ನೌಕರಿ. ಸ್ವಲ್ಪ ಇದ್ದಿದ್ದರಾಗ ಅಂವಂದೇ ಸಂಸಾರ ಗಾಂವಿತ್ತು. ಆದರ ಖೋಡಿ ದಮ್ಮ ವರ್ಷದಿಂದ ವರ್ಷಕ್ಕ ಹೆಚ್ಚಾಗತಿತ್ತು. ವಾರದಾಗ ಎರಡು ಮೂರು ಸಾರಿ ಅವನ ಹೆಂಡತಿ ರಾತ್ರಿ ಬಿಸಿ ನೀರ ಶಾಕ ಕೊಡೂದು ಇದ್ದೇ ಇತ್ತು. ಅವತ್ತೊಂದು ದಿನ ಮಳಿ ಜೋರ ಬಂತು. ತಿಳಿ ಇದ್ದ ವಾತಾವರಣ ಇದ್ದಕ್ಕಿದ್ದಂಗ ಗಟ್ಯಾಗಿ ತಂಪಾಗಿತ್ತು. ಎಲ್ಲರೂ ಒಳಗಿನ ಖೋಲ್ಯಾಗೇ ಮಲಗವರು. ಟೈಮ್ ರಾತ್ರಿ ಬಾರಾ ಆಗಿರಬಹುದು, ಮಲಗಿ ಒಂದು ಜೊಂಪು ನಿದ್ದಿ ಆಗಿತ್ತು. 'ಸೊಂಯ್... ಸೊಂಯ್... ಗೊಡರ್... ಗೊಡರ್' ಅನ್ನೋ ಆವಾಜ್ ಶೇಕಪ್ಪನ ಕಣ್ಣ ತೆರಸಿತ್ತು. ಸವಕಾಶ ಎದ್ದು ಕುಂತು ಮುಖಕ್ಕೆ ಬ್ಯಾಟರಿ ಹಿಡದ. ಮಗಾ ರಮೇಶ ಬಾಯಿಯಿಂದ್ಲೇ ಉಸಿರಾಡತಿದ್ದ, ಶೇಕಪ್ಪ ತನ್ನ ಗೂರಲು ಉಸಿರಾಟ ಸ್ವಲ್ಪ ಹೊತ್ತ ಬಿಗಿ ಹಿಡಿದ. ಆದರ ಸಣ್ಣನೆಯ ಶಕ ಮಗ ರಮೇಶನ ಎದಿಯಿಂದ ಸೀಳಿ ಬರತ್ತಿತ್ತು. ಶೇಕಪ್ಪಗೆ ಸಿಡ್ಲು ಬಡಿದಂಗ ಆಯ್ತು. ಇದ್ದಕ್ಕಿದ್ದಂಗ ಕೆಮ್ಮು ಶುರು ಆಯ್ತು. ಎದೆಗೆ ಗುದ್ದಿ ಗುದ್ದಿ ಬರೋ ಕೆಮ್ಮ ಹೆಂಡತಿ ಲತಾಳನ್ನು ಎಬ್ಬಿಸಿತ್ತು. ಅಕಿ ಬ್ಯಾಟರಿ ಹಿಡಿದು ಗಂಡಗ "ನೀರ ಕಾಯಸ್ಲೇನು?" ಅಂತ ಕೇಳಿದಳು. ಶೇಕಪ್ಪನ ಬೆವರು ಕಣ್ಣೀರಾಗಿ ಕಪಾಳಕ ಬಂದಿತ್ತು. ಸುತ್ತಲೂ ಅತ್ಯಂತ ಸ್ತಬ್ಧ ವಾತಾವರಣ. ಮಗನ ಮೈಯಾಗ ದಮ್ಮು ಅನ್ನೋ ವಿಧಿ ಗಪ್‌ಚುಪ್ ಆಗಿ ಹೊಕ್ಕೊಂಡಿತ್ತು. ಮಗನ ಎದಿಗೂಡನ್ಯಾಗ ಸೊಂಯ್... ಸೊಂಯ್... ಅನ್ನೋ ಸದ್ದು ಮಾತ್ರ ಕೇಳಸತಿತ್ತು.

ಎಸ್. ಬಿ. ಜೋಗುರ
ಬಸವೇಶ್ವರ ನಗರ, ಹಿರೇಕೆರೂರ - ೫೮೧ ೧೧೧

# ಭೀಷ್ಮಾಚಾರ್ಯರಿಗೆ ಬಿದ್ದ ಧರ್ಮದೇಟು

ನಾನು ಚಿಕ್ಕವನಿದ್ದಾಗ ಭಾಗವತರಾಟ ನೋಡುವುದು ನನ್ನ ಮುಖ್ಯ ಹವ್ಯಾಸಗಳಲ್ಲೊಂದಾಗಿತ್ತು. ಪುರಾಣದ ಕಥೆಗಳೆಂದರೆ ನನಗೆ ಅಂದಿನಿಂದ ಇಂದಿನವರೆಗೂ ಬಹಳ ಇಷ್ಟವಾದ ಸಂಗತಿ. ರಾತ್ರಿಯ ಗ್ಯಾಸುಲೈಟುಗಳ ಬೆಳಕಿಗೆ ನಾನಾ ತೆರನಾದ ತಲೆಗೆ ಭಾರ ಎನ್ನಬಹುದಾದ ಕಿರೀಟಗಳನ್ನು ಕಟ್ಟಿಕೊಂಡ, ವರ್ಣಮಯ ಬಣ್ಣದ ಪೋಷಾಕು ತೊಟ್ಟುಕೊಂಡ ದಪ್ಪ ಮೀಸೆಯ ವೇಷಧಾರಿಗಳು ಕುಣಿಯುವುದು, ಬೊಬ್ಬಿರಿದು ಕೂಗುವುದು ನನ್ನ ಮನಸೂರೆಗೊಳ್ಳುತ್ತಿತ್ತು. ನನ್ನೂರು ಮೇಗರವಳ್ಳಿಯ 'ದುರ್ಗಾಪರಮೇಶ್ವರಿ' ದೇವಸ್ಥಾನದ ಅಂಗಳದಲ್ಲಿ ಮೇಲುಪೇಟೆಯ ಬಂಗಲೆ ಬಯಲಿನ ನಮ್ಮ ಮನೆಯ ಹಿಂದಣ ರೈಸ್‌ಮಿಲ್ಲಿನ ಅಂಗಳದಲ್ಲಿ ಪ್ರತಿ ವರ್ಷ ಭಾಗವತರಾಟ ನಡೆಯುತ್ತಿತ್ತು. ಆಗ ಜನಗಳು ಆಟ ನೋಡಲು ಕಿಕ್ಕಿರಿದು ಸೇರುತ್ತಿದ್ದರು.

ಭಾಗವತರಾಟ ನೋಡಲು ಎಳೆಯರೆಲ್ಲಾ ಒಂದು ಗುಂಪು ಕಟ್ಟಿಕೊಂಡಿದ್ದೆವು. ನಾವು ಸಮವಯಸ್ಸಿನವರಾಗಿದ್ದು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದೆವು. ರಂಗಸ್ಥಳ ಮಾಡಲು ಬಾಳೆಮರಗಳನ್ನು ಚಚ್ಚೌಕಾರವಾಗಿ ಹೂತು ಹಾಕುವಾಗಲೆ ವೇಷಧಾರಿಗಳು ಹೇಗೆ ಕುಣಿಯುತ್ತಾರೆಂದು ನೋಡಲು ರಂಗಸ್ಥಳದೆದುರಿಗೆ ಇದು ನಮ್ಮ ಜಾಗ ಎಂದು ಮೀಸಲಿಡಲು ಒಂದು ಗೋಣಿಚೀಲವನ್ನು ಹಾಸಿ ಬರುತ್ತಿದ್ದೆವು. ಏಕೆಂದರೆ ನಾವೂ ಭಾಗವತರಾಟ ಆಡಬೇಕಿದ್ದಿತು. ಆದ್ದರಿಂದ ಹತ್ತಿರದಿಂದ ವೇಷಧಾರಿಗಳ ಹಾವಭಾವ ಅವರ ಕುಣಿತವನ್ನು ಆಸಕ್ತಿಯಿಂದ ನೋಡಬೇಕಿತ್ತು. ಕೆಲವುಸಾರಿ ನಾವು ರಾತ್ರಿ ಊಟಮಾಡಿಕೊಂಡು ಹೋಗುವ ಹೊತ್ತಿಗೆ ಬೇರೆ ಯಾರೋ ಪ್ರೇಕ್ಷಕರು ನಮ್ಮ ಗೋಣಿಚೀಲದ ಮೇಲೆ ಕೂತಿರುತ್ತಿದ್ದರು. ನಾವು ''ಇದು ನಮ್ಮ ಗೋಣಿಚೀಲ. ಜಾಗಬಿಡಿ'' ಎಂದು ಕೇಳಿದರೆ ಅವರು ''ಈ

ಅವನು ಹೊಡೆದ ಮೇಲೆ ನಾನು ಸುಮ್ಮನಿರಲಾದೀತೆ? ಸುಮ್ಮನಿರುವುದು ನನಗೆ ಅವಮಾನವಲ್ಲವೆ? ನಾನು ಬಿಲ್ಲನ್ನೆತ್ತಿ ಅವನ ತಲೆಗೆ ಬಡಿದೆ. ಅವನ ಕಿರೀಟ ಮುರಿದು ಒಂದು ಕಡೆಗೆ ವಾಲಿಕೊಂಡಿತು. ಇಬ್ಬರೂ ಕೈ ಕೈ ಮಿಲಾಯಿಸುವಾಗ ಹಿಡಿಂಬೆಯಂತೆ ಕಾಣುತ್ತಿದ್ದ ಆಚಾರಿ ಓಡಿಬಂದು ಕಿಟ್ಟಪ್ಪನನ್ನು ಹಿಂದಿನಿಂದ ಅವನು ಮಿಸುಕಾಡದಂತೆ ಬಿಗಿಯಾಗಿ ಹಿಡಿದ. ಆಚಾರಿ ಅವನನ್ನು ಹಿಡಿದುಕೊಂಡದ್ದರಿಂದ ಕಿಟ್ಟಪ್ಪನಿಗೆ ಹೊಡೆಯುವುದು ನನಗೆ ಸುಲಭವಾಯಿತು. ಅವನ ಮುಸುಡಿಗೆ ಗುದ್ದಿದೆ. ಭಾಗವತ ನರಸಿಂಹನೂ ಎದ್ದು ಬಂದು ''ಭೀಷ್ಮಾಚಾರ್ಯನ ಪಾತ್ರ ಏನು ನಿನ್ನ ಅಪ್ಪನ ಆಸ್ತಿಯೇನೊ'' ಎಂದು ಅವನ ಕೆನ್ನೆಗೆ ನಾಲ್ಕು ಬಾರಿಸಿದ. ಭಾಗವತರ ಪಾತ್ರವನ್ನು ಅವನಿಗೆ ಕೊಟ್ಟು ಕೂರಿಸಿದ್ದಕ್ಕೆ ಅವನಿಗೆ ಕಿಟ್ಟಪ್ಪನ ಮೇಲೆ ಬಹಳ ಸಿಟ್ಟಿತ್ತು. ಆತ ಜಿದ್ದು ತೀರಿಸಿಕೊಂಡ. ಕಿಟ್ಟಪ್ಪ ಕೊಸರಿಕೊಂಡು ಆಚಾರಿಯ ಹಿಡಿತದಿಂದ ಬಿಡಿಸಿಕೊಂಡು ''ಸೂಳೆಮಕ್ಕಳ, ನಿಮಗೆ ಏನು ಮಾಡತೀನಿ ಗೊತ್ತ?'' ಎಂದು ಹೇಳುತ್ತ ಓಡಿಹೋದ. ಒಟ್ಟಿನಲ್ಲಿ ನಾವು ಮೂವರು ಕಿಟ್ಟಪ್ಪನ ಮೇಲೆ ಜಿದ್ದು ತೀರಿಸಿಕೊಂಡೆವು.



ಬಿಳುಮನೆ ರಾಮದಾಸ್

ಗೋಣಿಚೀಲ ನಿಮ್ಮದು ಅನ್ನಾದಕ್ಕೆ ಈ ಗೋಣಿಚೀಲದಾಗೆ ನಿಮ್ಮ ವಿಳಾಸ ಇದಿಯಾ ?'' ಎಂದು ನಮ್ಮ ಬಾಯಿ ಮುಚ್ಚಿಸಿ ನಿರಾತಂಕವಾಗಿ ಬೆಳತನಕ ಆಟ ನೋಡುತ್ತ ಕೂತಿರುತ್ತಿದ್ದರು. ನಾವು ಹಳ್ಳಿಗಳಿಂದ ಬಂದ ಎತ್ತಿನಗಾಡಿ ಮೇಲೆ ಕೂತೋ ಮರಗಳ ಹೆಬ್ಬೇರಿನ ಮೇಲೆ ಕೂತೋ ಆಟ ನೋಡಿಕೊಂಡು ಬರುತ್ತಿದ್ದೆವು.

ನಾವು ನೋಡುತ್ತಿದ್ದ ಆಟದ ಪ್ರಸಂಗಗಳು 'ಕಂಸವಧೆ', 'ಕೀಚಕ ವಧೆ', 'ಐರಾವತ', 'ದಕ್ಷಯಜ್ಞ', 'ಪಾರಿಜಾತ', 'ಭೀಷ್ಮವಿಜಯ', 'ಭಸ್ಮಾಸುರ ಮೋಹಿನಿ', 'ಕರ್ಣಾರ್ಜುನರ ಕಾಳಗ'ವಾಗಿರುತ್ತಿದ್ದವು. ನಮ್ಮ ಮನಸ್ಸನ್ನು ಸೂರೆಗೊಂಡ ಪ್ರಸಂಗವೆಂದರೆ 'ಭೀಷ್ಮವಿಜಯ'. ಅದು ನಮ್ಮದೇ ಒಂದು ಟ್ರೂಪು ಕಟ್ಟಿಕೊಳ್ಳಲು ಪ್ರೇರಕ ಶಕ್ತಿಯೂ ಆಗಿತ್ತು. 'ಭೀಷ್ಮವಿಜಯ' ನೋಡಿದ ಮೇಲೆ ಒಂದು ದಿನ ಕೂತು ಚರ್ಚಿಸಿ ಆ ಪ್ರಸಂಗವನ್ನೆ ಎತ್ತಿಕೊಂಡು ಆಡುವುದೆಂದು ನಾವು ತೀರ್ಮಾನಿಸಿದೆವು. ಭೀಷ್ಮಾಚಾರ್ಯರು ತನ್ನ ಸಹೋದರರಿಗೆ ಮದುವೆ ಮಾಡಿಸಲು ವಿರೋಧಿ ರಾಜರುಗಳನ್ನೆಲ್ಲ ಸೋಲಿಸಿ ಅಂಬೆ ಅಂಬಿಕೆ ಅಂಬಾಲಿಕೆ ರಾಜಕುಮಾರಿಯರನ್ನು ಹಾರಿಸಿಕೊಂಡು ಬರುವ ಕತೆಯದು. ಆ ಪ್ರಸಂಗದಲ್ಲಿ ಪಾತ್ರಗಳು ಕಡಿಮೆ ಸಂಖ್ಯೆಯಲ್ಲಿದ್ದವು. ನಮಗೆ ನಾಲ್ಕು ಜನಕ್ಕೆ ಸರಿತೂಗುವಷ್ಟು ಪಾತ್ರಗಳಿದ್ದವು. ಸ್ತ್ರೀ ಪಾತ್ರಗಳಲ್ಲಿ ಅಂಬೆಯದು ಮುಖ್ಯಪಾತ್ರವಾದದ್ದರಿಂದ ಆಕೆಯ ಸಹೋದರಿಯರಾದ ಅಂಬಿಕೆ ಅಂಬಾಲಿಕೆಯರನ್ನು ಕೈಬಿಟ್ಟೆವು. ಪಾತ್ರಗಳ ಹಂಚಿಕೆಯ ಕುರಿತು ಮಾತುಕತೆಯಾಯಿತು. ಕಿಟ್ಟಪ್ಪ ತಾನು ಭೀಷ್ಮಾಚಾರ್ಯರ ಪಾತ್ರ ಮಾಡುವುದಾಗಿಯೂ ನಾನು ಅಂಬೆಯ ಪಾತ್ರ ಮಾಡಬೇಕೆಂದೂ ನರಸಿಂಹನು ಪ್ರಸಂಗ ಹೇಳುವ ಪಾತ್ರದ ಜೊತೆಗೆ ಚೆಂಡೆ ಬಡಿಯುವ ಪಾತ್ರವನ್ನೂ ಮಾಡಬೇಕೆಂದು ಸೂಚಿಸಿದ. ನಾನು ಅಸಮಾಧಾನದಿಂದ ಕುದಿದು ಹೋದೆ. ಭೀಷ್ಮಾಚಾರ್ಯನ ಪಾತ್ರ ಮಾಡಬೇಕೆಂದು ಮಹದಾಸೆಯನ್ನು ಇಟ್ಟುಕೊಂಡಿದ್ದೆ. ನಾಯಿಂದ ಗುಂಡನು ಗದೆಯನ್ನು ನೆಲಕ್ಕೂರಿಕೊಂಡು ಅಂಡು ಕುಣಿಸಿಕೊಂಡು ಕುಣಿಯುವುದನ್ನು ಮನೆಯಲ್ಲಿ ಅಣ್ಣತಂಗಿಯರೆದುರಿಗೆ ಕುಣಿದು ಸಾಕಷ್ಟು ಅಭ್ಯಾಸ ಮಾಡಿದ್ದೆ. ಅಣ್ಣತಂಗಿಯರಿಂದ ಶಹಭಾಸ್‌ಗಿರಿಯನ್ನೂ ಪಡೆದಿದ್ದೆ. ಭೀಷ್ಮನ ಪಾತ್ರವನ್ನು ಮಾಡಬೇಕೆಂಬಾಸೆಗೆ ನನಗೆ ಬೇರೊಂದು ಕಾರಣವೂ ಇತ್ತು. ಅದೇನೆಂದರೆ ಅವನು ಯುದ್ಧದಲ್ಲಿ ಕಾಶಿರಾಜನನ್ನು ಸೋಲಿಸಿ ಮೂರು ಜನ ಹುಡುಗಿಯರನ್ನು ಹಾರಿಸಿಕೊಂಡು ಬಂದಿದ್ದನಲ್ಲ, ಆತನೆಷ್ಟು ಶೂರನಿರಬೇಕು ಎಂದು. ಅವನಿಂದ ಪ್ರಭಾವಿತನಾದ ನಾನು ದೊಡ್ಡವನಾದ ಮೇಲೆ ಅವನಂತೆ ಯಾರಾದರೊಬ್ಬ ಹುಡುಗಿಯೊಬ್ಬಳನ್ನು ಹಾರಿಸಿಕೊಂಡು ಬರಬೇಕೆಂದು ಆಸೆಪಟ್ಟಿದ್ದೆ. ನನ್ನಾಸೆಯನ್ನು ತಂದೆತಾಯಿಯರಿಗೆ ಹೇಳಿದ್ದೆ. ಅವರು ಗೊಳ್ಳನೆ ನಕ್ಕು ''ಹಾರಿಸಿಕೊಂಡು ಬಂದು ಏನ್ಮಾಡತಿಯಾ ?'' ಎಂದು ಕೇಳಿದ್ದರು. ಏನು ಮಾಡುವುದೆಂದು ತಿಳಿದಿದ್ದರೆ ತಾನೆ ಹೇಳುವುದು ? ನಾನು ಮುಗ್ಧತೆಯಿಂದ ''ಏನೋ ನೋಡಬೇಕು'' ಎಂದಿದ್ದೆ. ಕಿಟ್ಟಪ್ಪ ನನ್ನಾಸೆಗೆ ಕಲ್ಲು ಹಾಕಿದ್ದರಿಂದ ''ನನಗೆ ಅಂಬೆ ಪಾತ್ರ ಬ್ಯಾಡ. ನಾನು ಭೀಷ್ಮನ ಪಾತ್ರ ಮಾಡುತೀನಿ'' ಎಂದೆ. ನನ್ನ ಮಾತನ್ನು ಕೇಳಿ ಮೂರೂ ಜನ ಗೊಳ್ಳೆಂದು ನಕ್ಕರು. ಕಿಟ್ಟಪ್ಪ ''ಭೀಷ್ಮನ ಪಾತ್ರ ಮಾಡುವವನು ದಪ್ಪಗಿರಬೇಕು. ನಿನ್ನಂಗೆ ಸರಪೇತಲ ನಾರಾಯಣನಂಗಿದ್ದವರು ಮಾಡಾಕಾಗದಿಲ್ಲ. ನೀನು ತೆಳ್ಳಗೆ ಬೆಳ್ಳಗೆ ಇರಾದರಿಂದ ಅಂಬೆ ಪಾತ್ರಕ್ಕೆ ಲಾಯಕ್ಕು'' ಎಂದು ಫರ್ಮಾನು ಹೊರಡಿಸಿದ. ಭೀಷ್ಮನನ್ನು ಅವನು ಕಣ್ಣಾರೆ ನೋಡಿದವನಂತೆ ಮಾತನಾಡಿದ. ಉಳಿದವರು ''ಹೌದೌದು'' ಎಂದರು. ಇನ್ನೊಬ್ಬರು ನನ್ನನ್ನು ಹಾರಿಸಿಕೊಂಡು ಹೋಗುವುದು ನನಗಿಷ್ಟವಿಲ್ಲದ್ದರಿಂದ ನಾನು ಅಂಬೆ ಪಾತ್ರ ಬೇಡವೇ ಬೇಡ ಎಂದು ಹಟ ಮಾಡಿದೆ. ಕೊನೆಗೆ ನರಸಿಂಹ ಶ್ರೀನಿವಾಸಾಚಾರಿ ಸೇರಿ ಕೃಷ್ಣ ಸಂಧಾನ ಮಾಡಿ ಕಾಶೀರಾಜನ ಪಾತ್ರ ಮಾಡಲು ನನ್ನನ್ನು ಒಪ್ಪಿಸಿದರು.

ಅಂಬೆಯ ಪಾತ್ರ ಮಾಡುವ ಸರದಿ ಶ್ರೀನಿವಾಸಾಚಾರಿಯ ಕೊರಳಿಗೆ ಬಿದ್ದಿತು. ಧಡೂತಿ ಆಸಾಮಿ ಆಚಾರಿ ಅಂಬೆ ಪಾತ್ರ ಮಾಡಿದರೆ ಹೇಗೆ ಕಾಣಬಹುದೆಂದು ಊಹಿಸಿಕೊಂಡು ನಾನು ಕಿಟ್ಟಪ್ಪ ನಕ್ಕೆವು. ಇದೀಗ ನರಸಿಂಹ ಹೊಸ ಕ್ಯಾತೆ ತೆಗೆದ. ''ನೀವೆಲ್ಲ ಒಳ್ಳೊಳ್ಳೆಯ ಪಾತ್ರವನ್ನಾರಿಸಿಕೊಂಡು ಕುಣೀರಿ. ನಾನು ಡಬ್ಬಿ ಬಾರಿಸಿಕೊಂಡು ಇರಬೇಕಾ ?'' ಎಂದು ಕೇಳಿದ. ಅವನ ಪ್ರಶ್ನೆ ಸರಿಯಾಗೆ ಇದ್ದಿತು. ಅವನಿಗೆ ಶಾಲೆಯಲ್ಲಿ ಮಕ್ಕಳು ಆಡುವ ನಾಟಕದಲ್ಲಿ ಪಾತ್ರ ಮಾಡಿ ಅನುಭವ ಇದ್ದಿತು. ನಮ್ಮದು ಭಾಗವತರಾಟ ಆಡುವ ಹುಮ್ಮಸ್ಸಷ್ಟೆ. ಕಿಟ್ಟಪ್ಪ ಕಷ್ಟಕ್ಕೆ ಸಿಕ್ಕಿಬಿದ್ದ. ನಾನು ಆಚಾರಿ ಆತ ಏನು ತೀರ್ಮಾನ ತೆಗೆದುಕೊಳ್ಳುತ್ತಾನೆಂದು ಕಾದೆವು. ನರಸಿಂಹ ''ನೀವೆ ಡಬ್ಬಿ ಬಾರಿಸಿಕೊಂಡು ನೀವೇ ಕುಣೀರಿ ಈ ಕರ್ಮಕ್ಕೆ ನಾನು ಯಾಕೆ ಬರಬೇಕು ?'' ಎಂದು ಮತ್ತೊಂದು ಮಾತನ್ನು ಒಗೆದ. ಡಬ್ಬಿ ಬಾರಿಸುವುದೆಂದರೆ ಭಾಗವತರಾಟದಲ್ಲಿ ವೇಷಧಾರಿಗಳು ಕುಣಿಯಲು ಸಹಕಾರಿಯಾಗುವಂತೆ ಚೆಂಡೆ ಬಾರಿಸುವುದು. ಇಲ್ಲಿ ಚೆಂಡೆ ಇಲ್ಲದ್ದರಿಂದ ಅದರ ಬದಲಿಗೆ ಡಬ್ಬ ಬಾರಿಸುವುದು. ಹಾಗೆ ನರಸಿಂಹನಿಗೆ ಎರಡು ಪಾತ್ರ ಕೊಡಲಾಗಿತ್ತು. ಅವನೂ ಭೀಷ್ಮನ ಪಾತ್ರದ ಆಕಾಂಕ್ಷಿಯೆ. ''ನೀನು ಏನಂತಿಯಾ ?'' ಎಂದು ಆತ ನನಗೆ ಕೇಳಿದ. ಆತ ಕಟ್ಟುಮಸ್ತಾಗಿದ್ದು ಭೀಷ್ಮನ ಪಾತ್ರಕ್ಕೆ ಲಾಯಕ್ಕಾಗಿದ್ದ. ಕಿಟ್ಟಪ್ಪನಿಗೆ ಆತನೇನೂ ಕಡಿಮೆ ಇರಲಿಲ್ಲ. ಭೀಷ್ಮನ ಪಾತ್ರ ಸಿಗದೆ ಹತಾಶನಾಗಿದ್ದ ನಾನು ''ಒಂದು ಕೆಲಸ ಮಾಡಾನ. ಹ್ಯಾಗಿದ್ದರೂ ಪ್ರತಿ ಭಾನುವಾರ ನಾವು ಆಟ ಆಡತೀವಿ. ಆದ್ದರಿಂದ ಪ್ರತಿ ಭಾನುವಾರ ಆಡುವಾಗ ಪ್ರತಿಯೊಬ್ಬರೂ ಎಲ್ಲಾ ಪಾತ್ರಗಳನ್ನು ಸರದಿ ಮೇಲೆ ಮಾಡನ. ಯಾರಿಗೂ ಅನ್ಯಾಯ ಆಗಲ್ಲ'' ಎಂದು ತೀರ್ಪುಕೊಟ್ಟೆ. ನರಸಿಂಹ ಮತ್ತು ಆಚಾರಿ ಒಕ್ಕೊರಲಿನಿಂದ ''ಹಂ, ಆಗಬಹುದು, ಒಳ್ಳೆ ಸಲಹೆ'' ಎಂದರು. ಅವರಿಗೆ ನನ್ನ ಸಲಹೆ ಸರಿಯಾಗಿ ಕಂಡಿತ್ತು. ಆದರೆ ಕಿಟ್ಟಪ್ಪನಿಗೆ ಅದು ಒಳ್ಳೆ ಸಲಹೆಯಾಗಿ ಕಾಣಲಿಲ್ಲ. ಅವನು ''ಭೀಷ್ಮನ ಪಾತ್ರ ನಾನಲ್ಲದೆ ಬೇರೆ ಯಾರೂ ಮಾಡಲಿಕ್ಕೆ ಆಗಲ್ಲ. ನಿಮಗೆಲ್ಲ ಸಂಭಾಷಣೆ ಹೇಳಾಕೆ ಬರಲ್ಲ'' ಎಂದ. ಭೀಷ್ಮನ ಪಾತ್ರ ಅವನ ಜಹಗೀರು ಎನ್ನುವಂತೆ ಮಾತನಾಡಿದ. ನರಸಿಂಹನನ್ನು ಬಿಟ್ಟರೆ ನಮಗಾರಿಗೂ ನಾಟಕದಲ್ಲಿ ಪಾತ್ರ ಮಾಡಿ ಅಭ್ಯಾಸವಿರಲಿಲ್ಲ. ಕಿಟ್ಟಪ್ಪ ತನ್ನನ್ನು ಬಿಟ್ಟರೆ ಬೇರೆ ಯಾರಿಗೂ ಭೀಷ್ಮನ ಪಾತ್ರ ಮಾಡಲಿಕ್ಕಾಗಲ್ಲ ಎಂದು ಅವನು ಹೇಗೆ ತೀರ್ಮಾನ ತೆಗೆದುಕೊಳ್ಳುತ್ತಾನೆ, ಎಂಬುದು ನಮ್ಮ ನಿಲುವು. ಕಿಟ್ಟಪ್ಪ ಬಹಳ ಬಿಗಿಯಾಗೆ ಇದ್ದ. ನರಸಿಂಹ ''ಆಗಲ್ಲ ಅಂದ್ರೆ ಆಟಾನೆ ಬ್ಯಾಡ. ನೀವು




ಏನಂತೀರ್‍ರ್‍ರೋ ?'' ಎಂದು ನಮ್ಮ ಕಡೆಗೆ ನೋಡಿದ. ನಾವು ''ಹೌದೌದು'' ಎಂದೆವು. ಸಮಸ್ಯೆ ಬಗೆಹರಿಯುವಂತೆ ಕಾಣಲಿಲ್ಲ. ಕೊಂಚ ಹೊತ್ತಾದ ಮೇಲೆ ಕಿಟ್ಟಪ್ಪ ಕೊಂಚ ಆಲೋಚಿಸಿ ''ನಿಮ್ಮ ಮಾತಿಗೆ ಒಪ್ಪಿದೆ. ಆದರೆ ಮುಂದಿನ ಭಾನುವಾರ ಆಟ ಆಡುವಾಗ ಮೊದಲು ನಾನೆ ಭೀಷ್ಮನ ಪಾತ್ರ ಮಾಡತೀನಿ. ಅದಕ್ಕೆ ನೀವು ಒಪ್ಪಗೊಳ್ಳಬೇಕು'' ಎಂದ. ನಾವು ಒಪ್ಪಿಕೊಂಡೆವು. ದೊಡ್ಡ ಸಮಸ್ಯೆ ಬಗೆಹರಿದದ್ದರಿಂದ ನಾವು ನಿಟ್ಟುಸಿರುಬಿಟ್ಟೆವು. ಕಿಟ್ಟಪ್ಪನ ಮನಸ್ಸಿನಲ್ಲೇನಿದೆ ಎಂದು ನಮಗೆ ತಿಳಿಯಲಿಲ್ಲ.

ಇನ್ನು ಉಳಿದ ಸಮಸ್ಯೆ ನಾವು ಎಲ್ಲಿ ಭಾಗವತರಾಟ ಆಡಬೇಕು ಎಂಬುದು. ಕಿಟ್ಟಪ್ಪನು ಬೋಳು ಗುಡ್ಡದಲ್ಲಿ ಆಟ ಆಡುವ ಸಲಹೆಕೊಟ್ಟ. ಅದು ನಮಗೆಲ್ಲ ಸರಿ ಕಂಡಿತು. ನಾವು ಒಪ್ಪಿಕೊಂಡೆವು.

ಆಟವಾಡುವ ಸ್ಥಳಪರಿಶೀಲನೆ ಮಾಡುವ ಅವಶ್ಯಕತೆ ಇರಲಿಲ್ಲ. ಏಕೆಂದರೆ ನಾವು ಹೆಬ್ಬಲಸಿನ ಹಣ್ಣು, ಸಂಪಿಗೆ ಹಣ್ಣು, ಬುಕ್ಕಿಹಣ್ಣು, ತಾರೆಕಾಯಿ ತಿನ್ನಲು ಓಡಿಯಾಡಿದ ಜಾಗವದು. ದೀಪಾವಳಿ ಹಬ್ಬದಲ್ಲಿ ದನಕರುಗಳ ಕುತ್ತಿಗೆಗೆ ಅಲಂಕಾರ ಮಾಡುವ ಉಗುಣೆಕಾಯಿ ಗೆಜ್ಜಣಕಾಯಿ ಕಿತ್ತುತರಲು ಹೋದ ಚಿರಪರಿಚಿತ ಜಾಗವದು. ಹಾಗಾಗಿ ಮುಂದಿನ ಭಾನುವಾರ ಬೆಳಿಗ್ಗೆ ಹನ್ನೊಂದು ಘಂಟೆಗೆ ಬಿಲ್ಲುಬಾಣ ಕಿರೀಟಗಳೊಂದಿಗೆ ಅಲ್ಲಿ ಸೇರುವುದೆಂದು ತೀರ್ಮಾನಿಸಿ ಒಬ್ಬರನ್ನೊಬ್ಬರು ಅಗಲಿದೆವು. ಮುಂದಿನ ಭಾನುವಾರ ಮಾತನಾಡಿದಂತೆ ನಾವು

ಅಲ್ಲಿ ಸೇರಿದೆವು. ನಮ್ಮೆಲ್ಲರಿಗಿಂತ ಮುಂಚಿತವಾಗಿ ಕಿಟ್ಟಪ್ಪ ಅಲ್ಲಿ ಹಾಜರಾಗಿದ್ದ. ಆತ ಆಟ ಆಡಲು ಒಳ್ಳೆಯ ಸ್ಥಳವನ್ನೆ ಆಯ್ಕೆ ಮಾಡಿದ್ದ. ಎಡಕ್ಕೆ ಬಲಕ್ಕೆ ಹಿಂದೆ ದೊಡ್ಡ ಬಂಡೆಬಲ್ಲುಗಳಿದ್ದು ಮಧ್ಯೆ ವಿಶಾಲವಾದ ಜಾಗವಿತ್ತು. ಭರ್ಜರಿ ಕಿರೀಟವನ್ನೂ ಬಿಲ್ಲನ್ನೂ ಅವನು ಮಾಡಿಕೊಂಡು ಬಂದಿದ್ದ. ಕಿರೀಟಕ್ಕೆ ಬಣ್ಣದ ಬೇಗಡೆಯನ್ನು ಹಚ್ಚಿ ಚೆಂದವಾಗಿ ಮಾಡಿಕೊಂಡಿದ್ದ. ಭೀಷ್ಮನ ಪಾತ್ರಕ್ಕೆ ದೊಡ್ಡ ಕಿರೀಟ ಬೇಡವೆ? ಭೀಷ್ಮನಿಗಿಂತ ಕಾಶೀರಾಜನ ಕಿರೀಟ ದೊಡ್ಡದಾಗಿದ್ದರೆ ಅದು ಕಿಟ್ಟಪ್ಪನಿಗೆ ಅವಮಾನವಲ್ಲವೆ? ಅವನ ಕಿರೀಟದ ಮುಂದೆ ನನ್ನ ಕಿರೀಟ ಅಷ್ಟೇನೂ ವೈನಾಗಿರಲಿಲ್ಲ. ಆಚಾರಿ ಅವನ ತಾಯಿಯ ಮಾಸಿದ ಹರಕಲು ಸೀರೆಯೊಂದನ್ನು ತಂದಿದ್ದ. ನರಸಿಂಹ ಒತ್ತಿದರೆ ಪುಡಿಪುಡಿಯಾಗುವ ಡಬ್ಬವೊಂದನ್ನು ತಂದಿದ್ದ. ಆತ ಭಾಗವತರು ತಲೆಗೆ ಕೆಂಪು ರುಮಾಲು ಸುತ್ತಿಕೊಳ್ಳುವಂತೆ ತಲೆಗೆ ಸುತ್ತಿಕೊಳ್ಳಲು ಒಂದು ಮಾಸಿದ ಹರಕಲು ತುವಾಲು ತಂದಿದ್ದ. ಭಾಗವತರ ಪಾತ್ರದ ನರಸಿಂಹ ಎತ್ತರದ ಬಂಡಯನ್ನೇರಿ ಕೂತು ಬಣ್ಣ ಹಾಕಿಕೊಳ್ಳಲು ನಮಗೆ ಹೇಳಿದ. ನಾವು ಬಂಡೆಯ ಹಿಂದಕ್ಕೆ ಗ್ರೀನ್ ರೂಮಿಗೆ ಸೇರಿಕೊಂಡೆವು. ಗ್ರೀನ್ ರೂಮೆಂದರೆ ಪೊದೆಗಳ ನಡುವೆ ಇರುವ ಖಾಲಿ ಜಾಗ. ನಾವು ಬಹಳ ಹುಮ್ಮಸ್ಸಿನಲ್ಲಿದ್ದೆವು.

ನಾನು ಕಿಟ್ಟಪ್ಪ ಇಜ್ಜಲಿನಿಂದ ದಪ್ಪ ಮೀಸೆ ಬಳಿದುಕೊಂಡೆವು. ಕಿಟ್ಟಪ್ಪ ನನ್ನ ದಪ್ಪ ಮೀಸೆಗೆ ಅಡ್ಡಿಬಂದ. ಭೀಷ್ಮನ ಮೀಸೆಗಿಂತ ಕಾಶೀರಾಜನ ಮೀಸೆ ದಪ್ಪಗಿರಬಾರದು ಎಂದ. ಅವನ ಕಿವಿಮಾತು ನನಗೆ ಅಸಮಾಧಾನವನ್ನು ತಂದರೂ ಮುಂದೆ ಭೀಷ್ಮನ ಪಾತ್ರ ನನ್ನ ಕೈತಪ್ಪಬಾರದೆಂದು ನಿರ್ವಾಹವಿಲ್ಲದೆ ಒಪ್ಪಿಕೊಂಡು ನನ್ನ ಮೀಸೆಯನ್ನು ಸಣ್ಣದು ಮಾಡಿದೆ. ನರಸಿಂಹ ಡಬ್ಬ ಬಡಿಯುತ್ತ ಬಾಯಿಗೆ ಬಂದಂತೆ ಯದ್ವಾತದ್ವಾ ಹಾಡತೊಡಗಿದ್ದ. ಆಚಾರಿ ಸೀರೆ ಉಟ್ಟುಕೊಂಡ ಮೇಲೆ ಸುಂದರವಾಗಿ ಕಾಣದೆ ಹಿಡಿಂಬೆಯಂತೆ ಕಾಣತೊಡಗಿದ್ದ. ಮೊದಲು ಕಿಟ್ಟಪ್ಪ ಬಿಲ್ಲು ಹಿಡಿದು ರಂಗಸ್ಥಳಕ್ಕೆ ರಭಸದಿಂದ ನುಗ್ಗಿ ''ಎಲೆಲಲ ಕೀಹು'' ಎಂದು ಕೂಗಿ ಕುಣಿದು ''ಹಸ್ತಿನಾವತಿಗೆ ಯಾರೆಂದು ಕೇಳಿ ಬಲ್ಲಿರಿ ?'' ಎಂದು ಕೇಳಿದ. ನರಸಿಂಹ ''ಭೀಷ್ಮ ಮಹಾರಾಜ ಎಂದು ಕೇಳಿ ಬಲ್ಲೆವು'' ಎಂದ. ಕುಣಿದು ಸುಸ್ತಾಗಿದ್ದ ಕಿಟ್ಟಪ್ಪ ಏದುಸಿರು ಬಿಡುತ್ತ ತಾನು ಬಂದ ಉದ್ದೇಶವೇನೆಂದು ಹೇಳಿದ. ಆತ ಹೇಳುವುದಕ್ಕೆಲ್ಲ ನರಸಿಂಹ ''ಹಂ, ಹಂ, ಓಹೋ'' ಎಂದು ಉತ್ತರಿಸಿ ಅಂಬೆ ಅಂಬಿಕೆ ಅಂಬಾಲಿಕೆ ಸಹೋದರಿಯರನ್ನು ಹಾರಿಸಿಕೊಂಡು ಹೋಗುವುದು ಕಷ್ಟವೆಂದೂ ಕಾಶೀರಾಜನು ಬಲಿಷ್ಠನಾಗಿದ್ದಾನೆಂದೂ ತಾವು ಅವನೊಡನೆ ಯುದ್ಧ ಮಾಡಬೇಕಾಗುವುದೆಂದೂ ಹೇಳಿದ. ಕಿಟ್ಟಪ್ಪ ''ಸೋಲನ್ನೆ ಕಂಡರಿಯದ ಈ ಹಸ್ತಿನಾವತಿ ದೊರೆಗೆ ಅವನು ಯಾವ ಲೆಕ್ಕ. ಜವಳೀ ಅಂಗಡಿ ಟೋಪಿ ಹಾಕಿಕೊಂಡು ಶಾಲೆಗೆ ತಿರುಗಿದರಾಯಿತಾ ?'' ಎಂದ. ಅವನ ಕೊನೆಯ ಮಾತು ನನ್ನನ್ನು ರೇಗಿಸಿತು. ನಾನು ಖರ್ಜಾಗದ ನಮ್ಮ ತಂದೆಯ ಜವಳಿ ಅಂಗಡಿಯ ರಟ್ಟಿನ ಟೋಪಿಗಳನ್ನು ದಿನಕ್ಕೊಂದನ್ನು ಶಾಲೆಗೆ ಹಾಕಿಕೊಂಡು ಹೋಗುತ್ತಿದ್ದೆ. ಅವನು ಹಾಗೆ ಹೇಳಲಿಕ್ಕೆ ಕಾರಣವೇನೆಂದರೆ ಎಲ್ಲರೂ ಎಲ್ಲಾ ಪಾತ್ರಗಳನ್ನು ಸರದಿಯ ಮೇಲೆ ಮಾಡಬೇಕೆಂದು ನಾನು ಹೇಳಿದ್ದುದು ಅವನಿಗೆ ಇಷ್ಟವಾಗಿರಲಿಲ್ಲ. ಕಾಯಂ ಆಗಿ ಅವನೆ ಭೀಷ್ಮನ ಪಾತ್ರ ಮಾಡಬೇಕೆಂಬ ಅವನಾಸೆಗೆ ಕೊಡಲಿ ಪೆಟ್ಟು ಬಿದ್ದಿತ್ತು. ಅವನು ಹಾಗೆ ಹೇಳಿದ ಮೇಲೆ ನಾನು ಸುಮ್ಮನಿರಲಾದೀತೆ? ಅವನು ಕುಣಿದು ಕುಪ್ಪಳಿಸಿ ಹೊರಬಂದ ಮೇಲೆ ನಾನು ಬಿರುಸಾಗಿ ರಂಗಸ್ಥಳಕ್ಕೆ ನುಗ್ಗಿ ಆರ್ಭಟಿಸಿ ಕೂಗಿ ಕುಮಚಟ್ಟು ಹಾಕಿ ಕುಣಿದು ಮಂಡಿಯಲ್ಲಿ ರಂಗಸ್ಥಳದ ತುಂಬೆಲ್ಲ ಗಿರಿಗಿರಿ ತಿರುಗಿ ಸಟ್ಟನೆದ್ದು ಭಾಗವತ ನರಸಿಂಹನಿಗೆ ''ನಾನು ಯಾರೆಂದು ಕೇಳಿ ಬಲ್ಲಿರಾ ?'' ಎಂದು ಏದುಸಿರು ಬಿಡುತ್ತ ಹೇಳಿದೆ. ಕಿಟ್ಟಪ್ಪನಿಗಿಂತ ಚೆನ್ನಾಗಿ ಪಾತ್ರ ನಿರ್ವಹಣೆ ಮಾಡಿ ಶಹಬಾಸ್‌ಗಿರಿ ಪಡೆದು ಭೀಷ್ಮನ ಪಾತ್ರಕ್ಕೆ ಬಡ್ತಿ ಹೊಂದಲು ಹಾರಾಡಿ ಕುಣಿದದ್ದರಿಂದ ನಾನು ತುಂಬಾ ಸುಸ್ತಾಗಿ ಹೋಗಿದ್ದೆ.

ಮಂಡಿ ನೆಲದ ಮೇಲೆ ತಿರುಗಿದ್ದರಿಂದ ತರಚಿ ಗಾಯವಾಗಿ ನೋವಿನಿಂದ ನಾನು ನರಳುತ್ತಿದ್ದೆ. ಆದರೂ ಭೀಷ್ಮನ ಪಾತ್ರ ಕೈತಪ್ಪಿಹೋಗಬಾರದೆಂದು ಗುಟ್ಟುಮಾಡಿದೆ. ನನ್ನ ಕಾಲುಗಳು ನಡುಗುತ್ತಿದ್ದವು. ಭಾಗವತ ನರಸಿಂಹನು ''ತಾವು ಯಾರೆಂದು ತಿಳಿಯಲಿಲ್ಲ. ತಾವು ಎಲ್ಲಿಂದ ಬಂದಿರಿ ? ತಾವು ಯಾವ ಊರಿನ ಮಹಾರಾಜರು ? ತಾವು ಭೀಷ್ಮಾಚಾರ್ಯರಿಗೆ ಸರಿಯಾಗಿ ಉತ್ತರಿಸಬೇಕು. ಅವರ ಉದ್ದ ನಾಲಿಗೆಗೆ ಸರಿಯಾಗಿ ಉತ್ತರ ಕೊಡಬೇಕು'' ಎಂದುಬಿಟ್ಟ. ನಾನು ಸಾವರಿಸಿಕೊಂಡು ಬಿಲ್ಲನ್ನು ಗದೆಯಂತೆ ನೆಲಕ್ಕೆ ಊರಿಕೊಂಡು ಅಂಡು ಕುಣಿಸುತ್ತ ''ನಾನು ಕಾಶೀ ದೇಶದ ಮಹಾರಾಜ. ಸುಂದರಾಂಗ, ಹೊಟ್ಟೆ ಡುಮ್ಮಣ್ಣನಲ್ಲ. ರಾತ್ರಿ ಹೊತ್ತು ಗುಡಿಸಲಲ್ಲಿ ಮಲಗಿದ್ದ ಹೆಂಗಸನ್ನು ಕೆಣಕಲು ಹೋಗಿ ಚಪ್ಪಲಿ ಏಟು ತಿಂದವನ ತಮ್ಮನಲ್ಲ'' ಎಂದು ಜಾಡಿಸಿ ಉತ್ತರ ಕೊಟ್ಟೆ. ಕಿಟ್ಟಪ್ಪನ ಅಣ್ಣ ರಾಮಣ್ಣ ಮೇಗರವಳ್ಳಿ ಮೇಲುಪೇಟೆಯ ಗಲ್ಲಿಯಲ್ಲಿ ಒಂದು ಹೋಟೆಲು ಇಟ್ಟಿದ್ದ. ಹೋಟೆಲು ಪಕ್ಕದ ಗುಡಿಸಲಲ್ಲಿದ್ದ ಮರ್ಯಾದಸ್ಥ ಕುಟುಂಬವೊಂದರ ಮಹಿಳೆಯೊಬ್ಬಳಿಗೆ ಕಾಫಿ ತಿಂಡಿಯನ್ನು ಕೇಳಿ ಕೇಳಿದಂತೆ ಸಾಲ ಕೊಟ್ಟಿದ್ದ. ಅವಳು ಸ್ವಲ್ಪ ಸಾಲ ಉಳಿಸಿಕೊಂಡಿದ್ದಳು. ಆ ಸಲುಗೆಯ ಮೇಲೆ ಒಂದು



ಬೆಳದಿಂಗಳ ರಾತ್ರಿ ಅವನು ಅವಳ ಗುಡಿಸಲಿಗೆ ಹೋಗಿ ಅವಳನ್ನು ಎಬ್ಬಿಸಿದ. ಯಾರೋ ರಾತ್ರಿ ಹಾಗೆ ಬಂದು ಮೈ ಮುಟ್ಟಿದ್ದರಿಂದ ಅವಳು ಗಾಬರಿಯಾಗಿ ಕೂಗಿಕೊಂಡಳು. ಅವಳ ಅಣ್ಣತಮ್ಮಂದಿರು ದಡಬಡಿಸಿ ಎದ್ದು ''ಯಾರು ? ಏನು ?'' ಎಂದು ಏಳುವಾಗ ರಾಮಣ್ಣ ಭಯದಿಂದ ಎದ್ದು ಬಿದ್ದು ಓಡಿದ. ಬೆಳದಿಂಗಳ ರಾತ್ರಿಯಲ್ಲಿ ಆ ಮಹಿಳೆಯ ಅಣ್ಣತಮ್ಮಂದಿರು ಅವನನ್ನು ಅಟ್ಟಿಸಿಕೊಂಡು ಹೋಗಿ ಹಿಡಿದು ಬರಿಮೈಲಿದ್ದ ಅವನಿಗೆ ದೊಣ್ಣೆಯಿಂದ ನಾಲ್ಕು ಬಾರಿಸಿ ತಮ್ಮ ಸಹೋದರಿಯಿಂದ ಚಪ್ಪಲಿಯಿಂದ ಹೊಡೆಸಿದ್ದರು. ಈ ಕತೆಯಾಗಿ ಬಾಳ ದಿನಗಳೇನೂ ಆಗಿರಲಿಲ್ಲ. ಆಚಾರಿಗೂ ನರಸಿಂಹನಿಗೂ ಇದು ಗೊತ್ತಿದ್ದಿತು. ನಾನು ಆ ಪ್ರಕರಣವನ್ನು ಮುಗುಂ ಆಗಿ ಹೇಳಿದ ಕೂಡಲೆ ಅವರಿಬ್ಬರೂ ಗೊಳ್ಳನೆ ನಕ್ಕರು. ಕಿಟ್ಟಪ್ಪ ಕೋಪೋದ್ರಿಕ್ತನಾದ. ನನ್ನನ್ನು ಟೀಕೆ ಮಾಡುವಾಗ ಸಿಹಿಯಾದದ್ದು ಅವನನ್ನು ನಾನು ಟೀಕೆ ಮಾಡಿದಾಗ ಕಹಿಯಾಗಿಹೋಯಿತು. ನರಸಿಂಹ ಬೇರೆ ಭೀಷ್ಮಾಚಾರ್ಯರ ನಾಲಿಗೆ ಬಹಳ ಉದ್ದ, ಅದಕ್ಕೆ ಸರಿಯಾಗಿ ಉತ್ತರ ಕೊಡಬೇಕು ಅಂದಿದ್ದನಲ್ಲ? ಇದರಿಂದಾಗಿ ಆತನಿಗೆ ಸಿಟ್ಟು ತಡೆಯಲಾರದೆ ಬಿಲ್ಲನ್ನೆತ್ತಿಕೊಂಡು ಬಂದು ನನ್ನ ತಲೆಗೆ ಬಡಿದ. ನನ್ನ ತಲೆಯಲ್ಲಿ ಕಿರೀಟವಿದ್ದುದರಿಂದ ಅಷ್ಟಾಗಿ ನನಗೆ ಏಟಾಗದೆ ರಟ್ಟಿನ ಕಿರೀಟ ಮುರಿದುಹೋಯಿತು. ಅವನು ಹೊಡೆದ ಮೇಲೆ ನಾನು ಸುಮ್ಮನಿರಲಾದೀತೆ ? ಸುಮ್ಮನಿರುವುದು ನನಗೆ ಅವಮಾನವಲ್ಲವೆ ? ನಾನು ಬಿಲ್ಲನ್ನೆತ್ತಿ ಅವನ ತಲೆಗೆ ಬಡಿದೆ. ಅವನ ಕಿರೀಟ ಮುರಿದು ಒಂದು ಕಡೆಗೆ ವಾಲಿಕೊಂಡಿತು. ಇಬ್ಬರೂ ಕೈ ಕೈ ಮಿಲಾಯಿಸುವಾಗ ಹಿಡಿಂಬೆಯಂತೆ ಕಾಣುತ್ತಿದ್ದ ಆಚಾರಿ ಓಡಿಬಂದು ಕಿಟ್ಟಪ್ಪನನ್ನು ಹಿಂದಿನಿಂದ ಅವನು ಮಿಸುಕಾಡದಂತೆ ಬಿಗಿಯಾಗಿ ಹಿಡಿದ. ಆಚಾರಿ ಅವನನ್ನು ಹಿಡಿದುಕೊಂಡದ್ದರಿಂದ ಕಿಟ್ಟಪ್ಪನಿಗೆ ಹೊಡೆಯುವುದು ನನಗೆ ಸುಲಭವಾಯಿತು. ಅವನ ಮುಸುಡಿಗೆ ಗುದ್ದಿದೆ. ಭಾಗವತ ನರಸಿಂಹನೂ ಎದ್ದು ಬಂದು ''ಭೀಷ್ಮಾಚಾರ್ಯನ ಪಾತ್ರ ಏನು ನಿನ್ನ ಅಪ್ಪನ ಆಸ್ತಿಯೇನೊ'' ಎಂದು ಅವನ ಕೆನ್ನೆಗೆ ನಾಲ್ಕು ಬಾರಿಸಿದ. ಭಾಗವತರ ಪಾತ್ರವನ್ನು ಅವನಿಗೆ ಕೊಟ್ಟು ಕೂರಿಸಿದ್ದಕ್ಕೆ ಅವನಿಗೆ ಕಿಟ್ಟಪ್ಪನ ಮೇಲೆ ಬಹಳ ಸಿಟ್ಟಿತ್ತು. ಆತ ಜಿದ್ದು ತೀರಿಸಿಕೊಂಡ. ಕಿಟ್ಟಪ್ಪ ಕೊಸರಿಕೊಂಡು ಆಚಾರಿಯ ಹಿಡಿತದಿಂದ ಬಿಡಿಸಿಕೊಂಡು ''ಸೂಳೆಮಕ್ಕಳ, ನಿಮಗೆ ಏನು ಮಾಡತೀನಿ ಗೊತ್ತ?'' ಎಂದು ಹೇಳುತ್ತ ಓಡಿ ಹೋದ. ಒಟ್ಟಿನಲ್ಲಿ ನಾವು ಮೂವರು ಕಿಟ್ಟಪ್ಪನ ಮೇಲೆ ಜಿದ್ದು ತೀರಿಸಿಕೊಂಡೆವು. ಆಚಾರಿಯನ್ನು ಹೊರತುಪಡಿಸಿ ನಾನು ನರಸಿಂಹ ಒಬ್ಬೊಬ್ಬರೆ ಕಿಟ್ಟಪ್ಪನೊಂದಿಗೆ ಹೋರಾಡುವುದಾಗಿದ್ದರೆ ನಮ್ಮ ಕತೆ ಗಂಡಾಂತರದಲ್ಲಿ ಇರುತ್ತಿತ್ತು. ಅಲ್ಲಿಗೆ ನಮ್ಮ ಭಾಗವತರಾಟದ ಕಂಪನಿಯ ಕತೆ ಗರ್ಭದಲ್ಲೆ ಸತ್ತ ಶಿಶುವಿನಂತಾಯಿತು.


ಬಿಳುಮನೆ ರಾಮದಾಸ್

ನಂ. ೧೪೦೧, ೩೭ನೇ 'ಬಿ' ತಿರುವು, ೧೧ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು- ೫೬೦೦೪೧.

# ಅಭಿವೃದ್ಧಿ : ಪಶ್ಚಿಮದ ಮಾದರಿ ಎಷ್ಟು ಸರಿ ?

ಕು. ಸ. ಮಧುಸೂದನ

'ಅಭಿವೃದ್ಧಿ' : ಇದು ಇವತ್ತು ಭಾರತದಲ್ಲಿ ಅತ್ಯಂತ ಹೆಚ್ಚು ಚಲಾವಣೆಯಲ್ಲಿರುವ ಪದ. ರಾಜಕಾರಣಿಗಳು, ವಿವಿಧ ಕ್ಷೇತ್ರಗಳ ತಜ್ಞರು, ಪ್ರಗತಿಪರರು ಅನಿಸಿಕೊಂಡವರಿಂದ ಹಿಡಿದು, ದಿನಪತ್ರಿಕೆಯನ್ನು ಮಾತ್ರ ಓದಬಲ್ಲಂತಹ ಸಾಮಾನ್ಯನಿಗೂ ಈ ಅಭಿವೃದ್ಧಿಯ ಭೂತ ಹಿಡಿದಂತಿದೆ.

ವಿಕಾಸಗೊಳ್ಳುತ್ತಿರುವ ಒಂದು ನಾಗರಿಕ ಸಮಾಜ ಅಭಿವೃದ್ಧಿಗಾಗಿ ಹಂಬಲಿಸುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಈ ಅಭಿವೃದ್ಧಿಗಾಗಿ ನಾವು ಆಯ್ದುಕೊಂಡಿರುವ 'ಪಶ್ಚಿಮದ ಮಾದರಿ' ಅಭಿವೃದ್ಧಿ ಪಥ ಎಷ್ಟರಮಟ್ಟಿಗೆ ಸೂಕ್ತವೆಂಬುದರ ಬಗ್ಗೆ ಚರ್ಚೆಯಾಗಬೇಕಿರುವುದು ಇವತ್ತಿನ ಅಗತ್ಯವಾಗಿದೆ. ಯಾಕೆಂದರೆ ಅಭಿವೃದ್ಧಿ ಸಾಧಿಸಲು ಯಾವುದಾದರೂ ಒಂದು ಮಾದರಿಯನ್ನು ಆಯ್ಕೆಮಾಡಿಕೊಳ್ಳುವ ಮುನ್ನ ನಾವು ಕೆಲವೊಂದು ವಿಚಾರಗಳನ್ನು ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯಕ. ಅವೆಂದರೆ :

ಒಂದನೆಯದು : ''ಅಭಿವೃದ್ಧಿ ಎಂದರೆ ಏನು ? ಅದು ಎಂತಹ ಅಭಿವೃದ್ಧಿ ? ಮತ್ತು ಅದನ್ನು ಸಾಧಿಸಲು ನಾವು ಹಿಡಿಯಬೇಕಾದ ಹಾದಿ – ತೆರಬೇಕಾದ ಬೆಲೆ ಏನು ?'' ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಇನ್ನು ಎರಡನೆಯದು : ''ನಾವು ಸಾಧಿಸಲಿರುವ ಅಭಿವೃದ್ಧಿಯ ಫಲ ಎಂತಹದು ? ಮತ್ತು ಆ ಫಲ ಸಮುದಾಯದ ಎಲ್ಲ ವರ್ಗಗಳಿಗೂ ಸಂಪೂರ್ಣವಾಗಿ-ಸಮಾನವಾಗಿ ಹಂಚಿಕೆ ಆಗಲ್ಪಡುತ್ತಿದೆಯೇ ?'' ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದು. ಹೀಗೆ ವಿವೇಚಿಸಿ, ಸಂಯಮದಿಂದ ಸಾಧಿಸಿದ ಅಭಿವೃದ್ಧಿಯು ಮಾತ್ರ ಪರಿಣಾಮಕಾರಿಯಾಗಿರಲು ಮತ್ತು ಸಾರ್ಥಕವಾಗಿರಲು ಸಾಧ್ಯ. ಇಲ್ಲದಿದ್ದಲ್ಲಿ ಪಶ್ಚಿಮವನ್ನು ಅನುಕರಿಸಲು ಹೋಗಿ ನಮ್ಮತನವನ್ನು ಕಳೆದುಕೊಂಡು ಜಗತ್ತಿನ ಮುಂದೆ ಬೆತ್ತಲಾಗಿ ನಿಲ್ಲಬೇಕಾಗುತ್ತದೆ.

ದುರಂತವೆಂದರೆ ನಮ್ಮ ನಾಯಕರುಗಳಿಗೆ ಇದ್ಯಾವುದರ ಬಗ್ಗೆಯೂ ಪರಿವೆ ಇಲ್ಲ. ಅವರಿಗೆ 'ಅಭಿವೃದ್ಧಿ'ಯ ಹೆಸರಿನಲ್ಲಿ ಅಧಿಕಾರದ ಕುರ್ಚಿ ಉಳಿಸಿಕೊಂಡು ತನ್ಮೂಲಕ ತಮ್ಮ ವೈಯಕ್ತಿಕ ಅಭಿವೃದ್ಧಿಯನ್ನು ಸಾಧಿಸುವುದಷ್ಟೆ ಗುರಿಯಾಗಿದೆ. ವಿಪರ್ಯಾಸವೆಂದರೆ ನಮ್ಮಲ್ಲಿ ಬುದ್ಧಿಜೀವಿಗಳು ಎನಿಸಿಕೊಂಡವರು ಸಹ ಈ ಬಗ್ಗೆ ಮೌನವಾಗಿರುವುದು.

ಇದಕ್ಕೆ ಕಾರಣ, ಭಾರತೀಯರ ದೃಷ್ಟಿಯಲ್ಲಿ ಎಲ್ಲ ವಿಷಯಗಳಲ್ಲೂ ಪಶ್ಚಿಮವೇ ಪರಮ ಶ್ರೇಷ್ಠ ಮತ್ತು ಪರಮ ಸತ್ಯ ಎಂದಾಗಿರುವುದು. ಇಂತಹದೊಂದು ನಂಬಿಕೆ ನಮ್ಮೊಳಗೆ ಬೇರೂರಿರುವುದಕ್ಕೆ ಕಾರಣ ನೂರಾರು ವರ್ಷ ಕಾಲ ಪಶ್ಚಿಮದ ವಸಾಹತುಶಾಹಿಯ ಆಳ್ವಿಕೆಗೊಳಪಟ್ಟ ನಾವಿನ್ನೂ ಅದರ ಹ್ಯಾಂಗೋವರ್‌ನಿಂದ ಹೊರಬರದಿರುವುದೇ ಆಗಿದೆ. ಪಶ್ಚಿಮದ ಗುಲಾಮಗಿರಿಯನ್ನು ತಿರಸ್ಕರಿಸಿದ ನಾವಿಂದು ಅದರದೇ ಆದರ್ಶಗಳ ಪರಿಪಾಲನೆಗೆ ಟೊಂಕಕಟ್ಟಿ ನಿಂತಿರುವುದು, ಇವತ್ತಿನ ವಿಪರ್ಯಾಸವಾಗಿದೆ.

ನಮ್ಮ ನಾಯಕರುಗಳಿಗೆ ಪೂರ್ವ ಮತ್ತು ಪಶ್ಚಿಮಗಳ ನಡುವಣ ಅಗಾಧ ಅಂತರದ ಅರಿವಿಲ್ಲದಿರುವುದೇ ನಾವು ಪಶ್ಚಿಮ ಮಾದರಿಯ ಅಭಿವೃದ್ಧಿ ಪಥವನ್ನು ಅಳವಡಿಸಿಕೊಳ್ಳಲು ಮುಖ್ಯ ಕಾರಣವಾಗಿದೆ. ಯಾಕೆಂದರೆ ಪಶ್ಚಿಮದ ಅಭಿವೃದ್ಧಿಯಾದದ್ದೇ ಅವರು ಅಳವಡಿಸಿಕೊಂಡ ವಸಾಹತುಶಾಹಿ ನೀತಿಯಿಂದ. ಪಶ್ಚಿಮ ರಾಷ್ಟ್ರಗಳ ಇವತ್ತಿನ ಅಭಿವೃದ್ಧಿ ಏನಿದೆಯೋ ಅದು ಮೂರನೇ ಜಗತ್ತನ್ನು ಶೋಷಿಸಿದ್ದರ ಫಲ ! ನೂರಾರು ವರ್ಷಗಳ ಕಾಲ ವಸಾಹತುಶಾಹಿ ನೀತಿಯಿಂದ ಬಡ ರಾಷ್ಟ್ರಗಳನ್ನು ಶೋಷಿಸಿ, ತನ್ಮೂಲಕ ತನ್ನೆಲ್ಲ ಆಶೋತ್ತರಗಳನ್ನು ಪಶ್ಚಿಮವು ಈಡೇರಿಸಿಕೊಂಡಿತು. ಆದ್ದರಿಂದ ನನ್ನ ದೃಷ್ಟಿಯಲ್ಲಿ ಪಶ್ಚಿಮದ ಅಭಿವೃದ್ಧಿ ಎಂದರೆ 'ದುರ್ಬಲರ ಸಮಾಧಿಯ ಮೇಲೆ ಕಟ್ಟಿದ ಮಹಲು !'

ಯೂರೋಪಿನ ಕೈಗಾರಿಕಾ ಕ್ರಾಂತಿಗೆ ಇವತ್ತು ನಾವೇನೇ ಕಾರಣಗಳನ್ನು (ಸಮುದ್ರ ಮಾರ್ಗ ಶೋಧನೆ, ಹೊಸ ಯಂತ್ರಗಳ ಆವಿಷ್ಕಾರ ಇತ್ಯಾದಿ.) ನೀಡಿದರೂ ಮುಖ್ಯವಾಗಿ ಪಶ್ಚಿಮ ರಾಷ್ಟ್ರಗಳು ಮೂರನೇ ಜಗತ್ತನ್ನು ಒತ್ತಾಯಪೂರ್ವಕವಾಗಿ ಕಚ್ಚಾವಸ್ತುಗಳನ್ನು ಪೂರೈಸುವ ತವರನ್ನಾಗಿ ಮಾಡಿಕೊಂಡಿದ್ದು ಮತ್ತು ಬಲವಂತವಾಗಿ ತಮ್ಮ ಉತ್ಪಾದನೆಗಳಿಗೆ ಸುಂಕರಹಿತ ಮಾರುಕಟ್ಟೆಯನ್ನಾಗಿ ಮಾಡಿಕೊಂಡದ್ದು ಕಾರಣ.

ಅಭಿವೃದ್ಧಿ ಮಂತ್ರವನ್ನು ಜಪಿಸುತ್ತಿರುವ ನಮ್ಮ ನಾಯಕರುಗಳಿಗೆ ಇದು ಗೊತ್ತಿಲ್ಲವೆಂದೇನೂ ಅಲ್ಲ. ಅವರದು ಜಾಣ ಕುರುಡು ! ಯಾಕೆಂದರೆ ನಮ್ಮ ಇವತ್ತಿನ ಪ್ರಭುತ್ವವೇನಿದೆಯೋ ಅದು ಪಶ್ಚಿಮದ ತದ್ರೂಪು ! ಆದ್ದರಿಂದಲೆ ಆಗ ಪಶ್ಚಿಮ ಅನ್ಯದೇಶಗಳನ್ನು ವಸಾಹತುಗಳನ್ನಾಗಿ ಮಾಡಿಕೊಂಡು ಶೋಷಿಸಿದ ರೀತಿಯಲ್ಲಿಂದು ನಮ್ಮ ಪ್ರಭುತ್ವಗಳು ನಮ್ಮದೇ ರೈತ-ದಲಿತ-ಕಾರ್ಮಿಕ ಮತ್ತು ಬುಡಕಟ್ಟು ಜನಾಂಗದ ವರ್ಗಗಳನ್ನು ಶೋಷಣೆಗೊಳಪಡಿಸುತ್ತಿವೆ. ಇದೊಂದು ರೀತಿಯ ಆಂತರಿಕ ವಸಾಹತುಶಾಹಿ ನೀತಿ.

ಇದೆಲ್ಲವನ್ನೂ ಮೀರಿ, 'ಪಶ್ಚಿಮ ಮಾದರಿ' ಅಭಿವೃದ್ಧಿ ಪಥದ ಬಗ್ಗೆ ನನಗಿರುವ ಆಕ್ಷೇಪಗಳೆಂದರೆ : ಮೊದಲನೆಯದಾಗಿ, ಪಶ್ಚಿಮದ ಅಭಿವೃದ್ಧಿ ಪರಿಸರವನ್ನು ಮಿತಿಮೀರಿ ಬಳಸಿದ್ದರಿಂದ ಆದದ್ದು. ಪೂರ್ವ ಯಾವತ್ತಿಗೂ ಪರಿಸರದ ಜೊತೆ ಹೊಂದಿಕೊಂಡು ತಾದಾತ್ಮ್ಯತೆಯಿಂದ ಬಾಳಿದ್ದರೆ, ಪಶ್ಚಿಮದ ದೃಷ್ಟಿಯಲ್ಲಿ ಪರಿಸರ ಮನುಷ್ಯನ ಬಯಕೆಗಳನ್ನು ಪೂರೈಸಲೆಂದೇ ಇರುವ ಒಂದು ಖಜಾನೆ. ಪರಿಸರಕ್ಕೆ ತನ್ನದೇ ಆದ ಮಿತಿಗಳಿವೆ ಮತ್ತು ಮಿತಿಮೀರಿದ ಬಳಕೆಯಿಂದ ಆ ಖಜಾನೆ ಖಾಲಿಯಾಗುವುದೆಂಬುದರ ಪರಿವೆಯಿಲ್ಲದೆ ಪಶ್ಚಿಮವು ನಿಸರ್ಗದ ಎಲ್ಲಾ ನಿಯಮಗಳನ್ನೂ ಮೀರಿ ಹಿರಿಯಣ್ಣನಂತೆ ವರ್ತಿಸುತ್ತಿದೆ.

''ಅಭಿವೃದ್ಧಿ ಎಂದರೆ ಏನು ? ಅದು ಎಂತಹ ಅಭಿವೃದ್ಧಿ ? ಮತ್ತು ಅದನ್ನು ಸಾಧಿಸಲು ನಾವು ಹಿಡಿಯಬೇಕಾದ ಹಾದಿ – ತೆರಬೇಕಾದ ಬೆಲೆ ಏನು ?'' ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಇನ್ನು ಎರಡನೆಯದು : ''ನಾವು ಸಾಧಿಸಲಿರುವ ಅಭಿವೃದ್ಧಿಯ ಫಲ ಎಂತಹದು ? ಮತ್ತು ಆ ಫಲ ಸಮುದಾಯದ ಎಲ್ಲ ವರ್ಗಗಳಿಗೂ ಸಂಪೂರ್ಣವಾಗಿ – ಸಮಾನವಾಗಿ ಹಂಚಿಕೆ ಆಗಲ್ಪಡುತ್ತಿದೆಯೇ ?'' ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದು. ಹೀಗೆ ವಿವೇಚಿಸಿ, ಸಂಯಮದಿಂದ ಸಾಧಿಸಿದ ಅಭಿವೃದ್ಧಿಯು ಮಾತ್ರ ಪರಿಣಾಮಕಾರಿಯಾಗಿರಲು ಮತ್ತು ಸಾರ್ಥಕವಾಗಿರಲು ಸಾಧ್ಯ. ಇಲ್ಲದಿದ್ದಲ್ಲಿ ಪಶ್ಚಿಮವನ್ನು ಅನುಕರಿಸಲು ಹೋಗಿ ನಮ್ಮತನವನ್ನು ಕಳೆದುಕೊಂಡು ಜಗತ್ತಿನ ಮುಂದೆ ಬೆತ್ತಲಾಗಿ ನಿಲ್ಲಬೇಕಾಗುತ್ತದೆ.

ಅದು ತನ್ನ ವಸಾಹತುಶಾಹಿ ಆಡಳಿತ ಕಾಲದಿಂದ ಹಿಡಿದು ಇವತ್ತಿನ ಆಧುನಿಕ ಸರಕಾರಗಳ ಕಾಲಕ್ಕೂ ಮೂರನೇ ಜಗತ್ತಿನ ಪರಿಸರವನ್ನು ಒಂದಲ್ಲಾ ಒಂದು ರೀತಿಯಲ್ಲಿ ವಿನಾಶಕ್ಕೆ ಗುರಿ ಮಾಡುತ್ತಿದೆ. ಇದಕ್ಕೆ ಹಲವಾರು ಉದಾಹರಣೆಗಳನ್ನು ನೀಡಬಹುದಾಗಿದೆ.

ಪಶ್ಚಿಮಕ್ಕೆ ಅಗತ್ಯವಿರುವ ಕಾಗದಕ್ಕಾಗಿ ಏಷ್ಯಾದ ಲಕ್ಷಾಂತರ ಹೆಕ್ಟೇರುಗಳಷ್ಟು ಉಷ್ಣವಲಯದ ಕಾಡುಗಳಿಂದು ಕುರುಚಲು ಕಾಡುಗಳಾಗಿ ಪರಿವರ್ತನೆಯಾಗಿವೆ. ಅಮೆರಿಕಾ ಒಂದರ ಮಾಂಸದ ಹಸಿವು ತೀರಿಸಲು ಬ್ರೆಜಿಲ್‌ನಂತಹ ರಾಷ್ಟ್ರಗಳ ಕಾಡು ವರ್ಷಕ್ಕೆ ಸಾವಿರಾರು ಚದರ ಕಿಲೋಮೀಟರ್‌ಗಳ ಪ್ರಮಾಣದಲ್ಲಿ ನಾಶಹೊಂದುತ್ತಿದೆ. ಯೂರೋಪು ಮತ್ತು ಅಮೆರಿಕಾಗಳ ವಾಹನಗಳ ಖಯಾಲಿಗಾಗಿ ಪಶ್ಚಿಮ ಏಷ್ಯಾದ ತೈಲ ನಿಕ್ಷೇಪಗಳು ಅತ್ಯಂತ ವೇಗವಾಗಿ ಖಾಲಿಯಾಗುತ್ತಿವೆ. ಪಶ್ಚಿಮದ ಅನೇಕ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಪೂರೈಸಲು, ಮೂರನೇ ಜಗತ್ತಿನ ಕೃಷಿ ಪದ್ಧತಿಯನ್ನೇ ಬದಲಾಯಿಸಿ, ಫಲವತ್ತಾದ ಭೂಮಿಯನ್ನು ಬಂಜರುಮಾಡಲಾಯಿತು. ಹೀಗೆ ಪಶ್ಚಿಮಕ್ಕೆ ಪರಿಸರವೆಂಬುದು ಕೇವಲ ಅದರ ಅಗತ್ಯವನ್ನು ಪೂರೈಸಲು ಇರುವ ಒಂದು ಸಾಧನವಾಗಿದೆ.

ವಾಸ್ತವ ಹೀಗಿರುವಾಗ ನಾವು ಪಶ್ಚಿಮ ಮಾದರಿ ಅಭಿವೃದ್ಧಿ ಪಥವನ್ನು ಅನುಸರಿಸುವುದೆಂದರೆ, ನಮ್ಮಲ್ಲಿನ್ನೂ ಉಳಿದಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಎಗ್ಗಿಲ್ಲದೆ ಬಳಸುವುದೇ ಆಗಿದೆ. ನಮ್ಮ ಬದುಕಿಗೆ ಬೇಕಾದ ಮೂಲಭೂತ ಅಗತ್ಯಗಳನ್ನು ಪೂರೈಸುವ ನಿಸರ್ಗವನ್ನು ನಾಶಮಾಡಿ ಸಾಧಿಸಲಿರುವ ಅಭಿವೃದ್ಧಿಯ ಫಲವನ್ನು ಅನುಭವಿಸಲು ನಮ್ಮ ಮುಂದಿನ ಪೀಳಿಗೆ ಬದುಕುಳಿಯುವುದೇ ಎಂಬುದೇ ಈಗ ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

ಇನ್ನು ಎರಡನೆಯದು: ಪಶ್ಚಿಮ ಮಾದರಿಯ ಅಭಿವೃದ್ಧಿಪಥದಲ್ಲಿರುವ ಇನ್ನೊಂದು ಆಕ್ಷೇಪಾರ್ಹ ಅಂಶವೆಂದರೆ, ಅನಗತ್ಯ ತಂತ್ರಜ್ಞಾನ ಮತ್ತು ಯಂತ್ರಗಳ ಬಳಕೆ. ನಮ್ಮ ರಾಷ್ಟ್ರದಲ್ಲಿ ಇವುಗಳ ಬಳಕೆ ಎಂದರೆ ಪಾರಂಪರಿಕ ತಂತ್ರಜ್ಞಾನಗಳ ಮತ್ತು ವೃತ್ತಿಪರ ಮಾನವ ಕೌಶಲ್ಯದ ನಾಶ ಎಂದರ್ಥವಷ್ಟೆ! ಹೊಸ ತಂತ್ರಜ್ಞಾನವೊಂದು ಕಾಲೂರಬೇಕಾದರೆ ಹಾಲಿ ಅಸ್ತಿತ್ವದಲ್ಲಿರುವ ಹಳೆಯ ತಂತ್ರಜ್ಞಾನವನ್ನು ಕೈಬಿಡುವುದು ವಾಡಿಕೆಯಾಗಿದೆ. ಈಗಾಗಲೇ ಇದರ ಪರಿಣಾಮಗಳನ್ನು ನಾವು ಕಾಣುತ್ತಿದ್ದೇವೆ. ಗ್ರಾಮೀಣ ಬದುಕಿನ ಅವಿಭಾಜ್ಯ ಭಾಗಗಳಾಗಿದ್ದ ಕಮ್ಮಾರಿಕೆ, ಕುಂಬಾರಿಕೆ, ಚಮ್ಮಾರಿಕೆ, ನೇಕಾರಿಕೆ ಮುಂತಾದ ವೃತ್ತಿಗಳು ಕಣ್ಮರೆಯಾಗುತ್ತಿವೆ. ಈ ವೃತ್ತಿಗಳನ್ನು ನಂಬಿಕೊಂಡಿದ್ದ ಲಕ್ಷಾಂತರ ಕುಟುಂಬಗಳಿಂದು ನಿರುದ್ಯೋಗದ ಬೆಂಕಿಯಲ್ಲಿ ಬೇಯುತ್ತಿವೆ. ಇದಕ್ಕೆ ತಾಜಾ ಉದಾಹರಣೆಯೆಂದರೆ, ಜೆ.ಸಿ.ಬಿ. ಎಂಬ ದೈತ್ಯ ಯಂತ್ರ! ಈ ಯಂತ್ರ ಬಂದ ಮೇಲೆ ಹಳ್ಳಿಗಳ ಲಕ್ಷಾಂತರ ಶ್ರಮಜೀವಿಗಳು ಕೆಲಸವಿಲ್ಲದೆ ಕೂರುವಂತಾಗಿದೆ. ಆಧುನಿಕ ಕೈಗಾರಿಕೆಗಳಿಂದಾಗಿ ಕೃಷಿ ಭೂಮಿ ಕಳೆದುಕೊಂಡ ರೈತರು, ಅವರನ್ನು ಅವಲಂಬಿಸಿದ್ದ ಕೃಷಿ ಕಾರ್ಮಿಕರು, ಹಳ್ಳಿಗಳ ಕುಶಲಕರ್ಮಿಗಳು ಅನ್ನವನ್ನರಸಿ ನಗರಗಳಿಗೆ ಗುಳೇ ಹೋಗುತ್ತಿದ್ದಾರೆ. ಹೀಗೆ ಪಶ್ಚಿಮ ನಮ್ಮ ಮುಂದೆ ತಂದು ಎಸೆಯುವ ತಂತ್ರಜ್ಞಾನಗಳಿಂದ ಹಳ್ಳಿಗಳ ಆತ್ಮ ನಾಶವಾಗುತ್ತಾ ನಗರಗಳು ಮಾತ್ರ ಬೆಳೆಯ ತೊಡಗಿವೆ.

ಈ ಮಾದರಿಯ ಇನ್ನೊಂದು ದೋಷವೆಂದರೆ 'ನಗರೀಕರಣ'! ಯಾಕೆಂದರೆ ಪಶ್ಚಿಮ ಮಾದರಿಯ ಅಭಿವೃದ್ಧಿಪಥದಲ್ಲಿ ಕೈಗಾರಿಕೆಗಳು ನಗರ ಕೇಂದ್ರಿತವಾಗಿ ಹಳ್ಳಿಗಳು ನಗಣ್ಯವಾಗುತ್ತವೆ. ನಗರಗಳಿಗೆ ಕೆಲಸ ಹುಡುಕಿ ಬಂದ ವಲಸಿಗರಿಂದ ನಗರಗಳಲ್ಲಿ ಕೊಳಚೆ ಗೇರಿಗಳು ಸೃಷ್ಟಿಯಾಗುತ್ತವೆ. ನಗರ ಮತ್ತು ಹಳ್ಳಿಗಳ ನಡುವಿನ ಅಂತರ ಹೆಚ್ಚಾಗುತ್ತಿದೆ. ಆರ್ಥಿಕ ಅಸಮಾನತೆಯಿಂದ ಸಮಾಜದ ಸ್ವಾಸ್ಥ್ಯ ಹದಗೆಡುತ್ತಿದೆ. ಇದುವರೆಗೂ ಸ್ವಾಭಿಮಾನದಿಂದ ಬದುಕುತ್ತಿದ್ದ ಗ್ರಾಮೀಣ ಸಮುದಾಯ ಅನ್ನಕ್ಕಾಗಿ ನಗರಗಳ ಎದುರು ಬೊಗಸೆಯೊಡ್ಡಿ ದೈನ್ಯವಾಗಿ ನಿಲ್ಲಬೇಕಾಗುತ್ತದೆ. ಕಳೆದೊಂದು ದಶಕದಲ್ಲಿ ಇಂತಹ ಚಿತ್ರವೊಂದು ನಮ್ಮ ಹಳೇ ಮೈಸೂರು ಪ್ರಾಂತ್ಯದಲ್ಲಿ ಸೃಷ್ಟಿಯಾಗಿದೆ. ಬಹುತೇಕ ಕೈಗಾರಿಕೆಗಳು ಬೆಂಗಳೂರಿನಲ್ಲಿ ಕೇಂದ್ರೀಕೃತವಾದುದರ ಪರಿಣಾಮವಾಗಿ ಹಳೇ ಮೈಸೂರು ಪ್ರಾಂತ್ಯದಲ್ಲಿ ಕೃಷಿ ಚಟುವಟಿಕೆಗಳಿಗೆ ಜನ ಸಿಗದೆ ಕೃಷಿ ತನ್ನ ಪ್ರಾಮುಖ್ಯತೆ ಕಳೆದುಕೊಳ್ಳುತ್ತಿದೆ.

ಹೀಗೆ ರೂಪುಗೊಳ್ಳುವ ನಗರಕೇಂದ್ರಿತ ಸಾಮಾಜಿಕ ವ್ಯವಸ್ಥೆ ನಮ್ಮ ಸಾಂಸ್ಕೃತಿಕ ಬದುಕನ್ನೂ ನಾಶಮಾಡ ತೊಡಗುತ್ತದೆ. ನಾಡಿನ ವೈವಿಧ್ಯಮಯ ಜೀವನಕ್ರಮ

ಕಣ್ಮರೆಯಾಗಿ ಏಕರೂಪದ ಆಧುನಿಕ ನಾಗರಿಕತೆಯೊಂದು ಸೃಷ್ಟಿಯಾಗುತ್ತದೆ. ಈಗಾಗಲೇ ಇದರ ಅನುಭವ ಸ್ವಲ್ಪಮಟ್ಟಿಗೆ ನಮ್ಮ ಮೇಲೆ ಆಗಲು ಶುರುವಾಗಿದೆ. ಇವತ್ತು ಭಾರತದ ಯಾವುದೇ ನಗರ, ಪಟ್ಟಣಗಳಿಗೆ ಹೋದರೂ ಹೆಚ್ಚು-ಕಡಿಮೆ ಒಂದೇ ರೀತಿಯ ಆಹಾರಕ್ರಮ, ಜೀವನಶೈಲಿ, ಸಂಗೀತ, ಕಲೆಗಳನ್ನು ಕಾಣ ಬಹುದಾಗಿದೆ. ಸಾಂಪ್ರದಾಯಿಕ ಆಹಾರಗಳ ಬದಲಿಗೆ ಫಾಸ್ಟ್‌ಫುಡ್, ಭಾರತೀಯ ಸಂಗೀತದ ಬದಲಿಗೆ ಎರವಲು ಪಾಶ್ಚಾತ್ಯ ಸಂಗೀತ, ಪ್ರಾದೇಶಿಕ ಭಾಷಾ ಸಾಹಿತ್ಯದ ಬದಲಿಗೆ ಇಂಗ್ಲಿಷಿನ ಟೊಳ್ಳು ಸಾಹಿತ್ಯ ಹೀಗೆ ನಮ್ಮ ಎಲ್ಲ ದೇಶಿ ಸಂಸ್ಕೃತಿ ಏಕರೂಪತೆ ಪಡೆಯುತ್ತಿದೆ.

ಕೊನೆಯದಾಗಿ ಹೇಳುವುದಾದರೆ, 'ಪಶ್ಚಿಮ ಮಾದರಿ' ಅಭಿವೃದ್ಧಿ ಪಥ 'ಹಿಂಸೆ'ಯನ್ನು ತನ್ನೊಳಗೆ ಅಡಗಿಸಿ ಕೊಂಡಿದೆ. 'ಅಭಿವೃದ್ಧಿ' ಎಂಬ ಹೆಸರಿನಲ್ಲಿ ಅದು ನಡೆಸುವ ಯಾವುದೇ ಕಾರ್ಯಾಚರಣೆಯನ್ನು ವಿರೋಧಿ ಸುವವರನ್ನು ವಿದ್ರೋಹಿಗಳೆಂದು, ಪ್ರತಿಗಾಮಿಗಳೆಂದು ಹೆಸರಿಸಿ, ಹಿಂಸೆಯ ಮೂಲಕ ಹತ್ತಿಕ್ಕಲು ಪ್ರಯತ್ನಿಸುತ್ತದೆ. ಹಿಂಸೆಯನ್ನು ವಿರೋಧಿಸುವ ನಾಟಕವಾಡುತ್ತಲೇ ಅದು 'ಪ್ರಭುತ್ವ'ದ ಹಿಂಸೆಯನ್ನು ಸಮರ್ಥಿಸಿಕೊಳ್ಳುತ್ತದೆ. ಇದಕ್ಕೆ ಅತ್ಯುತ್ತಮ ಉದಾಹರಣೆ ಪಶ್ಚಿಮ ಬಂಗಾಲದ ನಂದಿಗ್ರಾಮದ ಹಿಂಸಾಚಾರ. ಭೂಮಿಯನ್ನು ಕಳೆದುಕೊಂಡು ಪ್ರತಿಭಟಿಸಿದ ರೈತರ ಮೇಲೆ ಅಲ್ಲಿನ ಸರಕಾರ ನಡೆಸಿದ ಹಿಂಸಾಚಾರವನ್ನು ನಮ್ಮ ಅಭಿವೃದ್ಧಿಯ ಹರಿಕಾರರು ಯಾವುದೇ ಲಜ್ಜೆಯಿಲ್ಲದೆ ಸಮರ್ಥಿಸಿ ಕೊಳ್ಳುತ್ತಿದ್ದಾರೆ. ಅದೇ ರೀತಿ 'ಅಭಯಾರಣ್ಯದ' ಹೆಸರಿನಲ್ಲಿ ಸರಕಾರ ಗಿರಿಜನರನ್ನು ಒಕ್ಕಲೆಬ್ಬಿಸಲು ಯತ್ನಿಸುತ್ತಿರುವುದನ್ನು ವಿರೋಧಿಸಿ, ಪ್ರತಿಭಟಿಸುತ್ತಿರುವ ಗಿರಿಜನರಿಗೆ ಅಭಿವೃದ್ಧಿ ವಿರೋಧಿ ಅನಾಗರಿಕರೆಂಬ ಪಟ್ಟಕಟ್ಟಿದ ಸರಕಾರೀ ಹಿಂಸೆಯನ್ನು ಹೇಗೆ ತಾನೆ ಸಮರ್ಥಿಸಲು ಸಾಧ್ಯ? 'ಹಲವರ ತ್ಯಾಗದಿಂದ ಕೆಲವರ ಕಲ್ಯಾಣ' ಎಂಬ ಸೂತ್ರದ ಮೇಲೆ ನಿಂತು ಅಭಿವೃದ್ಧಿ ಸಾಧಿಸಲು ಹೊರಟ ನಮ್ಮ ಬಂಡವಾಳಶಾಹಿಗಳಿಗೆ ಪಶ್ಚಿಮ ಆದರ್ಶಪ್ರಾಯವಾಗಿದೆ.

ಹೀಗೆ 'ಪಶ್ಚಿಮ ಮಾದರಿ' ಅಭಿವೃದ್ಧಿ ಪಥವು ನಮ್ಮ ಒಳಿತನ್ನೆಲ್ಲ ನಾಶಮಾಡಿ ಕೆಡುಕನ್ನು ಸೃಷ್ಟಿಸಲು ಬಂದ ಮಾಯಾವಿಯಂತೆ ಕಾಣುತ್ತಿದೆ. ಆದರೆ ಇವತ್ತಿನ ಸುಖವೇ ಮುಖ್ಯವಾಗಿ ಮುಂದಿನ ಪೀಳಿಗೆಯ ಬಗ್ಗೆ ಕಾಳಜಿಯಿರದ ನಮ್ಮ ನಾಯಕರುಗಳಿಗೆ, ಪರ್ಯಾಯ ಅಭಿವೃದ್ಧಿ ಮಾದರಿಯನ್ನು ಹುಡುಕುವ ತಾಳ್ಮೆಯಾಗಲಿ, ದೂರದರ್ಶಿತ್ವವಾಗಲಿ ಇಲ್ಲದಿರುವುದು ಈ ನಾಡಿನ ದುರಂತ. ವಿನಾಶಕಾರಿಯಾದ ಈ ಪಶ್ಚಿಮ ಮಾದರಿಯನ್ನು ಕೈಬಿಟ್ಟು, ನಮ್ಮ ಘನತೆಗೆ ಕುಂದುತರದ, ಸ್ವಾಭಿಮಾನಕ್ಕೆ ಧಕ್ಕೆಯುಂಟುಮಾಡದಂತಹ ಮತ್ತು ಮುಂದಿನ ಪೀಳಿಗೆಗೆ ಮಾದರಿಯಾಗಬಲ್ಲಂತಹ ಒಂದು ಹೊಸ ರೀತಿಯ ಅಭಿವೃದ್ಧಿ ಮಾದರಿಯನ್ನು ನಾವೀಗ ಕಂಡುಕೊಳ್ಳಬೇಕಾಗಿದೆ.

ಕು. ಸ. ಮಧುಸೂದನ
ವಿಜಯಾ ಬ್ಯಾಂಕ್ ಮಹಡಿ
ರಂಗೇನಹಳ್ಳಿ - ೫೭೭ ೧೪೪, ಚಿಕ್ಕಮಗಳೂರು ಜಿಲ್ಲೆ

# ಬೋರಂಗಿ ಬಣ್ಣದ ಕಾರಂಜಿ ಚಲುವಿ

ಅಂಜೂರಿ ಮೈಯ ಆ ಚಿಂಪಾಂಜಿ ಚಲುವಿ ಪಕ್ಕದಲ್ಲೇ ಕುಂತದ್ದು ನಾ ನೋಡಲೇ ಇಲ್ಲ! ಪಕ್ಕದಲ್ಲಿ ಹಳೇ ಆಲದಮರದ ಬೀಳು ಬಿಳಲಿನ ಡೂಗು ಮುದಿಕಿ!

ವಣಗಿದ ಜಾಲೀಕಾಯಿಯಂತೆ ಅಂಕುಡೊಂಕಾದ ಆ ಡೂಗು ಮುದಿಕಿ ಡಾಬಾದ ಮುಂದೆ ಕುಂತಿತ್ತು. ಮುದಿಕಿ ಅಂದರೆ ಮುದಿಕಿ. ತೂಕ ಮಾಡಿದರೆ ಹತ್ತು ಗ್ರಾಮು ಆಗುತ್ತಿತ್ತು. ಹರಕು ಸೀರೆ, ಅದರಲ್ಲಿ ದೀಡ ಡಜನ್ ಹೊಲಿಗೆ, ಬಾಯಿ ಗುಳಬುಟ್ಟಿ. ಕಣ್ಣು ಗುಳಕವ್ವ. ಮೈ ವಡಕು ಮಗಿ.

ಮುದಿಕಿ ನನ್ನ ಹತ್ತಿರ ಬಂದು ತಾನು ಮಾರಲು ತಂದ ಹುರಿದ ಸೇಂಗಾ ಕಾಳಿನ ಬುಟ್ಟಿ ಚಾಚಿತು –

''ಬಿಸೇವದಾವು... ಐವತ್ತ ಪೈಸಾ... ಹಾಕ್ಲೇನಪ್ಪಾ?''

ನಾನೆಂದೆ – ''ಬೇಡಬೇ ಯಮ್ಮಾ... ಸರಿ ಅತ್ಲಾಗ...''

ಮುದಿಕಿಯ ಕಣ್ಣು ನಿರಾಸೆಯಿಂದ ಸುಟ್ಟ ಹಲಸಿನ ಬೀಜವಾದವು.

ಡಾಬಾದಲ್ಲಿ ಆಗಲೆ ನಮ್ಮ ಬಸ್ಸಿನವರು... ಗೂಳಿಗಳು ನುಗ್ಗಿದಂತೆ ನುಗ್ಗಿದ್ದರು. ಹೋರಿಗಳು ನಾಚಬೇಕು... ಹಾಗೆ ಬಕಬಕ ತಿನ್ನುತ್ತ ಬಕಾಸುರ ನಾಟಕ ಆರಂಭಿಸಿದ್ದರು.

ಅವಳ ಎದುರಿಗೇ ನಾನು ದುಬಾರಿ ಬೆಲೆಯ ಕೋಲ್ಡ್ರಿಂಕ್ಸ ಬಾಟಲಿ ಖಾಲಿ ಮಾಡಿದೆ. ಮುದಿಕಿ ಪಕಪಕಾ ಬಾಯಿ ಬಿಟ್ಟು ನನ್ನನ್ನು ಗರಬ್ಯಾಡಿ ನೋಡಿತು.

ಅವಳ ಮುಂದೆಯೇ ಈಗ ಕಿಸ್ಮಿಸ್ಸಿನ ಚಾಕಲೇಟು ಬಾಯಿಗೆ ಹಾಕಿ ಗುಳುಂಗುಳಾಡಿಸಿದೆ.

ಮಾರಾಜನನ್ನು ನೋಡುವ ಮಾಣಿಯಂತೆ ಮುದಿಕಿ ನನ್ನನ್ನೇ ನೋಡುತ್ತಿತ್ತು. ಆ ಮುದಿಕಿಯ ಪಕ್ಕದಲ್ಲಿ ಈಗ ಬೋರಂಗಿ ಬಣ್ಣದ ಕಾರಂಜಿ ಯೌವನದ ಸುಂದರ ಹುಡಿಗಿಯೊಂದು ಹೊಸದಾಗಿ ಬಂದು ಕೂತಿತ್ತು. ಹುಂಚೀ ಹರೆಯದ ಆ ಗಿಲಿಗಿಂಚಿ ಚಲುವಿ ಆ ಮುದಿಕಿಯ ಬಡತನದ ಸಾಕ್ಷಾತ್ಕಾರ ವೆಂಬಂತೆ ತನ್ನ ಹರಿದ ಪೋಲಕಾದ ಒಳಮೈ ಕಾಣಿಸುತ್ತ ಕೂತಿತ್ತು. ಅದರ ತುಂಬಿ ತುಳುಕಿದ ಎದೆಯ ಯೌವನ ಬಯಲ ಬಸವಣ್ಣನಾಗಿ ಆ ಹರಕಾಟಿ ಕುಬಸದಲ್ಲಿ ಗಿಣಿಮೂಗು ಹಾಕುತ್ತಿತ್ತು!

ಆ ಹುಡಿಗಿಯನ್ನು ನೋಡಿ ನನಗೆ ಈಗ ಏಕ್ದಂ ಎಲ್ಲಿಂದಲೋ ಕರುಣೆ ಉಕ್ಕಿ ಬಂತು!

ಮುದಿಕಿಗೆ ಕೇಳಿದೆ –

''ಯಮ್ಮಾ ಯಾರು ಈಕಿ... ನಿನ್ನ ಮಗಳೇನು?''

''ಮಗಳೂ ಅಲ್ಲ ತಂದೇ... ಈಕೆ ನನ್ನ ಮಮ್ಮಗಳು...''

ನನಗೆ ನಾಚಿಕೆಯಾಯಿತು. ನಾನು ಇಂಥ ಅಸಂಬದ್ಧ ಪ್ರಶ್ನೆ ಕೇಳಬಾರದಿತ್ತೆಂದು ಅನಿಸಿತು.

ಮುದಿಕಿ ತನ್ನ ಮೊಮ್ಮಗಳ ಗಲ್ಲಕ್ಕೆ ತಿವಿದು ಅವಳಿಗೆ ಹೇಳಿತು –

''ನಿನಗೂ ಇಂಥಾ ಗಂಡ ಸಿಗಲಿ...''

ಖರೆ ಹೇಳಬೇಕೆಂದರೆ ಆ ಹುಡಿಗಿಯ ನಾಲ್ಕು ಪಟ್ಟು ವಯಸ್ಸಿನವ ನಾನು!

ಆ ಹುಡಿಗಿ ನನ್ನನ್ನು ಮ್ಯಾದಾರ ಕಾಮಣ್ಣನನ್ನು ನೋಡಿದಂತೆ ಹುಳುಹುಳು ಹುಳ್ಳಾಡಿಸಿ ನೋಡಿತು. ಮಗುವಿಗಿಂತಲೂ ಮಗು. ಈ ಲಬಾಡ ಲಂಪಟ ಲೋಕದ ಚುಂಗುಚೂರು ಅರಿಯದ ಹೊಂಗನಸಿನ ಆ ಬಾಲೆ ಚಲುವುದುಂಬಿದ ಚನ್ನಂಗಿ ಬ್ಯಾಳಿಯಾಗಿತ್ತು.

ನನಗೆ ಈಗ ಖರೆಖರೇ ಕರುಣೆ ಉಕ್ಕಿಬಂದು ಆ ಮುದಿಕಿಗೆ ಹತ್ತು ರೂಪಾಯಿ ಕಾಣಿಕೆ ಕೊಡಲು ಕಿಸೆಗೆ ಕೈ ಹಾಕಿದೆ. ನೂರರ ನೋಟುಗಳ ಪೆಂಡಿಯಲ್ಲಿ ಹತ್ತರ ನೋಟು ಬೇಗ ಸಿಗಲೇ ಇಲ್ಲ. ಇತ್ತ... ಪುಗಸೆಟ್ಟಿ ಕೂಳಿನ ಪುರಮಾಣ ಢರಕಿ ಹೊಡೆದ ಕಂಡಕ್ಟರ ಭಿರ್ರಂತ ಸೀಟಿ ಊದಿದ. ರಾತ್ರಿಯ ಬಿಳೀ ಭೂತಗಳಂತೆ ಜನ ಕೆಕ್ಕರಿಸಿ ಉಗುಳಿ ಓಡಿ ಬಂದರು. ಬಸ್ಸು ಸ್ಟಾರ್ಟ ಆಗಿ ಚಲಿಸಿಯೇ ಬಿಟ್ಟಿತು. ನಾನು ಓಡುತ್ತ ಹೋಗಿ ಬಸ್ಸು ಹತ್ತಿದೆ.



ಆ ಮುದಿಕಿ... ನಾನೇನಾದರೂ ಆ ದೊಡ್ಡ ನೋಟು ಅವಳ ಕೈಯಲ್ಲಿ ಇಟ್ಟೇನು... ಎಂದು ಕೈ ಚಾಚಿತ್ತು! ಆದರೆ ಬಸ್ಸಿನ ರಭಸದಲ್ಲಿ ನನ್ನ ನೋಟು ನನ್ನ ಕೈಯಲ್ಲಿಯೇ ಉಳಿಯಿತು!

ಆ ಹುಡುಗಿ ನನ್ನ ದಾರಿಯಲ್ಲಿ ನೂರು ಕನಸುಗಳನ್ನು ಕೇರಿ ಕಣ್ಣು ತೂರಿತ್ತು!

ನೋಟು ನನ್ನ ಕೈಯಲ್ಲಿ ಉಳಿಯಿತು... ಕಣ್ಣೀರು ಅವಳ ಕಣ್ಣಲ್ಲಿ ಉರುಳಿತು!

ಬಸ್ಸು ಬಕಾಸುರನಂತೆ ಬಂವ್‌ಗುಟ್ಟಿ ಓಡ ತೊಡಗಿತು...

ರಾತ್ರಿ ಕುಲುಕುಲು ಕಣ್ಣುಹೊಡೆದು ನಕ್ಕಿತು...!!

ಪ್ರೊ|| ಜಿ. ಎಚ್. ಹನ್ನೆರಡುಮಠ
ನಂ. ೫, 'ಮಾವು ಮಲ್ಲಿಗೆ', ಯೋಗಭವನ, ಇಂದ್ರಪ್ರಸ್ಥ,
ಬನ್ನೇರುಘಟ್ಟದ ದಾರಿ, ಗೊಟ್ಟಿಗೆರೆ ಅಂಚೆ,
ಬೆಂಗಳೂರು-೫೬೦೦೮೩

# ಕುವೆಂಪು ಮತ್ತು ಮತಾಂತರ

ಡಾ|| ಎಸ್. ಎಲ್. ಭೈರಪ್ಪನವರಿಂದ ಪ್ರಣೀತಗೊಂಡ ಮತಾಂತರದ ಚರ್ಚೆಯನ್ನು ಈಚೆಗೆ ನಾವೆಲ್ಲ ಗಮನಿಸಿದ್ದಾಯಿತು. ಪ್ರಸಿದ್ಧರು, ಪಂಡಿತರು, ಪ್ರಗತಿಪರರೂ ಭಾಗವಹಿಸಿದ್ದ ಈ ಚರ್ಚೆ ತುಂಬಾ ತೆಳುವಾದ ಪರ-ವಿರೋಧಗಳ ನೆಲೆಯಲ್ಲಿ ನಡೆಯಿತು. ಭಾರತದಲ್ಲಿ ಮಾತ್ರ ಮತಾಂತರ ನಡೆಯುತ್ತಿಲ್ಲ, ನಡೆದಿಲ್ಲ. ಇದೊಂದು ಜಾಗತಿಕ ವಿದ್ಯಮಾನ. ಏಷ್ಯಾ, ಆಫ್ರಿಕಾದ ದೇಶಗಳು ಇತಿಹಾಸದ ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ಮತಾಂತರದ ಪ್ರಭಾವಕ್ಕೆ ಒಳಗಾಗಿವೆ. ವಸಾಹತುಶಾಹಿ ವಾಣಿಜ್ಯ ನೀತಿ, ವಿಜ್ಞಾನ ಇವುಗಳ ಮೂಲಕ ಮಾತ್ರವಲ್ಲದೆ ಪಶ್ಚಿಮವು ಮತಾಂತರದ ಮೂಲಕವೂ ಈ ದೇಶಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಪ್ರಯತ್ನಿಸಿದೆ. ಹಾಗಾಗಿ ಇಂತಹ ವಿದ್ಯಮಾನವೊಂದನ್ನು ಪರ-ವಿರೋಧಗಳ ಸರಳೀಕೃತ ನೆಲೆಯಲ್ಲಿ ಗ್ರಹಿಸಲಾಗುವುದಿಲ್ಲ. ಪಶ್ಚಿಮದ ಪ್ರಯತ್ನ-ಪ್ರಯೋಗಗಳನ್ನು ಬದಿಗಿಟ್ಟರೂ ಈ ದೇಶದ ಇತಿಹಾಸದಲ್ಲೇ ಬೇರೆ ಬೇರೆ ಧರ್ಮ-ಮತ-ಜಾತಿಗಳ ನಡುವೆ ಮತಾಂತರ, ಕಿತ್ತಾಟ ನಡೆದಿವೆ. ಈ ಪ್ರಕ್ರಿಯೆಗೆ ಆಧುನಿಕತೆಯ ಸಂದರ್ಭದಲ್ಲಿ ಬೇರೆ ಬೇರೆ ಆಯಾಮಗಳು ಪ್ರಾಪ್ತವಾಗಿವೆ. ಇದನ್ನೆಲ್ಲ ಭೈರಪ್ಪ ಪ್ರಣೀತ ಚರ್ಚೆ ಗಮನಿಸಲೇ ಇಲ್ಲ.

ಈ ಹಿನ್ನೆಲೆಯಲ್ಲಿ ನಮ್ಮ ಕುವೆಂಪು ಈ ಸಮಸ್ಯೆಯನ್ನು ಹೇಗೆ ಗ್ರಹಿಸಿದರು ಎಂಬ ಕುತೂಹಲಕ್ಕಾಗಿ ನಾನು ''ಮದುಮಗಳು'' ಕಾದಂಬರಿಯನ್ನು ಮತ್ತೆ ಓದಿದೆ. ಕುವೆಂಪುಗೆ ಬ್ರಾಹ್ಮಣ್ಯದ ಬಗ್ಗೆ, ಜಾತಿಪದ್ಧತಿಯ ಬಗ್ಗೆ, ಹಿಂದೂಧರ್ಮದ ಬಗ್ಗೆ ಇದ್ದ ನಿಲುವು ನಮಗೆಲ್ಲ ಗೊತ್ತೇ ಇದೆ. ಆದರೂ ಕುವೆಂಪು ರೀತಿಯ ಕಲಾವಿದರೊಬ್ಬರು ಸೃಜನಶೀಲ ಒತ್ತಡ-ಚೌಕಟ್ಟಿನಲ್ಲಿ ಈ ವಿದ್ಯಮಾನವನ್ನು ಗ್ರಹಿಸುವ ರೀತಿಯನ್ನು ಓದುಗರ ಗಮನಕ್ಕೆ ತರಬೇಕೆಂದು ನನಗನ್ನಿಸಿತು.

ಕುವೆಂಪುಗೆ ಮತಾಂತರ ಕುರಿತಂತೆ ಪರ-ವಿರೋಧದ ಸರಳೀಕೃತ ನೆಲೆಗಳಿಲ್ಲ. ಈ ವಿದ್ಯಮಾನದ ಸಂಕೀರ್ಣತೆಯನ್ನು ಕುವೆಂಪು ಎಲ್ಲ ಸ್ತರಗಳಲ್ಲೂ ಗಮನಿಸಲು ಪ್ರಯತ್ನಿಸುತ್ತಾರೆ. ಆಮಿಷಗಳ ಮೂಲಕ ದುರ್ಬಲ ಮನಸ್ಸಿನ ಜನರನ್ನು ಮತಾಂತರಗೊಳಿಸುವುದನ್ನು ಕುವೆಂಪು ಒಪ್ಪುವುದಿಲ್ಲ. ಆದರೆ ಮತಾಂತರದಿಂದ ಮೂಡಿಬರುವ ಸಾಮಾಜಿಕ ಚಲನೆ-ತಿಳುವಳಿಕೆ, ಹೊಸ ರೀತಿಯ ಜ್ಞಾನದ ಪ್ರವೇಶ ಇವುಗಳನ್ನು ಸ್ವಾಗತಿಸುತ್ತಾರೆ. ರಾಮಕೃಷ್ಣ - ವಿವೇಕಾನಂದ ದರ್ಶನವನ್ನು ಒಪ್ಪುವ ಕುವೆಂಪು ಮೂಢನಂಬಿಕೆ, ಜಾತಿಪದ್ಧತಿಯನ್ನು ವಿರೋಧಿಸುತ್ತಾರೆ. ಮತಾಂತರದ ಪ್ರಯತ್ನಗಳು ಇತಿಹಾಸದ ಒಂದು ಘಟ್ಟದಲ್ಲಿ... ಅನಿವಾರ್ಯವೂ, ಅಪೇಕ್ಷಣೀಯವೂ ಆದಂತಹ ಒಂದು ಪ್ರಕ್ರಿಯೆ ಎಂಬುದನ್ನು ಕೂಡ ಸೂಚಿಸುತ್ತಾರೆ. ಇಂತಹ ಸಂಕೀರ್ಣ ನಿಲುವುಗಳನ್ನು ಕಾದಂಬರಿಯ ವಿವರಗಳಿಂದಲೂ ತಿಳಿಯಬಹುದು. ಈ ವಿವರಗಳ ವಿಶೇಷವೆಂದರೆ ಮತಾಂತರದ ಮೌಲಿಕತೆ- ಅನಿವಾರ್ಯತೆಯ ಕಡೆಯೇ ಗಮನ ಕೊಡದೆ ಒಂದು ಕಾಲದ ದೈನಿಕ ಬದುಕಿನ ವಿವರಗಳು, ಆ ಕಾಲದ ಮನುಷ್ಯರ ಆಸೆ-ಆಕಾಂಕ್ಷೆಗಳ ಬಗ್ಗೆ ಕೂಡ ಕಾದಂಬರಿ ಗುಟ್ಟುಗಳನ್ನು ಬಿಟ್ಟುಕೊಡುತ್ತದೆ. ಮತಾಂತರಕ್ಕೆ ಪ್ರಯತ್ನಿಸುತ್ತಿರುವವರ ಆತಂಕ, ಕಷ್ಟಗಳನ್ನು ಕೂಡ ಕುವೆಂಪು ಗಮನಿಸುತ್ತಾರೆ. ಮನುಷ್ಯರ ಚರಿತ್ರೆಗಳಿಂದ ತಪ್ಪಿಸಿಕೊಂಡಾಗ ಇಲ್ಲ ಮನುಷ್ಯರ ಚರಿತ್ರೆಯನ್ನು ಗಮನಿಸಿದೆ ಹೋದಾಗ ಮಾತ್ರ ನಾವು ಪರ-ವಿರೋಧದ ಸರಳೀಕೃತ ನೆಲೆಗಳಲ್ಲಿ ಮಾತನಾಡುತ್ತೇವೆ. ನಮಗೆ ಇರುವ ತೊಂದರೆಯೆಂದರೆ, ಮನುಷ್ಯ ಚರಿತ್ರೆಯ ಬಗ್ಗೆ ನಮ್ಮ ಗಮನ ಸೆಳೆಯುವಂತಹ ವೈಯಕ್ತಿಕ ಚರಿತ್ರೆಗಳು ನಮ್ಮಲ್ಲಿ ಇಲ್ಲದೆ ಇರುವುದು. ಕುವೆಂಪು ಕಾದಂಬರಿ, ಕಾರಂತರ 'ಚೋಮನ ದುಡಿ'ಯಂತಹ ಕೃತಿಗಳ ಮೂಲಕ ಮಾತ್ರವೇ ನಾವು ಇಂತಹ ವೈಯಕ್ತಿಕ ಚರಿತ್ರೆಗಳನ್ನು ನಮ್ಮದನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ.

* * *

ಕ್ರೈಸ್ತಧರ್ಮದ ಪ್ರವೇಶ-ಪ್ರಭಾವವು ಈ ಕಾದಂಬರಿಯ ಒಟ್ಟು ವಿನ್ಯಾಸದೊಂದಿಗೆ ಬೇರೆ ಬೇರೆ ಸ್ತರಗಳಲ್ಲಿ ಹಾಸುಹೊಕ್ಕಾಗಿದೆ. ಸುಮಾರು ೧೮ನೇ ಅಧ್ಯಾಯದಿಂದ ಇದರ ವಿವರಗಳು ನಮಗೆ ಸಿಗುತ್ತವೆ. ಪಾದ್ರಿ ಜೀವರತ್ನಯ್ಯನ ಬೈಸಿಕಲ್ ಸವಾರಿಯ ಬಗ್ಗೆ ಗುತ್ತಿಯೂ ಸೇರಿದಂತೆ ಕೆಳಸ್ತರದ ಜನರಿಗೆ ಕುತೂಹಲ, ವ್ಯಂಗ್ಯ, ತಮಾಷೆ ತುಂಬಿದ ನಿಲುವುಗಳಿವೆ. ಸೈಕಲ್‌ನ ವಿವರಗಳು, ನಾನಾ ಭಾಗವು ಹುಟ್ಟಿಸುವ ಕೌತುಕ, ಸವಾರಿ ಮಾಡುವ ರೀತಿ ಎಲ್ಲವನ್ನೂ ಕುತೂಹಲ – ಅನುಮಾನದಿಂದ



ಕುವೆಂಪುಗೆ ಮತಾಂತರ ಕುರಿತಂತೆ ಪರ-ವಿರೋಧದ ಸರಳೀಕೃತ ನೆಲೆಗಳಿಲ್ಲ. ಈ ವಿದ್ಯಮಾನದ ಸಂಕೀರ್ಣತೆಯನ್ನು ಕುವೆಂಪು ಎಲ್ಲ ಸ್ತರಗಳಲ್ಲೂ ಗಮನಿಸಲು ಪ್ರಯತ್ನಿಸುತ್ತಾರೆ. ಆಮಿಷಗಳ ಮೂಲಕ ದುರ್ಬಲ ಮನಸ್ಸಿನ ಜನರನ್ನು ಮತಾಂತರಗೊಳಿಸುವುದನ್ನು ಕುವೆಂಪು ಒಪ್ಪುವುದಿಲ್ಲ. ಆದರೆ ಮತಾಂತರದಿಂದ ಮೂಡಿಬರುವ ಸಾಮಾಜಿಕ ಚಲನೆ-ತಿಳುವಳಿಕೆ, ಹೊಸ ರೀತಿಯ ಜ್ಞಾನದ ಪ್ರವೇಶ ಇವುಗಳನ್ನು ಸ್ವಾಗತಿಸುತ್ತಾರೆ. ರಾಮಕೃಷ್ಣ -ವಿವೇಕಾನಂದ ದರ್ಶನವನ್ನು ಒಪ್ಪುವ ಕುವೆಂಪು ಮೂಢನಂಬಿಕೆ, ಜಾತಿ ಪದ್ಧತಿಯನ್ನು ವಿರೋಧಿ ಸುತ್ತಾರೆ. ಮತಾಂತರದ ಪ್ರಯತ್ನಗಳು ಇತಿಹಾಸದ ಒಂದು ಘಟ್ಟದಲ್ಲಿ ..ಅನಿವಾರ್ಯವೂ, ...ಅಪೇಕ್ಷಣೀಯವೂ ಆದಂತಹ ಒಂದು ಪ್ರಕ್ರಿಯೆ ಎಂಬುದನ್ನು ಕೂಡ ಸೂಚಿಸುತ್ತಾರೆ.

ಕೆ. ಸತ್ಯನಾರಾಯಣ

ನೋಡುತ್ತಾರೆ. ದೇವಯ್ಯಗೌಡನಿಗೆ ''ಕುಡಿಸಿ, ಕುಣಿಸಿ, ಬುದ್ಧಿ ಕೆಡಿಸಿರುವುದು'' ಕೂಡ ಇವರಿಗೆ ಗೊತ್ತಿದೆ. ಈ ಪಾದ್ರಿಯ ಪ್ರಭಾವದಿಂದಾಗಿ ಗೌಡನೊಬ್ಬ ಹೊಲೆಯನನ್ನು ಗಾಡಿ ಹೊಡೆಯುವುದಕ್ಕೆ ಇಟ್ಟುಕೊಳ್ಳುವುದು, ಹೊಲೆಯನನ್ನು ಮುಟ್ಟುವುದು ಕೂಡ ಸಾಧ್ಯವಾಗಿರುವುದು ಕೂಡ ಗೊತ್ತಾಗಿದೆ. ಈ ವಿದ್ಯಮಾನದ ಬಗ್ಗೆ ಗುತ್ತಿಯಂಥವರಿಗೆ ಖಚಿತವಾದ ನಿಲುವಿಲ್ಲ ಅಷ್ಟೇ. ದೇವಯ್ಯಗೌಡ ಪಾದ್ರಿಯ ''ಮಂಕುಬೂದಿ''ಗೆ ಒಳಗಾಗಿರುವುದು, ಪಾದ್ರಿಯ ಮಗಳ ಜೊತೆ ಸಖ್ಯ ಬೆಳೆಸಿ ಲಂಪಟನಾಗಿರುವುದು ಕೂಡ ಇವರ ಚರ್ಚೆಗಳಲ್ಲಿ ಬರುತ್ತದೆ.

ಪಾದ್ರಿ ತರುವ ಬೀಸೋಕಲ್ಲು ನಾಗರಿಕತೆ ತರುವ ಒಂದು ಹೊಸ ವಿವರ – ದೃಷ್ಟಿಕೋನ. ಹಾಗೆಯೇ ಪಾದ್ರಿಯ ವ್ಯಕ್ತಿತ್ವ ಕೂಡ. ಕುವೆಂಪು ಪಾದ್ರಿಯನ್ನು ಇದ್ದಲಿನಷ್ಟು ಕಪ್ಪಗಿದ್ದವನು, ನೇಟಿವ್ ಪಾದ್ರಿಯೆಂದೆಲ್ಲಾ ವಿವರಿಸುತ್ತಾರೆ. ಆತನ ವೇಷ-ಭೂಷಣ, ಚಹರೆಯೆಲ್ಲವೂ ಮೇಲುಜಾತಿಯ ಗೌಡರದ್ದಕ್ಕಿಂತಲೂ ವಿಭಿನ್ನವಾಗಿರುವುದರ ಜೊತೆಗೆ ಆಕರ್ಷಣೀಯವೂ ಕೂಡ ಆಗಿದೆ. ಹೊಲೆಯರ ಬಚ್ಚ ಈಗಾಗಲೇ ಹೊಸ ವ್ಯಕ್ತಿತ್ವ ಪಡೆದ ಸಂಭ್ರಮದಲ್ಲಿದ್ದಾನೆ. ತಮ್ಮ ಜೊತೆ ವಾಸಿಸುವ ಮನುಷ್ಯರನ್ನು ಮುಟ್ಟಲಾಗದವರು ಬೈಸಿಕಲ್‌ಅನ್ನು ''ಮುಟ್ಟುತ್ತಾರೆ''. ಈ ''ಮುಟ್ಟುವ'' ಪ್ರಸಂಗ ಮುಂದಿನ ದಿನಗಳಲ್ಲಿ ಕನ್ನಡದ ಬಹುತೇಕ ಕಥನಕಾರರು, ಕವಿಗಳು ಬಹಳವಾಗಿ ಹಚ್ಚಿಕೊಂಡ ಒಂದು ವಿದ್ಯಮಾನದ ಆಗಮನವನ್ನು ಮುನ್ನೋಟದಿಂದ ಸೂಚಿಸುತ್ತದೆ. ದೇವರ ವಿಗ್ರಹವನ್ನು, ಸಾಲಿಗ್ರಾಮವನ್ನು ಮುಟ್ಟುವುದು, ಮೇಲುಜಾತಿಯವರನ್ನು ಮೊದಲು ಮುಟ್ಟುವುದು, ನಂತರ ಲೈಂಗಿಕವಾಗಿ, ವೈವಾಹಿಕವಾಗಿ ಒಳಗೊಳ್ಳುವುದು-ಆಕ್ರಮಿಸುವುದು. ಇದೆಲ್ಲಕ್ಕಿಂತ ಮುಂಚೆ ಕೆಳಸ್ತರದವರು ಈ ಕಾದಂಬರಿಯಲ್ಲಿ ಒಂದು ''ಯಂತ್ರ''ವನ್ನು ಮುಟ್ಟುವುದು ಕುತೂಹಲಕರವಾಗಿದೆ. ಈ ಬೈಸಿಕಲ್ ಸವಾರಿಯನ್ನು ಹೊಲಗೇರಿಯ ಮುಕ್ಕಾಲುಮೂರು ವಾಸಿ ಜನ – ಹೆಂಗಸರೂ - ಮಕ್ಕಳೂ ಸೇರಿದಂತೆ – ನೋಡುತ್ತಾರೆ. ಇಡೀ ಪ್ರಕರಣವನ್ನು ಕುವೆಂಪು, ವ್ಯಂಗ್ಯ, ತಮಾಷೆಯ ಜೊತೆಗೆ ವಸ್ತುನಿಷ್ಠತೆಯಿಂದ ಗಮನಿಸುತ್ತಾರೆ. ವ್ಯಂಗ್ಯ ತಮಾಷೆ ಪಾದ್ರಿಯನ್ನು ಕುರಿತಂತೆ ಮಾತ್ರವಲ್ಲ, ಅದನ್ನು ನೋಡುತ್ತಿರುವವರನ್ನು ಕುರಿತಂತೆಯೂ ಇದೆ. ಪಾದ್ರಿಯನ್ನೂ, ಆತನ ಜೀವನ ದೃಷ್ಟಿಯನ್ನೂ ಕೂಡ ಈ ಹೊಲೆಯರು ಮೌಲ್ಯ ಮಾಪನ ಮಾಡುತ್ತಾರೆ.

''ಇದು ಎಂಥಾದ್ದೋ ಇವರು ಹೇಳುವುದು ? ಕಾಡಿಗೆ ಕೈ ಮುಗಿದು ! ಒಂದು ದೇವರಿಲ್ಲ! ಗುಡಿಯಿಲ್ಲ! ನಮ್ಮ ಪೆರಡೂರು ಮೇಳದವರು ಇದಕ್ಕಿಂತಲೂ ಚೆನ್ನಾಗಿ ಹೇಳುತ್ತಾರಲ್ಲ ಭಾಗವತರಾಟದಲ್ಲಿ?'' (ಪುಟ ೧೪೯)

೨೨ನೇ ಅಧ್ಯಾಯದಲ್ಲಿ ಕುವೆಂಪು ಕ್ರೈಸ್ತಧರ್ಮದ ಆಗಮನವನ್ನು ಇತಿಹಾಸದ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಇಟ್ಟು ನೋಡಲು ಪ್ರಯತ್ನಿಸುತ್ತಾರೆ. ಪಾದ್ರಿಯ ಚಟುವಟಿಕೆಗಳು – ವಿವೇಕಾನಂದರ ಧಾರ್ಮಿಕ ಪುನರ್‌ಜೀವನದ ಕನಸು – ಇವುಗಳ ನಡುವೆ ಒಂದು ಅಸಮ ಸ್ಪರ್ಧೆಯಿದೆಯೆಂಬುದು ಕುವೆಂಪು ಮಂಡಿಸುವ ಚೌಕಟ್ಟು. ಮತಾಂತರವೆನ್ನುವುದು ಒಂದು ಸ್ಪರ್ಧೆಯೆನ್ನುವ ಭಾವನೆ ಓದುಗರಲ್ಲಿ ಮೂಡುವಂತೆ ಪ್ರತಿಸ್ಪರ್ಧಿ, ಸಿಂಹಕಂಠ, ಖೆಡ್ಡಾ, ಬೇಟೆ – ಇಂತಹ ಪದಗಳನ್ನು ಬಳಸುತ್ತಾರೆ. ಆದರೆ ಇದಕ್ಕೆಲ್ಲ ಕಾರಣವಾಗಿರುವುದು ಇಲ್ಲಿಯ ಬ್ರಾಹ್ಮಣರ ಜೀವನ ರೀತಿ, ಸನಾತನ ಧರ್ಮದ ತಪ್ಪುಗ್ರಹಿಕೆ, ಮೂಢನಂಬಿಕೆ ಕಂದಾಚಾರವೆಂಬುದನ್ನು ಗುರುತಿಸಿ ಭರ್ತ್ಸನಾಮಯವಾದ ಭಾಷೆಯಲ್ಲಿ ಟೀಕಿಸುತ್ತಾರೆ. ಆದರೆ ಪಾದ್ರಿಯ ''ಉಪಯೋಗ'' ಮತ್ತು ''ಪ್ರಭಾವ'' ಚಿನ್ನಪ್ಪ ಗೌಡ, ದೇವಯ್ಯ ಗೌಡರಂತಹ ಹೊಸ ಕಾಲದ ತರುಣರ ಕ್ರಾಪು, ಬಟ್ಟೆ ವೇಷಭೂಷಣಗಳಷ್ಟಕ್ಕೆ ಸೀಮಿತವಾಗಿಲ್ಲ. ಪಾದ್ರಿಯ ಇಂಗ್ಲಿಷ್ ಜ್ಞಾನದಿಂದಾಗಿ ಕೂಡ ಆತ ಗೌಡರ ಮನೆಗಳಲ್ಲಿ ಸ್ವಾಗತಾರ್ಹ. ತಕ್ಕಮಟ್ಟಿಗೆ ಇಂಗ್ಲಿಷ್ ಬಲ್ಲ ಪಾದ್ರಿ ಹೊಸ ಕಾನೂನು, ಸರ್ಕಾರದ ವಿವರಗಳನ್ನು ಸಹ್ಯಗೊಳಿಸಬಲ್ಲ, ಪರಿಚಯಮಾಡಿಕೊಡಬಲ್ಲ ಏಜೆಂಟ್ ಕೂಡ. ಈ ಅಧ್ಯಾಯದಲ್ಲಿ ಬರುವ ಪಾದ್ರಿಯನ್ನು ಎಲ್ಲಿ, ಯಾರ ಜೊತೆ ಊಟಕ್ಕೆ ಕೂರಿಸಬೇಕು, ಹೇಗೆ ಆತಿಥ್ಯ ನೀಡಬೇಕು ಎಂಬ ಪ್ರಶ್ನೆ ಜಾತಿಪದ್ಧತಿಯಿಂದ ಹೊರಗಿರುವವರನ್ನು ಕೂಡ ಮುಟ್ಟಲು, ಒಳಗು ಮಾಡಿಕೊಳ್ಳಲು ಇರುವ ಆಯಾಮಗಳ ಕಡೆ ಗಮನ ಸೆಳೆಯುತ್ತದೆ. ಈ ವಿವರಗಳೆಲ್ಲವೂ ತಮ್ಮಷ್ಟಕ್ಕೆ ತಾವೇ ಮಾತನಾಡುವುದರಿಂದ ಹೆಚ್ಚು ಬರೆಯುವ ಅಗತ್ಯವಿಲ್ಲ.

ಈ ಅಧ್ಯಾಯದ ವಿಶೇಷವೆಂದರೆ ನಮಗೆ ಸಿಗುವ ದೇವಯ್ಯಗೌಡನ ಒಂದು ದಿನದ ವೈಯಕ್ತಿಕ ಇತಿಹಾಸ ಕಾದಂಬರಿ ಪ್ರಕಾರದಲ್ಲಿ ಮಾತ್ರ ಸಾಧ್ಯವಾಗು ವಂತಹದು. ಪಾದ್ರಿಯ ಪ್ರಭಾವದಿಂದಾಗಿ ದೇವಯ್ಯನಿಗೆ ತನ್ನ ಜಾತಿಯವರ ರೀತಿ ನೀತಿ ಆಚರಣೆಗಳ ಬಗ್ಗೆ ತಿರಸ್ಕಾರ ಮೂಡಿದೆ. ಆದರೆ ಇಡೀ ಕುಟುಂಬವನ್ನು ಹೊಸ ವಿಚಾರಗಳ ಕಡೆ ಒಲಿಸುವಷ್ಟು ಬೌದ್ಧಿಕ ಸಾಮರ್ಥ್ಯ, ಪ್ರೀತಿ, ವಿವೇಚನೆ ಅವನಿಗಿಲ್ಲ. ಇತರರನ್ನು ಆತ ಕೀಳಾಗಿ ನೋಡಬಲ್ಲ ಮಾತ್ರವಷ್ಟೇ. ಇಂತಹ ದೇವಯ್ಯ ಚೆಲುವು ತುಂಬಿದ ತನ್ನ ಮೋಹದ ಹೆಂಡತಿಯ ಜೊತೆ ಹೇಗೆ ಸೆಟೆದುಕೊಂಡ, ಸೋತ, ಪ್ರೀತಿಮಾಡಿದ, ಇಂತಹ ಗಂಡನನ್ನು ಒಲಿಸಿಕೊಳ್ಳಲು ದೇವಮ್ಮ ಯಾವ ರೀತಿ ಆತಂಕಕ್ಕೊಳಗಾದಳು ಎಂಬುದನ್ನು ಸೂಚಿಸುವ ವಿವರಗಳು ಮನೋಜ್ಞವಾಗಿವೆ. ನಮ್ಮ ವೈಚಾರಿಕತೆ - ಆದರ್ಶ ಎಲ್ಲವೂ ಒಂದು ಆಪ್ತ ಭಾವನಾತ್ಮಕ ಸನ್ನಿವೇಶದಲ್ಲಿ ಹೇಗೆ ಪರೀಕ್ಷೆಗೊಳಗಾಗುತ್ತದೆ ಎಂಬುದು ಮುಖ್ಯ. ಎಲ್ಲ ವೈಚಾರಿಕತೆಗಳಿಂದಾಚೆಗೂ ಉಳಿಯುವ ಮನುಷ್ಯ ಪ್ರೀತಿಯ ಸಂಬಂಧದ ಲಯಗಳನ್ನು, ಧ್ವನಿಗಳನ್ನು ಈ ವಿವರಗಳು ಸೂಚಿಸುತ್ತವೆ.

ಇಂತಹ ವಲಯವೊಂದನ್ನು ಪ್ರವೇಶಿಸುವುದಕ್ಕೆ ಕಾದಂಬರಿಕಾರರಿಗೆ ಸಾಧ್ಯವಾಗಿರುವುದರಿಂದಲೇ ಮತಾಂತರದ ವ್ಯಾಪ್ತಿ, ಪ್ರಭಾವ, ಸಾರ್ಥಕತೆ ಬಗ್ಗೆ ಇದಮಿತ್ಥಂ, ಇದು ಸರಿ, ಅದೇ ತಪ್ಪು ಎನ್ನುವ ಧೋರಣೆ ತಳೆಯುವುದು ಸಾಧ್ಯವಾಗುವುದಿಲ್ಲ. ಆಸಕ್ತ ಓದುಗರು ಇಂತಹದೇ ಸಂದರ್ಭಗಳನ್ನು ಕಾರಂತರು ತಮ್ಮ 'ಮೈ ಮನಗಳ ಸುಳಿಯಲ್ಲಿ,' ಭೈರಪ್ಪನವರು 'ಆವರಣ' ಕಾದಂಬರಿಯಲ್ಲಿ ಹೇಗೆ ನಿರ್ವಹಿಸುತ್ತಾರೆ ಎಂಬುದನ್ನು ಗಮನಿಸಬಹುದು. ನನ್ನ ಸೀಮಿತ ಓದನ್ನೇ ಆಧಾರವಾಗಿಟ್ಟುಕೊಂಡು ಸ್ವಲ್ಪ ಧೈರ್ಯ ಮಾಡಿ ಹೇಳಬಹುದಾದರೆ ಹೊಸ ತಲೆಮಾರಿನ ಬರಹಗಾರರಿಗೆ ಇಂತಹ ಆಪ್ತ ಸನ್ನಿವೇಶಗಳ ನಿರ್ವಹಣೆ ಇಷ್ಟೊಂದು ಧ್ವನಿಪೂರ್ಣವಾಗಿ ಇನ್ನೂ ಸಾಧ್ಯವಾಗಿಲ್ಲ. ಬೇರೆ ಬೇರೆ ಹಿನ್ನೆಲೆಗಳ - ಸಂಸ್ಕೃತಿಗಳ ಗಂಡುಹೆಣ್ಣುಗಳ ಸಂಬಂಧವನ್ನು ಬಹುಪಾಲು ನಮ್ಮಲ್ಲಿ ಆಶಯಗಳ ಮಟ್ಟದಲ್ಲಿ ಇಲ್ಲ, ಆಸೆಯ ಪೂರೈಕೆ ನೆಲೆಗಳಲ್ಲೇ ಗ್ರಹಿಸಲಾಗುತ್ತದೆ. 'ಕುಸುಮ ಬಾಲೆ' ಕೂಡ ಇದಕ್ಕೆ ಅಪವಾದವೇನಲ್ಲ.

೨೮ನೇ ಅಧ್ಯಾಯವು ಮತಾಂತರಕ್ಕೆ ಸಂಬಂಧಿಸಿದ ಹಾಗೆ ಇನ್ನೊಂದು ನೆಲೆಯನ್ನು ನಮಗೆ ಪರಿಚಯಿಸುತ್ತದೆ. ಕ್ರೈಸ್ತ ಧರ್ಮೀಯರಿಗೆ ಇಲ್ಲಿಯ ಸಂಸ್ಕೃತಿಯ, ಸ್ಥಾನಿಕ ಜೀವನ ಶೈಲಿ – ಮೌಲ್ಯಪದ್ಧತಿಗಳ ಪರಿಚಯವಿರಲಿಲ್ಲ. ಮೇಲುಜಾತಿಯವರಿಗೆ ಮಾತ್ರ ಸಂಸ್ಕೃತಿ-ನಾಗರಿಕತೆಯಿದೆ, ಉಳಿದವರಿಗೆ ಇಲ್ಲ. ಹಾಗಾಗಿ ಅವರನ್ನೂ ತಮ್ಮ ಪ್ರಭಾವದ ತೆಕ್ಕೆಗೆ ತೆಗೆದುಕೊಳ್ಳಬಹುದು ಎಂಬುದು ಮತಪರಿವರ್ತನಕಾರರಿಗೆಲ್ಲ ಇರುವ ಒಂದು ಗ್ರಹೀತ. ಆದರೆ ಈ ವರ್ಗದ ಜನರಲ್ಲೂ ಇರುವ ಲೋಕದೃಷ್ಟಿ, ಆಚರಣೆಗಳನ್ನು ಕೂಡ ಗಮನಿಸಿ ಮುಖಾಮುಖಿಯಾಗಬೇಕಾಗುತ್ತದೆ. ಆಫ್ರಿಕಾದ ದೇಶಗಳ ಉದಾಹರಣೆಯನ್ನು ಗಮನಿಸುವುದಾದರೆ ಕ್ರೈಸ್ತಧರ್ಮಕ್ಕೆ ಪರಿವರ್ತನೆಗೊಂಡೂ ಕೂಡ ಜನಾಂಗಗಳು, ಬುಡಕಟ್ಟುಗಳು ತಮ್ಮ ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಂಡಿವೆ. ನಮ್ಮಲ್ಲು ಇಸ್ಲಾಂ, ಬೌದ್ಧ, ಕ್ರೈಸ್ತ ಧರ್ಮಕ್ಕೆ ಪರಿವರ್ತನೆಗೊಂಡವರೆಲ್ಲರೂ ತಮ್ಮ ತಮ್ಮ ಸಾಂಸ್ಕೃತಿಕ ವಿಶಿಷ್ಟತೆಯನ್ನು ಉಳಿಸಿಕೊಂಡೇ ಇದ್ದಾರೆ. ಇದೊಂದು ಸಂಕೀರ್ಣವಾದ ಪ್ರಕ್ರಿಯೆ. ಹೊಸದನ್ನು ''ಪಡೆಯುವ'' ''ಒಪ್ಪಿಕೊಳ್ಳುವ'' ''ಒಳಗೊಳ್ಳುವ'' ರೀತಿನೀತಿಗಳು ಒಂದೇ ರೀತಿಯಿರಬೇಕಾಗಿಲ್ಲ. ಮತಾಂತರಗೊಳ್ಳದವರೂ ಕೂಡ ತಮ್ಮ ದಿನನಿತ್ಯದ ಬದುಕಿನಲ್ಲಿ, ಜೀವನಶೈಲಿಯಲ್ಲಿ ಇತರ ಧರ್ಮ-ಸಂಸ್ಕೃತಿಗಳ ವಿವರಗಳನ್ನು ರೂಢಿಸಿಕೊಂಡಿರಬಹುದಲ್ಲವೇ! ಈ ಕುರಿತು ರೊವೆನಾ ರಾಬಿನ್‌ಸನ್ ಎಂಬ ಲೇಖಕಿ : Conversion – Continuity

## ರುದ್ರಭೂಮಿ

ಮನಮಂದಿರದಲ್ಲಿ
ಹುಟ್ಟಿದ ಆಶಾಶಿಶುಗಳೆಲ್ಲ
ಉಸಿರುಗಟ್ಟಿ ಸತ್ತು - ಶವಗಳಾಗಿ
ಎದೆಯ ಗೂಡೊಂದು ಶವಾಗಾರವಾಗಿ
ನಾನೀಗ -
ಅಲೆದಾಡುವ ರುದ್ರಭೂಮಿಯಾಗಿದ್ದೇನೆ !

**ಕುಸುಮ ನಕೋಸಾ ಕರಾಳೆ**
ಉಪನ್ಯಾಸಕಿ, 'ನಕೋಸ' ೧ನೇ ಮುಖ್ಯ ರಸ್ತೆ
ಶ್ರೀನಗರ, ಧಾರವಾಡ - ೫೮೦ ೦೦೩

and Change ಎನ್ನುವ ಕೃತಿಯಲ್ಲಿ ವಿಶಿಷ್ಟವಾದ ಒಳನೋಟಗಳನ್ನು ನೀಡಿದ್ದಾರೆ.

ಹಿಂಸೆ, ಬಲವಂತದಿಂದ ಮಾತ್ರವೇ ಜನ ಮತಾಂತರಗೊಳ್ಳುತ್ತಾರೆ ಎಂದು ಭಾವಿಸುವುದು ತಪ್ಪು. ಇದು ಒಂದು ಕಾರಣವಾಗಿರಬಹುದು ಮಾತ್ರವಷ್ಟೇ. ಮತಾಂತರಗೊಳಿಸುವವರು ನೀಡುವ ಸೇವೆ, ಪ್ರಲೋಭನೆಗಳೆಲ್ಲವನ್ನು ಇವರು ನಿಸ್ಸಹಾಯಕತೆಯಿಂದಲೇ ನಿಷ್ಕ್ರಿಯವಾಗಿಯೇ ಸ್ವೀಕರಿಸುತ್ತಾರೆ ಎಂದು ಭಾವಿಸುವುದು ಕೂಡ ತಪ್ಪು. ಏನೇ ಆದರೂ ಮತಾಂತರಗೊಳ್ಳುವವರದು ಕೂಡ ಒಂದಲ್ಲ ಒಂದು ಹಂತದಲ್ಲಿ ''ಆಯ್ಕೆ'' ಇದ್ದೇ ಇರುತ್ತದೆ. ಮತಾಂತರಕ್ಕೆ ಬೇಕಾದ ಲೌಕಿಕ/ಸಾಂದರ್ಭಿಕ ಒತ್ತಡಗಳನ್ನು ಪರಿವರ್ತನಕಾರರು ಸೃಷ್ಟಿಸುತ್ತಾರೆ ಎಂಬುದನ್ನು ಗಮನಿಸಿಯೂ ಮತಾಂತರದ ಹಿಂದಿರುವ ಆಯ್ಕೆ, ಸಾಮಾಜಿಕ - ಸಾಂಸ್ಕೃತಿಕ ಅಭೀಪ್ಸೆಗಳನ್ನು ಗಮನಿಸಬೇಕಾಗುತ್ತದೆ. ಮಿಷನರಿಗಳ ಉದ್ದೇಶವೂ ಕೂಡ ಹೀಗೇ ಸಂಕೀರ್ಣವಾಗಿರುತ್ತದೆ. ಇವರ ಯೋಜನೆ – ಕಾರ್ಯಕ್ರಮಗಳಲ್ಲಿ ಕೂಡ ಧಾರ್ಮಿಕ, ಆರ್ಥಿಕ, ಸಾಮಾಜಿಕ ಆಯಾಮಗಳ ಕಲಸುಮೇಲೋಗರವಿರುತ್ತದೆ. ಇದನ್ನೆಲ್ಲ ಹಿನ್ನೆಲೆಯಾಗಿಟ್ಟುಕೊಂಡು ಮತಾಂತರದ ಇತಿಹಾಸವನ್ನು ಗಮನಿಸಿದಾಗ ಮಾತ್ರ ನಮಗೆ ಸತ್ಯಕ್ಕೆ ಹತ್ತಿರವಾದ ಚಿತ್ರ ಸಿಗುತ್ತದೆ. (ಈ ಒಳನೋಟಗಳನ್ನು ಗಮನಿಸಿ ಗೋವಾದ ಸಾಂಸ್ಕೃತಿಕ ಇತಿಹಾಸವನ್ನು ಕುರಿತು ಬರೆದ ಪುಸ್ತಕ – Goa - A Daughter's Story – Maria Aurora Couto ವನ್ನು ಓದುಗರು ಗಮನಿಸಬಹುದು).

ಈ ಅಧ್ಯಾಯದಲ್ಲಿ ಕುವೆಂಪು ಪಾದ್ರಿಗೆ ಸ್ಥಾನಿಕ ವೈಶಿಷ್ಟ್ಯ ವಿವರಗಳ ಬಗ್ಗೆ ಇರುವ ಮೇಲುಸ್ತರದ ತಿಳುವಳಿಕೆಯನ್ನು ಕೆಳವರ್ಗದವರ ತಿಳುವಳಿಕೆಯೊಡನೆ ಮುಖಾಮುಖಿ ಮಾಡಿ ಗೇಲಿ ಮಾಡುತ್ತಾರೆ. ಈ ಗೇಲಿಯನ್ನು ಮೀರಿದ ಇನ್ನೊಂದು ಆಯಾಮವೆಂದರೆ ಪಾದ್ರಿಗೂ ಇರುವ ಕಷ್ಟ ಮತ್ತು ಹೆಣಗಾಟದ ಸೂಚನೆಗಳು ಇಲ್ಲಿ ನಮಗೆ ಸಿಗುವುದು. ದೇವಯ್ಯ ಪಾದ್ರಿಯನ್ನು ಒಪ್ಪುವುದು, ಮತಾಂತರಗೊಳ್ಳಲು ಸಿದ್ಧವಾಗುವುದು ಇದರ ಹಿಂದಿರುವ ಉದ್ದೇಶಗಳು ಕೂಡ ಪ್ರಾಮಾಣಿಕವಾದುದಲ್ಲ, ಘನವಾದದ್ದಲ್ಲ. ದೇವಯ್ಯ ಕೂಡ ಪಾದ್ರಿಯನ್ನು ''ಉಪಯೋಗಿಸಿ'' ಕೊಳ್ಳುತ್ತಿರುತ್ತಾನೆ. ನಾವೆಲ್ಲರೂ ಸಾಮಾನ್ಯವಾಗಿ ಪರಿವರ್ತನಕಾರರ ಉದ್ದೇಶ, ಉಪಾಯ ತಂತ್ರಗಾರಿಕೆಯನ್ನು ಕುರಿತು ಮಾತನಾಡುತ್ತೇವೆ, ಮತಾಂತರಗೊಳ್ಳುವವರೆಲ್ಲ ಮುಗ್ಧರು ಅಮಾಯಕರು ಎಂಬಂತೆ. ಇಂತಹ ತಪ್ಪು ಕಲ್ಪನೆಯನ್ನು ಕೂಡ ಈ ವಿವರಗಳು ಒಡೆದುಹಾಕುತ್ತವೆ. ಇತಿಹಾಸದಲ್ಲಿ ಮುನ್ನುಗ್ಗುವ, ಮೇಲೆಬರುವ ಆಸೆಯಲ್ಲಿ, ಯೋಜನೆಯಲ್ಲಿ ಮತಾಂತರವು ಕೂಡ ಮತಾಂತರಗೊಳ್ಳುವವರಿಗೆ ಒಂದು ಸಾಧನವಾಗಿರಬಹುದು, ಅಸ್ತ್ರವಾಗಿರಬಹುದು.

ನೇಟಿವ್ ಪಾದ್ರಿ, ಕರಿಪಾದ್ರಿಯೆಂದೆಲ್ಲ ಕುವೆಂಪುವಿನಿಂದ ಕರೆಸಿಕೊಳ್ಳುವ ಪಾದ್ರಿಯ ನಿತ್ಯ ಜೀವನದ ಕಷ್ಟಗಳು ಕೂಡ ಕಡಮೆಯೇನಲ್ಲ. ಈತನ ಬಗ್ಗೆ ಕಾದಂಬರಿಕಾರರ ವ್ಯಂಗ್ಯವೇನಿದ್ದರೂ, ಕೃತಿಯ ವಿವರಗಳು ಆತನ ಕಷ್ಟಗಳನ್ನು ಕೂಡ ಗಮನಿಸುತ್ತದೆ. ನೇಟಿವ್ ಪಾದ್ರಿಯಾದ್ದರಿಂದ ಜನರಿಗೆ ಆತನ ಬಗ್ಗೆ ವಿಶೇಷ ಗೌರವಾದರಗಳಿಲ್ಲ. ಅದೆಲ್ಲವೂ 'ದೊಡ್ಡಪಾದ್ರಿ', 'ಬಿಳಿಪಾದ್ರಿ'ಗೆ ಮೀಸಲು. ಉಪದೇಶಿಯಿಂದ ರೆವರೆಂಡ್ ಸ್ಥಾನಕ್ಕೆ ಬಡ್ತಿ ಪಡೆಯಲು ಹಳ್ಳಿಗರ ಜೊತೆ ಆತ (ಜೀವರತ್ನಯ್ಯ) ಏಗಬೇಕು. ಎಲ್ಲಕ್ಕಿಂತ ಆತನೂ ಮುಖ್ಯವಾಗಿ ಹೆಣ್ಣುಮಗಳೊಬ್ಬಳ ತಂದೆ. ದೇವಯ್ಯನಿಗೆ ಪಾದ್ರಿಯ ಮಗಳೊಡನೆ ಒಡನಾಟ ಆತನ ಲಂಪಟತನದ

# ಒಂದಾನೊಂದು ಕಾಲದಲ್ಲಿ

ಒಂದಾನೊಂದು ಕಾಲದಲ್ಲಿ ಮಗನೇ
ಅವರು ಹೃದಯದಿಂದ ನಗುತ್ತಿದ್ದರು
ಮತ್ತು ಕಣ್ಣಿನಿಂದಲೂ ಕೂಡ ;
ಆದರೀಗ ನಗುತ್ತಾರವರು ಕೇವಲ ಬಾಯಿಯಿಂದ
ಏಕೆಂದರೆ ಅವರ ಮಂಜುಗಡ್ಡೆಯ ಕಣ್ಣುಗಳು
ನನ್ನ ನೆರಳನ್ನು ಹುಡುಕಾಡುತ್ತವೆ !

ಆವಾಗ ಅವರು
ಹೃದಯದಿಂದ ಕೈ ಕುಲುಕುತ್ತಿದ್ದರು
ಆದರೆ ಅದೆಲ್ಲ ಈಗೆಲ್ಲಿ ಮಗನೇ
ಈಗವರು ಅವರ 'ಎಡ' ಕೈಗಳು
ನನ್ನ ಖಾಲಿ ಪರ್ಸನ್ನು ಹುಡುಕುತ್ತವೆ !

'ಆರಾಮಾಗಿರಿ' 'ಮತ್ತೆ ಬನ್ನಿ' ಎಂದವರು ಹೇಳಿದಾಗ
ನಾನು ಮತ್ತೆ ಬಂದು ಇರುತ್ತೇನೆ,
ಒಂದು ಬಾರಿ, ಎರಡು ಬಾರಿ
ಆದರೆ ಮೂರನೇ ಬಾರಿಯಲ್ಲ
ನಡುವೆ ಹುಟ್ಟಿದರೆ ಕಂದರ,
ಏಕೆಂದರೆ ಆ ಬಾಗಿಲುಗಳು
ಮುಚ್ಚಬಹುದು ನನಗಾಗಿ ನಂತರ !

ನಾನೂ ಹಾಗೇ ಕಲಿತಿದ್ದೇನೆ
ಕೇವಲ ಹಲ್ಲುಗಳಿಂದ ನಗುತ್ತೇನೆ –
ಮತ್ತು ಕೈಕುಲುಕುತ್ತೇನೆ ಮನಸ್ಸಿಲ್ಲದೆ
ನಾನೀಗ 'ನಮಸ್ಕಾರ' ಎನ್ನಲೂ ಕಲಿತಿದ್ದೇನೆ
ಯಾವಾಗ ಆದರರ್ಥ 'ಇವನ್ಯಾಕೆ ಬಂದ', ಎಂದಿರುತ್ತೆ
'ನಿಮ್ಮ ನೋಡಿ ತುಂಬಾ ಖುಷಿಯಾಯಿತು' ಎನ್ನುತ್ತೇನೆ.
– ಯಾವುದೇ ಖುಷಿಯಿಲ್ಲದೆ ! ಬೇಜಾರಾದಾಗಲೂ ಹೇಳುತ್ತೇನೆ
– ನಿಮ್ಮೊಡನೆ ಮಾತನಾಡಿ ಖುಷಿಯಾಯಿತು !

ಆದರೆ ನನ್ನ ನಂಬು ಮಗನೇ
ನಾನು ನಿನ್ನ ಹಾಗಿದ್ದಾಗ ಹೇಗಿದ್ದೆನೊ
ಈಗಲೂ ಹಾಗೆಯೇ ಇರಲು ಬಯಸುತ್ತೇನೆ
ಈ ವಿಚಿತ್ರ ಕೃತಕ ಸಂಗತಿಗಳನ್ನು
ಬಯಸೋದಿಲ್ಲ ಕಲಿಯೋದಕ್ಕೆ – ನಾನು,
ಹೆಚ್ಚಾಗಿ ಕಲಿಯಬೇಕಿದೆ 'ಚೆನ್ನಾಗಿ ನಗುವುದನ್ನು'
ಕನ್ನಡಿಯಲ್ಲಿ ನಕ್ಕಾಗ ನನ್ನ ಹಲ್ಲುಗಳು
ಹಾವಿನ ಬೊಚ್ಚುಬಾಯಿಯಂತೆ ಕಾಣುತ್ತವೆ !

ನನಗೀಗ ತೋರಿಸು ಮಗನೇ
'ನಗುವುದು ಹೇಗೆ' – 'ತೋರಿಸು ಹೇಗೆ'
ನಾನು ನಗಬೇಕು – ಇನ್ನಷ್ಟು ನಗಬೇಕು;
ಒಂದಾನೊಂದು ಕಾಲದಲ್ಲಿ ನಿನ್ನ ಹಾಗಿದ್ದಾಗ --
ಹೇಗಿದ್ದೆನೋ ಹಾಗೆ !!

ಮೂಲ ಇಂಗ್ಲಿಷ್ : **ಗ್ಯಾಬ್ರಿಯಲ್ ಓಕಾರಾ**
ಕನ್ನಡಕ್ಕೆ : **ಖುರ್ಷದ್ ಆಲಂ ಮೋಮಿನ ಚ-ಕಿತ್ತೂರು**
ರೆಹಮಾನ್ ಮಂಜಿಲ್, ಗುರುವಾರ ಪೇಟೆ,
ಚೆನ್ನಮ್ಮನ ಕಿತ್ತೂರು - ೫೯೧ ೧೧೫, ಬೆಳಗಾವಿ ಜಿಲ್ಲೆ



ಇನ್ನೊಂದು ಭಾಗ. ಮಗಳನ್ನೂ, ಅವಳ ದೇಹವನ್ನೂ, ಪಾದ್ರಿ ತನ್ನ ತಂದೆಯ ಕರ್ತವ್ಯ ನಿರ್ವಹಿಸಲು, ವೃತ್ತಿಯಲ್ಲಿ ಮುಂದೆ ಬರಲು ಮತ ಪರಿವರ್ತನೆಯ ಪುಣ್ಯ ಸಂಪಾದನೆ ಮಾಡಲು ಉಪಯೋಗಿಸಿಕೊಳ್ಳಬೇಕಾದ ಸಂಕಟದಲ್ಲಿದ್ದಾನೆ. ಲೇಖಕರ ಪ್ರಕಾರವೇ ''ಆ ಜಾತಿಗೆ ಸೇರಿಸೋ ಹುಚ್ಚು ಬಿಡಿಸದೆ ಇದ್ರೆ ಆಗೋದಿಲ್ಲ ಆ ಪಾದ್ರಿಗೆ! ಬಾಕಿ ಎಲ್ಲ ಒಳ್ಳೆ ಮನುಷ್ಯನೇ!'' (ಪುಟ ೪೮೨).

ಕಾದಂಬರಿಯ ಕೊನೆ ಕೊನೆಯ ಅಧ್ಯಾಯದ ವಿವರಗಳು ಕಲಾವಿದ ಕುವೆಂಪುಗಿಂತಲೂ ಹೆಚ್ಚಾಗಿ ವೈಚಾರಿಕ ಕುವೆಂಪುವನ್ನೇ ಮುನ್ನೆಲೆಗೆ ತರುತ್ತವೆ. ಜೊತೆಗೆ ಕತೆಯನ್ನೂ, ಕೃತಿಯನ್ನೂ ಮುಗಿಸುವ ಒತ್ತಾಯವು ಸೇರಿಕೊಂಡು ಕುವೆಂಪುರವರು ತಮ್ಮ ದರ್ಶನ- ಸಂದೇಶವನ್ನು ನೀಡುವ ಕಡೆಗೇ ಗಮನ ಕೊಟ್ಟಂತಿದೆ. ರೆವರೆಂಡ್ ಲೇಕ್‌ಹಿಲ್ ಹೇಳುವ ಮಾತುಗಳೆಲ್ಲ ಅಕ್ಷರಶಃ ಕುವೆಂಪು ಮಾತುಗಳೇ. ಲೇಕ್‌ಹಿಲ್ ಬಗ್ಗೆ ಅವರು ಹೇಳುವ ಮಾತುಗಳು ಹೀಗಿವೆ :

''ಕರೀ ಪಾದ್ರಿಯಂತಲ್ಲೋ; ನಿಜವಾಗಿಯೂ ದೊಡ್ಡ ಮನುಷ್ಯನೇ ಕಣೋ ಈ ಬಿಳಿ ಪಾದ್ರಿ'' (ಪುಟ ೬೯೮). ಪುಟ - ೬೯೭-೬೯೮ರಲ್ಲಿ ರೆವ್‌ರೆಂಡ್ ನೀಡುವ ಪುಟಪೂರ್ಣ ಉಪದೇಶ ಕುವೆಂಪು ವಿಚಾರಗಳೇ. ಇಷ್ಟೇ ಅಲ್ಲ ರೆವರೆಂಡ್‌ಗೆ ಮುಕುಂದಯ್ಯ ಕಾಣಿಸಿಕೊಳ್ಳುವ ರೀತಿ ಕೂಡ ಕಾದಂಬರಿಕಾರರ ಪಕ್ಷಪಾತವನ್ನು ಓದುಗರಿಗೆ ನಿವೇದಿಸುತ್ತದೆ :

''ಆದರೆ ಅವನ ಮುಖದಲ್ಲಿ ಅಲ್ಲಿದ್ದವರಾರಲ್ಲಿಯೂ ಇಲ್ಲದಿದ್ದ ಒಂದು ಸತ್ವಪೂರ್ಣ ತೇಜಸ್ಸನ್ನೂ ಸರಳ ಸುಂದರ ಪ್ರಸನ್ನತೆಯನ್ನೂ ದರ್ಶಿಸಿದ ''ಲೇಕ್‌ಹಿಲ್‌ರಿಗೆ'' (ಪುಟ ೬೯೬).

ಕುವೆಂಪು ಕಾದಂಬರಿಯ ಓದು ಮತಾಂತರದ ಸಂಕೀರ್ಣ ನೆಲೆಗಳನ್ನು ಗ್ರಹಿಸಲು ನಮಗೆ ನೆರವಾಗಬಹುದೆಂದು ನನ್ನ ಇಂಗಿತ. ಪರ-ವಿರೋಧದ ಸರಳ ನೆಲೆಗಳಲ್ಲಿ ನಾವು ಮಾತನಾಡುತ್ತಿದ್ದರೆ ಪರಿವರ್ತನಕಾರರ-ಮತಾಂತರಗೊಳ್ಳುವವರ – ಇಬ್ಬರ ಮನೋಭೂಮಿಕೆಗಳು ನಮಗೆ ತಿಳಿಯುವುದೇ ಇಲ್ಲ. ಸರಿಯಾಗಿ ಹೇಳಬೇಕಾದರೆ, ಕುವೆಂಪು ಮಲೆನಾಡಿನಲ್ಲಿ, ಕಾರಂತ ಕರಾವಳಿಯಲ್ಲಿ ಕಂಡು ಕೃತಿಯಲ್ಲಿ ಶೋಧಿಸಿದ ನೆಲೆಗಳಿಗಿಂತಲೂ ಈವತ್ತು ಮತಾಂತರ ಇನ್ನೂ ಸಂಕೀರ್ಣವಾಗಿದೆ. ಪರಿವರ್ತನಕಾರರು ಮತ್ತು ಮತಾಂತರಗೊಳ್ಳುವವರು – ಎರಡು ದೃಷ್ಟಿಯಿಂದಲೂ ಪರಿವರ್ತನಕಾರರಿಗೆ ಹಿಂದೆಂದೂ ಇಲ್ಲದಷ್ಟು ಹಣ-ಪ್ರಭಾವ-ಸಂಪನ್ಮೂಲಗಳಿವೆ. ಮತಾಂತರಗೊಳ್ಳುವವರಿಗೆ ಮತಾಂತರದ ಜೊತೆಗೆ ಹೆಚ್ಚಿನ ಶಿಕ್ಷಣ - ಉದ್ಯೋಗಾವಕಾಶಗಳ ಆಯ್ಕೆ ಮತ್ತು ಸ್ವಾತಂತ್ರ್ಯವಿದೆ. ಪ್ರಗತಿಯ ಆಸೆಯಿದೆ, ಪ್ರಜಾತಾಂತ್ರಿಕ ಚೌಕಟ್ಟಿದೆ.

ಇಷ್ಟೇ ಮುಖ್ಯವಾಗಿ ಮತಾಂತರವನ್ನು ವಿರೋಧಿಸುವ ಜನರೇ ಪುನರ್ ಮತಾಂತರ, ಹಿಂಮತಾಂತರ (Reconversion)ದ ಪರವಾಗಿದ್ದಾರೆ. ಪುನರ್ ಮತಾಂತರವೂ ಕೂಡ ಮತಾಂತರವೇ. ಮತಾಂತರ ತಪ್ಪೆನ್ನುವುದಾದರೆ ಪುನರ್ ಮತಾಂತರ ಕೂಡ ತಪ್ಪೇ ಎಂದು ವಾದಿಸಿ ತೃಪ್ತಿ ಪಡುವಹಾಗಿಲ್ಲ. ಪುನರ್ ಮತಾಂತರದ ವಕ್ತಾರರು ಉಪಯೋಗಿಸುವ ತಂತ್ರ-ಕಾರ್ಯಕ್ರಮಗಳು ಹೆಚ್ಚು ಕಡಮೆ ಮತಾಂತರದ ವಕ್ತಾರರ ಕಾರ್ಯಕ್ರಮಗಳಂತೆಯೇ ಇರುತ್ತವೆ. ಇಬ್ಬರಿಗೂ ಮತಾಂತರಗೊಳಿಸಬೇಕಾದ ಜನ ಒಂದು ರೀತಿಯ ''ವಸ್ತು''.

ಮತಾಂತರವನ್ನು ಗಾಂಧಿ ಕೂಡ ವಿರೋಧಿಸಿದ್ದರು. ರಾಮಕೃಷ್ಣ- ವಿವೇಕಾನಂದರು ಕೂಡ. ಇವರೆಲ್ಲ ಪ್ರಶ್ನಿಸಿದ್ದು ಮತಾಂತರದ ಉದ್ದೇಶಗಳನ್ನು, ನಿರರ್ಥಕತೆಯನ್ನು, ಮತಾಂತರದ ಹಕ್ಕನಲ್ಲ. ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ, ಮತ ಪರಿವರ್ತನೆಯಿಂದ ಪಡೆಯುವಂತಹದ್ದು ಏನೂ ಇಲ್ಲ ಎಂಬುದು ಇವರ ನಿಲುವಾಗಿತ್ತು. ಇಂಗ್ಲೆಂಡಿನಲ್ಲಿದ್ದಾಗ ಪ್ರೊಫೆಸರ್ ಮೈಟ್‌ಲ್ಯಾಂಡ್‌ರ ಸಂಪರ್ಕಕ್ಕೆ ಬಂದ ಗಾಂಧಿಗೆ ಹೊಸ ಧರ್ಮಗಳ, ಮತಾಂತರದ ನಿರರ್ಥಕತೆ ಗೊತ್ತಾಗಿತ್ತು. ಎಲ್ಲ ಧರ್ಮಗಳ ಮೂಲ ತಿರುಳನ್ನು ಹೊಸ ಕಾಲಕ್ಕೆ ಹೊಂದಿಸುವುದರ ಬಗ್ಗೆ ಅವರಿಗಿದ್ದ ಕಾಳಜಿಯ ಮುಂದೆ ಮತಾಂತರ ದೊಡ್ಡ ಸಮಸ್ಯೆಯಾಗಿ ಕಂಡಿರಲಾರದು. ಧರ್ಮದ, ಸಂಸ್ಕೃತಿಯ ಮೂಲಬೇರುಗಳಿಗೆ, ಆಶಯಗಳಿಗೆ ಹಿಂದಿರುಗುವುದು – ಸಮಾಜವನ್ನು ಮೂಢನಂಬಿಕೆ, ಜಾತಿಪದ್ಧತಿಯಿಂದ ಬಿಡುಗಡೆಗೊಳಿಸುವುದು – ಎರಡೂ ಕನಸನ್ನು ಒಟ್ಟಿಗೇ ಕಂಡಿದ್ದ ವಿವೇಕಾನಂದರಿಗೆ ಕೂಡ ಮತಾಂತರದ ಬಗ್ಗೆ ಕಡು ವಿರೋಧವಿತ್ತು. ಈವತ್ತು ಮತಾಂತರವನ್ನು ವಿರೋಧಿಸುತ್ತಿರುವವರ ನೆಲೆಗಳನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು. ಧಾರ್ಮಿಕ-ಸಾಂಸ್ಕೃತಿಕ ಕಾರಣಗಳಿಗಿಂತಲೂ ಹೆಚ್ಚಾಗಿ ಮತಾಂತರಗೊಳ್ಳುತ್ತಿರುವವರ ''ಆಯ್ಕೆ''ಯ ಹಕ್ಕಿನ ಬಗ್ಗೆಯೇ ಒಂದು ಪ್ರಮಾಣದ ಅಸಹನೆ ಈವತ್ತಿನ ವಿರೋಧದಲ್ಲಿ ಎದ್ದುಕಾಣುತ್ತದೆ. ಮತಾಂತರಗೊಳ್ಳುತ್ತಿರುವವರಲ್ಲಿ ಸೂಕ್ಷ್ಮರಾದವರು ಕೂಡ ತಮ್ಮ ತಮ್ಮ ಮನೋಲೋಕದ ಆಧ್ಯಾತ್ಮಿಕ ಲೌಕಿಕ ಪ್ರೇರಣೆಗಳ ಬಗ್ಗೆ ಬಿಚ್ಚು ಮನಸ್ಸಿನಿಂದ ಹೇಳಿಕೊಳ್ಳುವುದಿಲ್ಲ. ಹೇಳಿಕೊಳ್ಳುವಂತಹ ಸಾಂಸ್ಕೃತಿಕ ವಾತಾವರಣವೂ ಇಲ್ಲ. ಮತಾಂತರದಿಂದ ಮೇಲುಜಾತಿ ಹಿಂದೂಗಳ ಮನಸ್ಸಿನ ಮೇಲುಂಟಾಗುವ ಗಾಯವನ್ನು ಕಂಡು ಸಂತೋಷಪಡುವುದು ಮಾತ್ರವೇ ಇವರ ಉದ್ದೇಶವಾಗಿರಲಾರದು.

ಒಂದಲ್ಲ ಒಂದು ಕಾರಣಕ್ಕಾಗಿ ಇತಿಹಾಸದಲ್ಲಿ ಮೇಲುಜಾತಿಯವರು ಕೂಡ ಬೇರೆ ಬೇರೆ ಸಂದರ್ಭಗಳಲ್ಲಿ 'ಮತಾಂತರ'ಗೊಂಡಿದ್ದಾರೆ. ಜೈನರು, ಕ್ರೈಸ್ತರು, ಸಾರಸ್ವತರು, ವೀರಶೈವರು, ವೈಷ್ಣವರು, ರಜಪೂತರು – ಹೀಗೇ. ಈವತ್ತು ನಾವು ಕೆಳಸ್ತರದ, ದಲಿತರ ಬಗ್ಗೆ ಏನು ಹೇಳುತ್ತೇವೋ ಅಂತಹ ಆ ಲೌಕಿಕ ಪ್ರಯೋಜನಗಳನ್ನೆಲ್ಲ ಮತಾಂತರದಿಂದ ಮೇಲುಜಾತಿಯವರು ಕೂಡ ಪಡೆದಿದ್ದಾರೆ. ಮಿಷನರಿಗಳ, ಪರಿವರ್ತನಕಾರರ ಗಮನವೂ ಮೊದಮೊದಲು ಇದ್ದದ್ದು ಮೇಲುಜಾತಿಗಳ ಕಡೆಗೇ. ಹೀಗೆಲ್ಲ ಇರುವಾಗ ಕೆಳಜಾತಿಗಳು - ವರ್ಗಗಳ ಮತಾಂತರದ ಬಗ್ಗೆ ಮಾತ್ರ ಹುಯಿಲೆಬ್ಬಿಸುವುದು ವಿಚಿತ್ರವಾಗಿ ಕಾಣುತ್ತದೆ.

ಭೈರಪ್ಪ ಪ್ರಣೀತ ಚರ್ಚೆಯನ್ನು ಕಾರಣವಾಗಿಟ್ಟುಕೊಂಡು ಈ ಲೇಖನವನ್ನು ರಚಿಸಿದ್ದರೂ ಪ್ರಗತಿಪರರು, ಜಾತ್ಯತೀತವಾದಿಗಳು ಮತಾಂತರದ ಸಂಕೀರ್ಣ ನೆಲೆಗಳನ್ನು ಗ್ರಹಿಸಿದ್ದಾರೆಂದು ನನ್ನ ಇಂಗಿತವಲ್ಲ. ಇವರ ಆಶಯಗಳು, ಉದ್ದೇಶಗಳು ಪ್ರಾಮಾಣಿಕತೆ - ಜನಪ್ರೀತಿಯಿಂದಲೇ ಕೂಡಿರಬಹುದಾದರೂ ಸಾರ್ವಜನಿಕರ ವಿಶ್ವಾಸಾರ್ಹತೆಯನ್ನು ಇವರಿಗೇಕೆ ಪಡೆಯಲು ಸಾಧ್ಯವಾಗುತ್ತಿಲ್ಲ, ಜಾತಿವಾದಿಗಳು - ಕೋಮುವಾದಿಗಳಲ್ಲದವರು ಕೂಡ ಇವರನ್ನೇಕೆ ಒಪ್ಪುವುದಿಲ್ಲ ಎಂಬುದು ಯೋಚಿಸಬೇಕಾದ ವಿಚಾರ.

ಮತಾಂತರ ಕುರಿತಂತೆ ಚರ್ಚೆಯನ್ನು ನಾವು ಸಾಹಿತಿಗಳಿಗೆ - ಸಾಹಿತ್ಯ ಕೃತಿಗಳಿಗೇ ಮೀಸಲಾಗಿಟ್ಟರೆ ಕೆಲವು ತೊಂದರೆಗಳಾಗುತ್ತವೆ. ಕುವೆಂಪು ಅವರಾಗಲೀ, ಭೈರಪ್ಪನವರಾಗಲೀ ಒಂದು ಐತಿಹಾಸಿಕ ಸಂದರ್ಭದಲ್ಲಿ ಬರೆಯುವ ಲೇಖಕರಷ್ಟೇ. ಇಂತಹ ಸಂದರ್ಭದ ಒತ್ತಾಯಗಳನ್ನು ಮೀರಿ ಕೂಡ ಕೆಲವು ಪ್ರಶ್ನೆಗಳಿರುತ್ತವೆ. ತಾತ್ವಿಕವಾಗಿ ಮತಾಂತರ ಕುರಿತಂತೆ ಹಿಂದೂಧರ್ಮದ ನಿಲುವೇನು? ಹಿಂದೂಧರ್ಮ ಮತಾಂತರವನ್ನು ಒಪ್ಪುವುದಿಲ್ಲ, ಆಧ್ಯಾತ್ಮಿಕ ಹುಡುಕಾಟದಲ್ಲಿ ಅಗತ್ಯವೆಂದು ಭಾವಿಸುವುದೂ ಇಲ್ಲ. ಇದಕ್ಕೆ ಹಿಂದೂ ಧರ್ಮದ ಲೋಕದೃಷ್ಟಿಯೇ ಕಾರಣ. ಈ ನೋಟವನ್ನು ತತ್ವಶಾಸ್ತ್ರದ ಹಿನ್ನೆಲೆ - ಪರಿಭಾಷೆಯಲ್ಲಿ ಸಮರ್ಥವಾಗಿ ವಿವರಿಸುವ ಉತ್ತಮ ಲೇಖನವೊಂದು ಕನ್ನಡದಲ್ಲಿದೆ. ಶ್ರೀ ಜಿ. ಹನುಮಂತರಾವ್‌ರ ಈ ಬರಹವನ್ನು 'ಪುಸ್ತಕ ಮನೆ' ಮಾಸಿಕವು ತನ್ನ ನವೆಂಬರ್ ಸಂಚಿಕೆಯಲ್ಲಿ ಪುನರ್‌ಮುದ್ರಿಸಿದೆ (ಪುಟ ೫-೧೮). ಈ ಬರಹದಲ್ಲೂ ಶ್ರೀ ಹನುಮಂತರಾವ್ ಗಾಂಧಿ ನಿಲುವುಗಳನ್ನು, ಪ್ರೊ|| ಮೈಟ್‌ಲ್ಯಾಂಡ್‌ರ ಗಾಂಧಿ ಮೇಲಿನ ಪ್ರಭಾವವನ್ನು ಗಮನಿಸುತ್ತಾರೆ. ಇಂತಹದೊಂದು ಉತ್ತಮ ಲೇಖನ ಓದುಗರ ಗಮನಕ್ಕೆ – ಪುನರ್ ಓದಿಗೆ ಅರ್ಹವಾಗಿದೆ.

ಕರಾವಳಿ ಸೀಮೆಯಲ್ಲಿರುವ ಗೋವಾ ಪ್ರದೇಶವೂ ನಾಲ್ಕೈದು ಶತಮಾನಗಳಿಂದ ಮತಾಂತರವನ್ನು ಬೇರೆ ಬೇರೆ ಸ್ತರಗಳಲ್ಲಿ ಎದುರಿಸಿ ಈವತ್ತಿಗೆ ವಿಶಿಷ್ಟವಾದ ಸಾಂಸ್ಕೃತಿಕ ಚಹರೆಯನ್ನು ರೂಢಿಸಿಕೊಂಡು ಆಧುನಿಕವಾಗಿದೆ. ಈ ಇತಿಹಾಸವನ್ನು ಹೇಗೆ ನೋಡಬೇಕು? ಮಿಷನರಿಗಳ ದೃಷ್ಟಿಯಿಂದಲೇ, ಮತಾಂತರಗೊಂಡವರ ದೃಷ್ಟಿಯಿಂದಲೇ, ಗಮನಿಸಬೇಕಾದ ದಾಖಲೆಗಳು ಯಾವುವು, ಯಾವ ರೀತಿಯ ಅಧ್ಯಯನ ಕ್ರಮದಿಂದ ಸತ್ಯಕ್ಕೆ ಹತ್ತಿರವಾಗಬಹುದು – ಇಂತಹ ಸಮಸ್ಯೆಗಳನ್ನೆಲ್ಲ ತನ್ನೆದುರಿಗಿಟ್ಟುಕೊಂಡು Maria Aurora Couto ಬರೆದಿರುವ ಕೃತಿ "Goa - A Daughter's Story" ಕೂಡ ಮತಾಂತರ ಕುರಿತ ನಮ್ಮ ತಿಳುವಳಿಕೆಯನ್ನು ಇನ್ನಷ್ಟು ಸೂಕ್ಷ್ಮಗೊಳಿಸಬಹುದು, ಮಾನವೀಯಗೊಳಿಸಬಹುದು. ಈ ಪುಸ್ತಕವನ್ನು ಓದಲು ಕಾರಣರಾದ ಶ್ರೀ ಜಿ. ರಾಜಶೇಖರ್‌ರವರ ಪ್ರೀತಿ-ಪ್ರೋತ್ಸಾಹವನ್ನು ಇಲ್ಲಿ ನೆನೆಯುತ್ತೇನೆ.

**ಕೆ. ಸತ್ಯನಾರಾಯಣ**
ಫ್ಲಾಟ್ ನಂ. ಸಿ-೪೦೩, ಸಿ-ವಿಂಗ್, ಅಯೋಧ್ಯಾ ಪಾರ್ಕ್
ಪುಣೆ-ಬೆಂಗಳೂರು ಹೈವೇ, ಕೊಲ್ಹಾಪುರ - ೪೧೬ ೦೦೫

# ಕನ್ನಡ ಸಾಹಿತ್ಯ ಪರಂಪರೆ : ಮತೀಯವಾದದ ನಿರಾಕರಣೆ ಮತ್ತು ಕೋಮು ಸೌಹಾರ್ದದ ನೆಲೆಗಳು

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಕರ್ನಾಟಕವನ್ನು ಒಳಗೊಂಡ ಒಟ್ಟು ಭಾರತೀಯ ಸನ್ನಿವೇಶದಲ್ಲಿ ಕೋಮುವಾದ ಎಂಬುದು ಪ್ರಚಲಿತ ಸಮಸ್ಯೆಗಳಲ್ಲಿ ಒಂದಾಗಿದೆ. ಇಂತಹ ಪ್ರಚಲಿತ ಸಮಸ್ಯೆಗಳು ನಮ್ಮನ್ನು ಕಾಡುವಾಗ ಚರಿತ್ರೆಯ ಒಳಹೊಕ್ಕು ಅಲ್ಲಿಯೇನಾದರೂ ಈ ಸಮಸ್ಯೆಗಳಿಗೆ ಪರಿಹಾರವಿದೆಯೇ ಅಥವಾ ಇಂತಹ ಸಮಸ್ಯೆಗಳು ಅಲ್ಲಿಯೇನಾದರೂ ಇದ್ದವೇ; ಇದ್ದರೆ ಅವು ಯಾವ ಸ್ವರೂಪದಲ್ಲಿ ಇದ್ದವು ಎಂಬ ನಾನಾ ಪ್ರಶ್ನೆಗಳನ್ನು ಹಾಕಿಕೊಳ್ಳುವುದು ವಾಡಿಕೆಯಾಗಿದೆ. ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ ಈ ಸಮಸ್ಯೆಯ ನೆಲೆಗಳನ್ನು ನಾನಾ ಥರದಲ್ಲಿ ಶೋಧಿಸಿಕೊಳ್ಳುವುದು ಸಹಜವಾಗಿದೆ. ಇದು ಚರಿತ್ರೆಯ ಜ್ಞಾನಕ್ಕೆ ಸಂಬಂಧಿಸಿದುದಾಗಿದೆ. ಇಂತಹ ಚರಿತ್ರೆಯ ಅರಿವಿನ ಹಿನ್ನೆಲೆಯಲ್ಲಿ ವರ್ತಮಾನವನ್ನು ಕಂಡುಕೊಂಡು, ಇದರ ಭದ್ರ ತಳಹದಿಯ ಮೇಲೆ ಭವಿಷ್ಯವನ್ನು ಕಟ್ಟಿಕೊಳ್ಳುವ ಕ್ರಮ ಇದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಚಲಿತ ಕೋಮುವಾದದ ಚಾರಿತ್ರಿಕ ನೆಲೆಗಳ ಸ್ವರೂಪ ಹಾಗೂ ಅವುಗಳನ್ನು ನಮ್ಮ ಪೂರ್ವಿಕರು ನಿರಾಕರಿಸಿ ಅಥವಾ ಮೀರಿ ಬೆಳೆದ ಕ್ರಮವನ್ನು ಇಲ್ಲಿ ಕಂಡುಕೊಳ್ಳಲು ಯತ್ನಿಸಲಾಗಿದೆ. ಇದಕ್ಕೆ ಭಿತ್ತಿಯಾಗಿ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಲಕ್ಷಿಸಲಾಗಿದೆ.

ಇಂದಿನ ನಮ್ಮ ಸನ್ನಿವೇಶದಲ್ಲಿ ಕೋಮುವಾದ ಎಂಬುದು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಧರ್ಮಗಳ ನಡುವೆ ಪ್ರಮುಖವಾಗಿ ಸುಳಿದಾಡುತ್ತಿದೆ. ಧರ್ಮಗಳನ್ನು ಮೀರಿ ಬೆಳೆದವರಿಗೆ ಇವುಗಳ ಸೋಂಕು ಇಲ್ಲ. ಆದರೆ ಅವುಗಳಲ್ಲಿ ಅನಿವಾರ್ಯವಾಗಿ ಗುರುತಿಸಲ್ಪಡುವ ಸಾಮಾಜಿಕತೆ ಇಲ್ಲಿಯ ನೆಲದ್ದಾಗಿರುವುದರಿಂದ ಧರ್ಮಗಳನ್ನು ಮೀರಿದವರು ಮತ್ತು ಅವುಗಳನ್ನು ಮೀರದವರು ಒಟ್ಟಿಗೆ ಈ ಸಮಸ್ಯೆಗಳಿಗೆ ಪ್ರತಿಕ್ರಿಯೆ ನೀಡುತ್ತಿದ್ದಾರೆ. ಇಂತಹ ಸಮಸ್ಯೆ ಚರಿತ್ರೆಯ ಅನೇಕ ಕಾಲಗಳಲ್ಲಿ ಇತ್ತು ಎಂಬುದು ಚಾರಿತ್ರಿಕ ದಾಖಲೆಗಳಿಂದ ಅರಿವಿಗೆ ಬರುತ್ತದೆ. ಈ ಹಿನ್ನೆಲೆಯಲ್ಲಿ ಇವತ್ತಿನ ಕೋಮುವಾದದ ಚರ್ಚೆಗೆ ಗ್ರಾಸ ನೀಡಿದ, ಮೇಲೆ ಪ್ರಸ್ತಾಪಿಸಿದ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮತಗಳಂತೆ ಹಿಂದೆ ಹರಿ ಮತ್ತು ಹರನ ಪಂಥಗಳು ಸಂಘರ್ಷಕ್ಕೆ ಇಳಿದದ್ದು ಇದೆ. ಅಂತೆಯೇ ದ್ವೈತ ಮತ್ತು ಅದ್ವೈತ, ಎಡಪಂಥೀಯ ಮತ್ತು ಬಲ ಪಂಥೀಯ, ಮಧ್ಯಕಾಲದಿಂದ ಈಚೆಗೆ ಹಿಂದೂ ಮತ್ತು ಮುಸ್ಲಿಂ – ಈ ವಿಭಿನ್ನ ದ್ವಂದ್ವಾತ್ಮಕ ನೆಲೆಗಳು ಚರಿತ್ರೆಯಲ್ಲಿ ಕೋಮುವಾದ ಎಂಬ ಚರ್ಚೆಗೆ ಗ್ರಾಸ ನೀಡಿದವುಗಳಾಗಿವೆ.

ಹೀಗೆ ಇವತ್ತಿನ ಕೋಮುವಾದದ ಚರ್ಚೆಗೆ ನೀಡಿದ ದ್ವಂದ್ವಾತ್ಮಕ ಕಲ್ಪನೆಯಾದ ಹಿಂದೂ-ಮುಸ್ಲಿಂ ಎಂಬ ಕಲ್ಪನೆ ಈ ಹಿಂದೆ ಬೇರೆ ಬೇರೆ ಧರ್ಮ, ಮತಪಂಥಗಳ ಸಂದರ್ಭದಲ್ಲಿ ಬೇರೆ ಬೇರೆ ಪರಿಭಾಷೆಗಳಲ್ಲಿ ಇತ್ತು ಎಂಬುದನ್ನು ಗಮನಿಸಬಹುದಾಗಿದೆ. ಇದೇ ಸಂದರ್ಭದಲ್ಲಿ ಈ ಮತೀಯ ದ್ವಂದ್ವಾತ್ಮಕ ನೆಲೆಗಳನ್ನು ಮೀರಿ ಬೆಳೆದ ಮಾತುಗಳು ಸಹ ಹೊರಟಿವೆ. ಈ ಎಲ್ಲವನ್ನು ಸೋದಾಹರಣವಾಗಿ ಅರಿಯುವ ಅಗತ್ಯವಿದೆ.

**ಎಡಪಂಥೀಯರು ಮತ್ತು ಬಲಪಂಥೀಯರು**

ಭಾರತದ ಬಲಪಂಥೀಯ ಚಿಂತನೆಗಳಿಗೆ ದೊಡ್ಡ ಇತಿಹಾಸವಿದೆ. ಇದನ್ನು ಕಟ್ಟಲು ದೊಡ್ಡ ಪ್ರಮಾಣದ ಚಾರಿತ್ರಿಕ ಆಧಾರಗಳು ಇಂದಿಗೂ ಲಭ್ಯವಿವೆ. ಅಂತೆಯೇ ಎಡಪಂಥೀಯ ಚಿಂತನೆಗಳಿಗೂ ದೊಡ್ಡದಲ್ಲದಿದ್ದರೂ ಇತಿಹಾಸವಂತೂ ಇದೆ. ಆದರೆ ಇದರ ನೆಲೆಗಳನ್ನು ಆನುಷಂಗಿಕವಾಗಿ ಹೊಂದಿರುವ ಸಾಹಿತ್ಯ ಕೃತಿಗಳು ಮಾತ್ರ ನಮಗೆ ಲಭ್ಯವಿವೆ. ಉಳಿದಂತೆ ಇವುಗಳನ್ನೇ ಸಮಗ್ರವಾಗಿ ಹೊಂದಿರುವ ಕೃತಿಗಳು ನಾಶವಾಗಿವೆ. ಇವುಗಳನ್ನು ಚಾರ್ವಾಕರ ಕೃತಿಗಳು, ಲೋಕಾಯತರ ಕೃತಿಗಳು ಎಂಬಿತ್ಯಾದಿ ಹೆಸರುಗಳಲ್ಲಿ ಗುರುತಿಸಲಾಗಿದೆ. ಆದರೆ ಈ ತಿಳುವಳಿಕೆಯ ಸಾರದ ಉಲ್ಲೇಖಗಳು ಎಲ್ಲ ಬಗೆಯ ಕೃತಿಗಳಲ್ಲಿ ಯಾವುದೋ ಸಾಂದರ್ಭಿಕ ಕಾರಣಕ್ಕೆ ಬಳಸಿರುವುದರಿಂದ ಅವುಗಳನ್ನು ವಿವೇಚನೆಯಿಂದ ಹೆಕ್ಕಿ ತೆಗೆದು, ಅನೇಕರು ಭಾರತದ ಎಡಪಂಥೀಯ ಚಿಂತನೆಯ ಇತಿಹಾಸವನ್ನು ಬರೆದಿದ್ದಾರೆ. ಇದಕ್ಕೆ ಆಧಾರವಾಗಬಲ್ಲ ದಾಖಲೆ ನಮಗೆ ಕನ್ನಡದ ಪರಂಪರೆಯಲ್ಲಿ ಮೊದಲಿಗೆ ಸಿಗುವುದು ೧೦ನೇ ಶತಮಾನದಲ್ಲಿ ಇದ್ದ ಪಂಪನಲ್ಲಿ; ಅವನ ಮೊದಲ ಕಾವ್ಯಕೃತಿಯಾದ ಆದಿಪುರಾಣದಲ್ಲಿ.

ಇಲ್ಲಿ ಮಹಾಬಲ ಎಂಬ ರಾಜನ ಪ್ರಸಂಗವಿದೆ. ಇವನ ವಿದ್ವತ್‌ಸಭೆಯಲ್ಲಿ ಎರಡು ಪಂಥಗಳ ವಿದ್ವಾಂಸರಿದ್ದಾರೆ. ಸ್ಥೂಲವಾಗಿ ಅವರು ಲೌಕಿಕತೆಯನ್ನು ಪ್ರತಿಪಾದಿಸುವ ಎಡಪಂಥೀಯರು ಹಾಗೂ ಪಾರಲೌಕಿಕತೆಯನ್ನು ಪ್ರತಿಪಾದಿಸುವ ಸ್ವಯಂಬುದ್ಧ ಎಂಬ ವಿದ್ವಾಂಸ ಮುಖ್ಯರಾದ ಬಲಪಂಥೀಯರು.

ಮಹಾಬಲನ ಜನ್ಮದಿನದ ಸಂದರ್ಭದಲ್ಲಿ ಸ್ವಯಂಬುದ್ಧನೆಂಬ ಬಲಪಂಥೀಯ ವಿದ್ವಾಂಸ ಕರ್ಮಸಿದ್ಧಾಂತಕ್ಕೆ ಒತ್ತುಕೊಟ್ಟು ಮರುಜನ್ಮಗಳನ್ನು ಗಮನಿಸಿ ಐಹಿಕ ಜೀವನಕ್ಕೆ ಬೆನ್ನು ತೋರಿ, ವೈರಾಗ್ಯವನ್ನು ಸ್ವೀಕರಿಸಬೇಕೆಂದು ರಾಜನಿಗೆ ಉಪದೇಶಿಸುತ್ತಾನೆ. ಇದನ್ನು ಗಮನಿಸಿದ ಎಡಪಂಥೀಯರು ಇದು ಎಲ್ಲ ಬಗೆಯಲ್ಲೂ ಅವೈಚಾರಿಕ ಮತ್ತು ಐಹಿಕ ಬದುಕಿಗೆ ವಿರೋಧಿ ಎಂಬುದನ್ನು ಬಗೆಬಗೆಯಾಗಿ ಮಂಡಿಸುತ್ತಾರೆ. ಕಡೆಗೆ ರಾಜ ಬಲಪಂಥೀಯರ ಮಾತಿಗೆ ಮನ್ನಣೆ ನೀಡಿ, ಜನ್ಮಾಂತರಗಳತ್ತ ಹೊರಳುತ್ತಾನೆ. ಈ ಮೂಲಕ ಇಲ್ಲಿ ಬಲಪಂಥೀಯ ವಾದವು ಗೆಲ್ಲುತ್ತದೆ. ಎಡಪಂಥವನ್ನು ಬೋಧಿಸಿದ ವಿದ್ವಾಂಸರು ಮುಂದಿನ ಜನ್ಮಗಳಲ್ಲಿ ನಿಕೃಷ್ಟ ಜೀವಿಗಳಾಗಿ ಹುಟ್ಟುತ್ತಾರೆ.

ಇದು ಇಲ್ಲಿಯ ಪ್ರಸಂಗ. ಇಲ್ಲಿಯ ಮತೀಯವಾದದ ನೆಲೆಯಲ್ಲಿ ಅವೈಚಾರಿಕ ಮಾತುಗಳಿಗೆ ಗೆಲುವು ಸಿಗುತ್ತದೆ. ಈ ಮೂಲಕ ಎರಡು ವಿಭಿನ್ನ ಸೈದ್ಧಾಂತಿಕ ಗುಂಪುಗಳ ನಡುವಿನ ತಾತ್ವಿಕ ಸಂಘರ್ಷ ಕಂಡುಬರುತ್ತದೆ. ಈ ಸಂಘರ್ಷವು ಸಮಾಜದಲ್ಲಿ ಎಂತಹ ಸಂಘರ್ಷಾತ್ಮಕ ಸ್ವರೂಪವನ್ನು ನಿರ್ಮಿಸಿದ್ದಿರಬಹುದೆಂಬುದನ್ನು ಊಹಿಸಲು ಎಡೆಮಾಡಿಕೊಡುತ್ತದೆ.

**'ಮನುಷ್ಯ ಜಾತಿ ತಾನೊಂದೆ ವಲಂ'**

ಬ್ರಾಹ್ಮಣವಾದದ ಪ್ರತಿಪಾದನೆ ಭಾರತದ ಐದು ಸಾವಿರ ವರ್ಷಗಳ ಇತಿಹಾಸದಲ್ಲಿ ಪ್ರಮುಖ ಪಾಠವಾಗಿ ಬಂದಿದೆ. ಇದನ್ನು ಸ್ಥಿರೀಕರಿಸಿದ ಮನು ಮತ್ತು ಅವನ ಮನುಧರ್ಮಶಾಸ್ತ್ರ ಈಗಾಗಲೇ ಬಹಳಷ್ಟು ಹೊಗಳಿಕೆಗೆ ಪಾತ್ರವಾಗಿದೆ ! ಮಹಿಳೆಯರು, ಶೂದ್ರರು, ಸಾಮಾಜಿಕ ಕಳಕಳಿಯುಳ್ಳ ಎಲ್ಲ ಪಂಗಡಗಳ ಜನರೂ ಇಲ್ಲಿ ದನಿ ಸೇರಿಸಿದ್ದಾರೆ. ಆದರೂ ಇಂದಿಗೂ ಗಾಢವಾಗಿ ಪ್ರಚಲಿತವಿರುವುದು ಮನು ಸಂವಿಧಾನವೇ. ನಾವು ಒಪ್ಪಿಕೊಂಡಿರುವ ಅಂಬೇಡ್ಕರ್ ಸಂವಿಧಾನ ರಾಜಕೀಯವಾಗಿ ಆಚರಣೆಯಲ್ಲಿದೆ. ಆದರೆ ಸಾಮಾಜಿಕ ಸ್ತರದಲ್ಲಿ ಇಂದಿಗೂ ಚಾಲ್ತಿಯಲ್ಲಿರುವುದು ಮನು ಸಂವಿಧಾನವೇ. ಇದು ಮೂಲೋತ್ಪಾಟನೆಯಾಗದಿದ್ದರೆ ಅಂಬೇಡ್ಕರ್ ಸಂವಿಧಾನಕ್ಕೆ ನೆಲೆಯೊದಗುವುದಿಲ್ಲ. ಹಾಗಾಗಿಯೇ ಇದು ಒಳಗೊಳಗೆ ಅಂಬೇಡ್ಕರ್ ಸಂವಿಧಾನವನ್ನೇ ಮೂಲೋತ್ಪಾಟನೆ ಮಾಡಲು ಹುನ್ನಾರವನ್ನು ಮಾಡುತ್ತಿರುವುದು ಇಂದಿನ ಸಾಹಿತ್ಯ, ಧರ್ಮ, ಸಂಸ್ಕೃತಿ, ರಾಜಕೀಯ ಮುಂತಾದ ಎಲ್ಲ ರಂಗಗಳಲ್ಲೂ ಕಾಣುತ್ತಿದೆ. ಆದ್ದರಿಂದಲೇ ಪಂಪನ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಮಾತು ನಮಗೆ ಮುಖ್ಯ ಮಾತಾಗಿ ಕೇಳಿಬರುತ್ತಿರುವುದು. ಇಂತಹ

ಮಾತನ್ನು ಆಡಿದ ನಮ್ಮ ಈ ಸನ್ನಿವೇಶವನ್ನು ತನ್ನ ಕಾಲದಲ್ಲಿ ಇನ್ನಷ್ಟು ಗಾಢವಾಗಿ ಕಂಡಿದ್ದಾನೆ. ಆದ್ದರಿಂದಲೇ ಅವನು ಹೇಳಿದ್ದು - ಬ್ರಾಹ್ಮಣರಾದವರಿಗೆ ಕೆಲವು ಅರ್ಹತೆಗಳಿರುತ್ತವೆ. ಅವುಗಳಿಲ್ಲದವರು ಬ್ರಾಹ್ಮಣರಲ್ಲ. ಹುಟ್ಟಿನಿಂದ ಬ್ರಾಹ್ಮಣರಾದವರೆಲ್ಲರೂ ಈ ಅರ್ಹತೆಗಳನ್ನು ಪಡೆದಿರುವುದಿಲ್ಲ. ಅಷ್ಟೇ ಅಲ್ಲದೆ, ಬ್ರಾಹ್ಮಣೇತರರು ಸಹ ಈ ಅರ್ಹತೆಗಳನ್ನು ಪಡೆಯುವುದು ಸಾಧ್ಯವಿದೆ. ಎಷ್ಟೇ ಆದರೂ ಮನುಷ್ಯ ಜಾತಿ ಎಂಬುದು ತಾನೊಂದೇ ಅಲ್ಲವೇ ಎಂದು. ಈ ಮಾತನ್ನು ಇಂದಿನ ಮತ್ತು ಎಂದಿನ ಮತೀಯವಾದದ ನಿರಾಕರಣೆಯ ಸಂದರ್ಭದಲ್ಲಿ ನಮಗೆ ಮುಖ್ಯವಾಗಿ ಕಾಣುತ್ತದೆ.

**ಹರಿ ಮತ್ತು ಹರ = ಹರಿಹರ**

ಇವತ್ತು ಹಿಂದೂ ಮತ್ತು ಮುಸ್ಲಿಂ ಮತೀಯವಾದಿಗಳ ನಡುವಿನ ಸಂಘರ್ಷದಂತೆ ಹಿಂದೆ ವೈಷ್ಣವ ಮತ್ತು ಶೈವರ ನಡುವಿನ ಸಂಘರ್ಷವಿತ್ತು. ಹಾಗಾದರೆ 'ಹಿಂದೂ' ಎಂಬುದು ಎಲ್ಲಿತ್ತು? ಹಾಗಾಗಿ ಹಿಂದೂ ಪರಿಭಾಷೆ, ಪರಿಕಲ್ಪನೆಗೂ ಮತ್ತು ಭಾರತಕ್ಕೂ ಸುಮಾರು ಐನೂರು ವರ್ಷಗಳ ಹಿಂದೆ ಸಂಬಂಧವೇ ಇಲ್ಲ.

ಹೀಗೆ ಅನೇಕ ನೂರು ವರ್ಷಗಳ ಅವಧಿಯಲ್ಲಿ ಅದರಲ್ಲೂ ಸ್ಪಷ್ಟವಾಗಿ ೧೧ ನೇ ಶತಮಾನದಲ್ಲಿ ಇವರಿಬ್ಬರ ನಡುವೆ ಸಂಘರ್ಷ ಇತ್ತು ಎಂಬುದನ್ನು ಈ ಕಾಲದ ಶಾಸನವೊಂದರ ಪಾಠ ಹೇಳುತ್ತದೆ. ಆ ಸಂಘರ್ಷವನ್ನು ಅನೇಕರು ಇಂದಿಗೂ ಉಳಿಸಿಕೊಂಡು ಅದರ ವಾರಸುದಾರರೇ ಸೈ ಎನ್ನಿಸಿಕೊಂಡಿದ್ದಾರೆ. ಹಾಗಾಗಿ ಈ ನೆಲೆ ಕೇವಲ ಚಾರಿತ್ರಿಕವಲ್ಲ; ವರ್ತಮಾನದ್ದೂ ಹೌದು. ಇಂತಹ ಸಂಘರ್ಷವನ್ನು ಗಮನಿಸಿದ ಕೋಮುಸೌಹಾರ್ದದ ಚಿಂತಕರು ಹರಿ ಮತ್ತು ಹರ ಬೇರೆಯಾಗಿದ್ದರೆ ಸಂಘರ್ಷ ತಪ್ಪಿದ್ದಲ್ಲ. ಹಾಗಾಗಿ ಅವರನ್ನು ಏಕೀಭವಿಸಬೇಕು ಎಂದು ಚಿಂತನೆ ನಡೆಸಿ ಹರಿ+ಹರ =ಹರಿಹರ ಎಂದು ಸಮಾಸಪದ ಮತ್ತು ಸಮಾಸ ಕಲ್ಪನೆಯನ್ನು ಸೃಷ್ಟಿಸಿಬಿಟ್ಟರು. ಅದನ್ನು ಹರಿಹರ, ಹರಿಹರೇಶ್ವರ ಮುಂತಾಗಿ ಬಳಸಿಕೊಂಡು ಬರಲಾಗಿದೆ. ಅದರ ಪೂರ್ಣಪಾಠವನ್ನು ಇಲ್ಲಿ ಕೊಡಬಹುದಾಗಿದೆ:

ಹರಿಯಿಂದಂ ಬಿಟ್ಟು ದೈವಂ ಧರಣೀತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ಹರನಿಂದಂ ಬಿಟ್ಟು ದೈವಂ ಧರಣೀತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ನರನಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಮ್ಮಂ
ಶಾಸನಪದ್ಯ, ೧೧ನೇ ಶತಮಾನ

ಹೀಗೆ ಕರ್ನಾಟಕ ಕೋಮು ಸೌಹಾರ್ದ ಚಿಂತನೆಯು ೧೧ನೇ ಶತಮಾನದಲ್ಲಿಯೂ ಕ್ರಿಯಾಶೀಲವಾಗಿತ್ತು ಎಂದು ಇದರಿಂದ ತಿಳಿಯಬಹುದಾಗಿದೆ.

**ದ್ವೈತ ಮತ್ತು ಅದ್ವೈತಗಳ ಅಧ್ವಾನದ ನೆಲೆ**

ಕರ್ನಾಟಕ ಚರಿತ್ರೆಯಲ್ಲಿ ದ್ವೈತಿ ಮತ್ತು ಅದ್ವೈತಿಗಳು ಕೇವಲ ತಮ್ಮ ತಮ್ಮ ಚಿಂತನೆಗಳ ನೆಲೆಯಲ್ಲಿ ಬದುಕಿ ಬಂದವರಲ್ಲ. ಇವರು ಸಾಮಾಜಿಕ ನೆಲೆಯಲ್ಲೂ ಒಂದು ವಿಶಿಷ್ಟ ಸ್ತರದ ಮತೀಯವಾದಿಗಳಾಗಿ ಮೆರೆದಿದ್ದಾರೆ. ಇರುವ ಕೋಮು ಸಮಸ್ಯೆಗಳಲ್ಲಿ ಇದೂ ಒಂದು.




ಇದರಿಂದ ರೋಸಿಹೋದವರು ಆಡಿದ ಮಾತುಗಳಲ್ಲಿ, ಕೆಲವು ಕೀರ್ತನೆಗಳಲ್ಲಿ, ಕಾಣುತ್ತವೆ. ಅವುಗಳಲ್ಲಿ ಒಂದು ೧೬ನೇ ಶತಮಾನದಲ್ಲಿ ಬದುಕಿದ ಪುರಂದರದಾಸರ ಕೀರ್ತನೆಗಳಲ್ಲಿ ಕಾಣುತ್ತದೆ.

ದ್ವೈತ-ಅದ್ವೈತವೆಂದು ಹೊಡದಾಡದಿರೊ ಪ್ರಾಣಿ
ಚೇತಿಸಿ ಬ್ಯಾಗಿಹ ವಸ್ತುಗಾಣಿ

**ಹಿಂದೂ-ಮುಸ್ಲಿಂ**

ಹೀಗೆ ವೈಷ್ಣವ ಮತ್ತು ಶೈವ, ದ್ವೈತ ಮತ್ತು ಅದ್ವೈತ ಮುಂತಾದ ನೆಲೆಗಳಲ್ಲಿ ಕಾಣುವ ಕೋಮು ವೈಷಮ್ಯ ಕಳೆದ ಎರಡು ಶತಮಾನಗಳಿಂದೀಚೆಗೆ ಹಿಂದೂ ಮತ್ತು ಮುಸ್ಲಿಂ ಸಮುದಾಯಗಳಲ್ಲಿ ಏರ್ಪಟ್ಟಿದೆ. ಇದನ್ನು ಮೀರಿ ಬೆಳೆವ ಮಾತುಗಳನ್ನು ಸೌಹಾರ್ದಚಿಂತಕರು ಆಡಿದ್ದಾರೆ. ಚನ್ನೂರು ಜಲಾಲ್ ಸಾಬ್, ಸಾವಳಗಿ ಮಹಮ್ಮದ್ ಸಾಬ್, ಶಿಶುನಾಳ ಶರೀಫ ಸಾಹೇಬ, ಮೋಟ್ನಳ್ಳಿ ಹಸನಸಾಬ್ ಮುಂತಾದವರು ಇಲ್ಲಿ ಪ್ರಮುಖವಾಗಿ ಕಾಣುತ್ತಾರೆ. ಇವರು ೧೯ನೇ ಶತಮಾನದ ಚಿಂತಕರು. ಇನ್ನು ೨೦ನೇ ಶತಮಾನದಲ್ಲಂತೂ ಇಂಥವರ ದೊಡ್ಡ ಪಡೆಯೇ ಕಾಣುತ್ತದೆ. ಕಯ್ಯಾರ ಕಿಞ್ಞಣ್ಣರೈ, ಕುವೆಂಪು, ದ. ರಾ. ಬೇಂದ್ರೆ, ಎಂ.ವಿ. ಕಾಮತ್, ರಂಜಾನ್ ದರ್ಗಾ, ಶಿವರಾಮ ಕಾಡನಕುಪ್ಪೆ, ಎಂ.ಡಿ. ಒಕ್ಕುಂದ, ಬಿ. ಪೀರ್‌ಬಾಷಾ ಮುಂತಾದವರು ಇಲ್ಲಿ ಕಾಣುತ್ತಾರೆ. ಆಶ್ಚರ್ಯವೆಂದರೆ, ಇದೇ ನೆಲೆಯಲ್ಲಿ ಕೆಲವು ಪದ್ಯಗಳನ್ನು ಬರೆದು ಮತೀಯವಾದಿ ರಾಜಕೀಯ ಮತ್ತು ಧಾರ್ಮಿಕ ಸಂಸ್ಥೆಗಳೊಂದಿಗೆ ಕ್ರಮೇಣ ಗುರುತಿಸಿಕೊಂಡ ಕೆಲವು ಕವಿಗಳೂ ಇಲ್ಲಿದ್ದಾರೆ ಎಂಬುದು.

ಹೀಗೆ ಚರಿತ್ರೆಯುದ್ದಕ್ಕೂ ಶೈವ-ವೈಷ್ಣವ-ಜೈನ, ದ್ವೈತ-ಅದ್ವೈತ, ಸ್ಮಾರ್ತ-ಮಾಧ್ವ, ಆರಾಧ್ಯ ಶೈವರು-ಬಸವಾನುಯಾಯಿಗಳು, ಹಿಂದೂ-ಮುಸ್ಲಿಂ, ಕ್ರಿಶ್ಚಿಯನ್-ಸಿಖ್ ಮುಂತಾದ ಬೇರೆ ಬೇರೆ ನೆಲೆಗಳಲ್ಲಿ ಮತೀಯವಾದಿಗಳು ಮತ್ತು ಅವರಿಗೆ ಸೂಕ್ತ ಪಾಠ ಹೇಳುತ್ತ ಬಂದ ಮತೀಯವಾದದ ನಿರಾಕರಣರು ಮತ್ತು ಸೌಹಾರ್ದಕರು ಕಾಣಿಸಿದ್ದಾರೆ.

ಇಲ್ಲಿ ಮತೀಯ ಸೌಹಾರ್ದತೆ ಎಂಬುದೇ ಅಭಿವೃದ್ಧಿಯಲ್ಲ. ಆದರೆ ಅದು ಅಭಿವೃದ್ಧಿಗೆ ಬೇಕಾದ ಅತ್ಯಂತ ಪರಮೋಚ್ಚ ನೆಲೆ. ಇಂತಹ ನೆಲೆಯಲ್ಲಿ ಮತೀಯವಾದದ ನಿರಾಕರಣೆ ಮತ್ತು ಸೌಹಾರ್ದವಾದ ಎಂಬುದನ್ನು ಇಲ್ಲಿಯ ಚಿಂತಕರು ಗುರುತಿಸಿಕೊಳ್ಳಬೇಕು. ಇಲ್ಲಿ ಅಭಿವೃದ್ಧಿಗೆ ಪೂರಕವಾಗಿ ಚಿಂತಿಸಿದವರು, ನುಡಿದವರು ನಿಜದ ದೇಶ ಪ್ರೇಮಿಗಳಾಗಿ ಕಂಡುಬರುತ್ತಾರೆ. ಇವರ ಪಾಠಗಳು ಎಲ್ಲರ ಪಾಠಗಳಾಗಿ ಪರಿವರ್ತನೆಯಾಗಬೇಕು. ಅದಕ್ಕೆ ಬೇಕಾದ ಸಾಂಸ್ಕೃತಿಕ ದ್ರವ್ಯವನ್ನು ನಮ್ಮ ಪರಂಪರೆ ಹೊಂದಿದೆ.

ಹೀಗೆ ಪರಂಪರೆಯಲ್ಲಿ ಮತೀಯ ಸೌಹಾರ್ದತೆಯನ್ನು ಕಾಪಾಡುವ ನೆಲೆಗಳು ಇರುವಂತೆ ಅವುಗಳನ್ನು ಮೀರಿ, ಮಾನವ ಧರ್ಮದ ನೆಲೆಯಲ್ಲಿ ಬೆಳೆದ ಮಾತುಗಳೂ ಇವೆ.

೧. ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ
ಇವ ನಮ್ಮವ ಇವ ನಮ್ಮವ ಇವ ನಮ್ಮವನೆನಿಸಯ್ಯಾ -
ಬಸವಣ್ಣ, ೧೨ನೇ ಶತಮಾನ

೨. ಆವ ಭೇದವಿಲ್ಲದವನೆ ನಿಜ ಜ್ಞಾನಿಯು -ತನು ಭಾವವನರಿತು ನಡೆಯುವವನೆ ನಿಜ ಭಾಗವತನು -
ಪುರಂದರದಾಸರು ೧೬ನೇ ಶತಮಾನ

೩. ಮಾನವ ಜನ್ಮ ದೊಡ್ಡದು - ಇದು
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ

೪. ನಮ್ಮ ದೇವರು ಎಂಬ ಹಮ್ಮೇಕೊ
ನಿಮ್ಮ ದೇವರು ಎಲ್ಲೋ ? ನೀ ಎಲ್ಲೋ ? -
ಮೋಟ್ನಳ್ಳಿ ಹಸನ್ ಸಾಬ್, ೧೯ನೇ ಶತಮಾನ.

ಇದೇ ನೆಲೆಯಲ್ಲಿ ೧೬ನೇ ಶತಮಾನದಲ್ಲಿ ಕಬೀರ ಸಹ ಮಾತನಾಡುತ್ತಾನೆ:

ನನ್ನ ಕೈಯಾರೆ ಮನೆ ಸುಟ್ಟು
ಬೂದಿ ಹೊತ್ತು ಹೊರಟಿರುವೆ,
ಸುಡಬಯಸುವಿರಾದರೆ ನಿಮ್ಮ ಮನೆ
ನನ್ನ ಜತೆಯಲ್ಲಿ ಬರಬಹುದು.

ವರ್ತಮಾನದ ಅರಿವನ್ನು ಸೂಕ್ಷ್ಮಗೊಳಿಸಿಕೊಳ್ಳಲು ಚರಿತ್ರೆಯ ಜ್ಞಾನ ಅತ್ಯವಶ್ಯಕ ಎಂಬುದನ್ನು ಈಗಾಗಲೇ ಪ್ರಾಸಂಗಿಕವಾಗಿ ಪ್ರಸ್ತಾಪಿಸಲಾಗಿದೆ. ಇಲ್ಲಿ ಮತೀಯತೆಯನ್ನು ಮೆರೆದವರು ಸ್ಮಾರಕಗಳಾಗಿ ಸಹ ಉಳಿದುಬಿಟ್ಟಿದ್ದಾರೆ. ವಿಶೇಷವಾಗಿ ಅಂಥವರ ಬಗೆಗೆ ಜಾಗ್ರತರಾಗಿ ಮುಂದಿನ ಹೆಜ್ಜೆಗಳನ್ನಿಡುವುದು ಸೂಕ್ತ. ಇಲ್ಲವಾದಲ್ಲಿ ತಪ್ಪು ಹೆಜ್ಜೆಯನ್ನಿಟ್ಟು ತಪ್ಪು ದಾರಿಗೆ ಬರುವ ಸಾಧ್ಯತೆಯಿದೆ. ಉದಾಹರಣೆಗೆ, ಕುವೆಂಪು ಅವರು 'ಭಾರತ ಜನನಿಯ ತನುಜಾತೆ' ಎಂಬ ಪದ್ಯವನ್ನು ಬರೆಯುತ್ತಾರೆ. ಇದರಲ್ಲಿ ಇವರು ಕರ್ನಾಟಕ-ಭಾರತವನ್ನು ಸರ್ವಜನಾಂಗದ ಶಾಂತಿಯ ತೋಟ ಎಂದು ಕರೆಯುತ್ತಾರೆ. ಇದನ್ನು ರೂಪಿಸುವಲ್ಲಿ ಶಂಕರ, ರಾಮಾನುಜ, ವಿದ್ಯಾರಣ್ಯ ಮುಂತಾದ ಅನೇಕರನ್ನು ಹೆಸರಿಸುತ್ತಾರೆ. ಆದರೆ ಇವರು ಈ ಪದ್ಯವನ್ನು ಬರೆಯುವಾಗ ವಿಶೇಷವಾಗಿ ಶಂಕರಾಚಾರ್ಯರ ತತ್ತ್ವಜ್ಞಾನದ ಪರಿಚಯವನ್ನು ಹೊಂದಿದ್ದರೆ ಎಂಬ ಪ್ರಶ್ನೆ ಕಾಡುತ್ತದೆ. ಶಂಕರಾಚಾರ್ಯರ ಮನುತನ ಮತ್ತು ಮತೀಯತೆ ಭಾರತದ ಸ್ತ್ರೀಯನ್ನು ಒಳಗೊಂಡಂತೆ ಬಹುಜನ ಸಮುದಾಯವನ್ನು ತೀವ್ರವಾಗಿ ಘಾಸಿಗೊಳಿಸಿದೆ. ಇಂಥ ವ್ಯಕ್ತಿಯನ್ನು ನಾಡಗೀತೆಯ ಹೆಸರಿನಲ್ಲಿ ಪ್ರತಿದಿನ ಉಚ್ಚರಿಸುವುದು ಹಿಂಸೆಯಲ್ಲವೇ? ಯಾವ ತಪ್ಪಿಗೆ ಈ ಶಿಕ್ಷೆ? ನಾಡಗೀತೆಗಿಂತ ನಾಡು ಮುಖ್ಯವಾದಾಗ

ಮುಂದಿನ ಪುಟಕ್ಕೆ..

# ಮೊದಲ ಬುದ್ಧಿವಂತನ ಕತೆ

ಬಹಳ ವರ್ಷಗಳ ಹಿಂದೆ, ಅಂದರೆ ನೂರಿನ್ನೂರು ವರ್ಷಗಳ ಹಿಂದೆ ಅಲ್ಲ. ಅದಕ್ಕೂ ಹಿಂದೆ... ಆದಿಮ ಕಾಲ ಅಂತಾರಲ್ಲ ಆ ಕಾಲ ಅಂತಿಟ್ಕೊಳ್ಳಿ. ಬಹುಶಃ ಮಾನವರಿನ್ನೂ ಮನೆ ಕಟ್ಟಿರಲಿಲ್ಲ, ಜಮೀನುಗಳನ್ನು ಮಾಡಿರ್ಲಿಲ್ಲ. ಅಲ್ಲಿ ಇಲ್ಲಿ ಅಲೆದಾಡ್ಕೊಂಡು ಗೆಡ್ಡೆಗೆಣಸು ತಿಂದ್ಕೊಂಡು, ಬೇಟೆ ಆಡ್ಕೊಂಡು... ಮಾಂಸವನ್ನು ಹಸಿ ಹಸಿಯಾಗಿಯೇ ತಿಂದ್ಕೊಂಡು... ಹುಟ್ಟಿದ್ದಕ್ಕೆ, ವಯಸ್ಸಾಗಿದ್ದಕ್ಕೆ, ಸತ್ತಿದ್ದಕ್ಕೆ... ಹೀಗೆ ಯಾವ್ದಕ್ಕೂ ತಲೆ ಕೆಡಿಸಿಕೊಳ್ದೆ ಬದುಕ್ತಾ ಇದ್ದ ಕಾಲ. ಆವಾಗ ಆ ಜನರ ನಡುವೆ ಒಬ್ಬ ಬುದ್ಧಿವಂತ ಇದ್ದ. ಬಹುಶಃ ಸರಿಯಾಗಿ ಗುರ್ತಿಸಿ ಹೇಳೋದಾದ್ರೆ ಈಗಿನ ಎಲ್ಲಾ ಬುದ್ಧಿವಂತರ ಮೂಲಪುರುಷ ಅವ್ನೇ ಇರ್ಬಹುದೇನೋ...!? ಅವ್ನಿಗೆ ಈ ಗೆಡ್ಡೆ ಗೆಣಸಿಗೆ ಓಡಾಡೋದು, ನೆಲ ಅಗೆಯೋದು, ಬೇಟೆ ಆಡಕ್ಕೆ ಓಡೋದು ಇವೆಲ್ಲಾ ಇಷ್ಟ ಆಗ್ತಿರ್ಲಿಲ್ಲ. ಯಾಕೇಂದ್ರೆ ಅವ್ನು ಯಾವಾಗ್ಲೂ ಬೇರೆಯವ್ರು ತಂದಿದ್ದನ್ನ ಲಪಟಾಯಿಸೋ ಆಲೋಚನೇಲೇ ಇರ್ತಿದ್ದ. ಒಮ್ಮೊಮ್ಮೆ ಹ್ಯಾಗೋ ಎಗರ್ಸ್ತಾ ಇದ್ದ. ಬಹಳಷ್ಟು ಸಂದರ್ಭಗಳಲ್ಲಿ ಅದು ಸಾಧ್ಯವಾಗ್ದೆ ಸಹ ಮಾನವರಿಂದ ಒದೆ ತಿನ್ತಿದ್ದ. ಇದ್ರಿಂದ ರೋಸಿಹೋದ ಅವ್ನು ಒಂದಿನ ದೇವ್ರನ್ನ ಪ್ರತ್ಯಕ್ಷ ಮಾಡ್ಕೊಂಡು ವರ ಕೇಳೋ ದೃಢನಿಶ್ಚಯ ಮಾಡ್ಕೊಂಡು ಒಂದು ಬೆಟ್ಟದ ಮೇಲೆ ತಪಸ್ಗೆ ಕೂತ.

ಅದುವರ್ಗೂ ಯಾರೂ ಹೀಗೆ ತಪಸ್ಗೆ ಕೂತಿರ್ಲಿಲ್ಲ. ದೇವ್ರಿಗೂ ಸ್ವಲ್ಪ ಗಾಬರಿಯಾಯ್ತು. ಪ್ರತ್ಯಕ್ಷ ಆಗೋಕ್ಮುಂಚೆ ಎಷ್ಟು ಕಾಲ ತಗೋಬೇಕು, ತಪಸ್ಸು ಕೆಡಿಸೋಕೆ ಏನೆಲ್ಲಾ ಮಾಡ್ಬೇಕು ಅನ್ನೋ ತಂತ್ರಗಳು ಆ ಕಾಲಕ್ಕೆ ಇನ್ನೂ ನಿರ್ಧಾರ ಆಗಿರ್ಲಿಲ್ಲ. ಸರಿ ಮೂರೇ ದಿನಕ್ಕೆ ದೇವ್ರು ಅವನ ಮುಂದೆ ಪ್ರತ್ಯಕ್ಷ ಆಗ್ಬಿಟ್ಟ. ಆ ಮನುಷ್ಯ ಕಣ್ಬಿಟ್ಟು ನೋಡ್ದ... ಹೆಚ್ಚೂ ಕಡಿಮೆ ತನ್ನಂತೆ ಇರುವ ಇನ್ನೊಬ್ಬ ಮನುಷ್ಯನನ್ನು ನೋಡಿ... ''ಯಾರಪ್ಪಾ ನೀನು...?'' ಅಂದ.

''ನಾನು ದೇವ್ರು ಕಣಪ್ಪಾ.''

ಆಗಿನ್ನೂ ದೇವ್ರು ಮನಷ್ಯನಿದ್ದಂಗೇ ಇದ್ದಾಂತ ಕಾಣುತ್ತೆ... ವಜ್ರ ವೈಢೂರ್ಯಗಳನ್ನಂಟಿಸಿದ್ದ ಬಂಗಾರದ ಕಿರೀಟ ತಲೆ ಮೇಲಿರ್ಲಿಲ್ಲ, ತಲೆ ಸುತ್ತಾ ಪ್ರಭಾವಳಿಯಾಗ್ಲಿ, ಮೈ ಮೇಲೆ ಒಡವೆಗಳಾಗ್ಲಿ, ರೇಷ್ಮೆಬಟ್ಟೆಗಳಾಗ್ಲಿ, ಕೈಯಲ್ಲಿ ಆಯುಧಗಳಾಗ್ಲಿ ಏನೂ ಇರ್ಲಿಲ್ಲ. ಯಾಕೇಂದ್ರೆ ಅವ್ನೆಲ್ಲಾ ಮಾಡಿಕೊಡೋಂತ ಭಕ್ತ್ರ್ಯಾರೂ ಆವಾಗ ಇರ್ಲಿಲ್ಲ... ಒಂದ್ವೇಳೆ ಇದ್ದಿದ್ರೂ ಮಾಡ್ಕೊಡೋಂತ ಕೆಲ್ಸಗಾರ್ರೆ ಇರ್ಲಿಲ್ವಲ್ಲ...! ಆ ದೇವ್ರೂನೂ ಸೊಂಟದ ಸುತ್ತ ಯಾವ್ದೋ ಪ್ರಾಣಿಯ ಚರ್ಮ ಸುತ್ಕೊಂಡಿದ್ದು ಬಿಟ್ರೆ ಮಿಕ್ಕೆಲ್ಲಾ ಈ ಬುದ್ಧಿವಂತ ಮನುಷ್ಯನಂಗೆ ನಗ್ನವಾಗೇ ಇದ್ದ.

''ದೇವ್ರೆ ನಂಗೊಂದು ವರಾ ಕೊಡು.''

''ಏನು ವರಾನಪ್ಪಾ...?''

ಈ ಬುದ್ಧಿವಂತ ಯೋಚಿಸ್ದ ಸ್ವಲ್ಪ ಹೊತ್ತು. ಇಡೀ ಮನುಕುಲ ಕೇಳ್ತಿರೋ ಮೊದಲ್ನೆ ವರ... ನಿಧಾನವಾಗಿ ಕೇಳ್ದ:

''ದೇವ್ರೆ ನಾನು ಕಷ್ಟಾ ಪಡ್ದೆ ನಂಗೆ ಊಟ ಸಿಗ್ತಾ ಇರೋಂಗೆ ವರ ಕೊಡು.''

''ಸಾಧ್ಯವಿಲ್ಲಪ್ಪಾ... ಅದು ನಿಯಮ ಆಗೋಗಿದೆ. ನೀನು ಈ ಭೂಮಿ ಮೇಲೆ



ಬದುಕಬೇಕೂಂದ್ರೆ ನಿನ್ನ ಊಟ ನೀನೇ ಹುಡುಕ್ಕೋಬೇಕು. ಆಗಲ್ಲಾಂದ್ರೆ ಈಗಿಂದೀಗ್ಲೆ ನನ್ಜೊತೆ ಬಂದ್ಬಿಡು...''

ನಾನು ಕಷ್ಟಾಪಟ್ಟು ತಪಸ್ಸು ಮಾಡಿ ನಿನ್ನ ಇಲ್ಲಿಗೆ ಕರಸ್ಕಂಡಿದೀನಿ, ನಾನು ಕೇಳಿದ್ದನ್ನ ಕೊಟ್ಟು ಹೋಗೋದಷ್ಟೆ ನಿನ್ನ ಕೆಲ್ಸ. ದೂಸ್ರಾ ಮಾತಾಡ್ಬೇಡ ಅಂತ ದೇವ್ರಿಗೇ ರೋಫ್ ಹಾಕೊವಷ್ಟು ಜ್ಞಾನ ಆಗಿನ್ನೂ ಬೆಳೆದಿರಲಿಲ್ಲ.

''ಹೋಗ್ಲಿ ದೇವ್ರೆ... ಬೇರೇವ್ರು ಹುಡ್ಕೊಳ್ಳೊ ಊಟದಲ್ಲಿ ನಂಗೊಂದಿಷ್ಟು ಒಪ್ಪಿಸಬೇಕು ಅನ್ನೋ ಬುದ್ಧಿನ ಆ ಬೇರೇವ್ರಿಗೆಲ್ಲಾ ಕೊಡು''

ದೇವ್ರು ಹಿಂದೆ ಮುಂದೆ ಯೋಚಿಸ್ದೆ ತಥಾಸ್ತು ಅಂದುಬಿಟ್ಟು ಮಾಯವಾಗಿ ಹೋದ.

* * *

ಆದ್ರಿಂದ್ಲೆ ಇಂದಿಗೂ ಈ ಮಾನವರಲ್ಲಿ ಬಹಳಷ್ಟು ಜನ ತಮ್ಮ ಶ್ರಮ, ಜ್ಞಾನ, ಕ್ರಿಯಾಶೀಲತೆ, ಆಲೋಚನೆ, ದುಡಿಮೆ ಕೊನೆಗೆ ತಮ್ಮ ಜುಟ್ಟುಗಳನ್ನೂ ಸಹ ಆ ಕೆಲವೇ ಬುದ್ಧಿವಂತರ ಕೈಗಿಟ್ಟು, ಸ್ವತಂತ್ರವಾಗಿ ಉಸಿರು ಮಾತ್ರ ಆಡ್ತಾ ಬದುಕ್ತಾ ಇದಾರೆ. ಆ ಬುದ್ಧಿವಂತರೂ ಅಷ್ಟೆ. ಈ ಸಾಮಾನ್ಯ ಜನಕ್ಕೆ ದೇವರ ವರವನ್ನು ಚಾಚೂ ತಪ್ಪದೆ ಪಾಲಿಸಲು ಬೇಕಾದ ಅವಕಾಶಗಳನ್ನು ಹೆಚ್ಚೆಚ್ಚು ಕಲ್ಪಿಸುತ್ತಾ, ಪಾಲಿಸಲು ನಿರಾಕರಿಸುವ ಪುಂಡರನ್ನು ಹದ್ದುಬಸ್ತಿನಲ್ಲಿಡುವ ವ್ಯವಸ್ಥೆಯೊಂದನ್ನು ಬೆಳೆಸಿಕೊಂಡು ಆ ದೇವರ ಸೇವೆ ಮಾಡುತ್ತಾ ಕೃತಾರ್ಥರಾಗುತ್ತಿದ್ದಾರೆ.

**ಎಂ. ಜೆ. ರಾಜೀವ ಗೌಡ, ಮೇಲೂರು**

C/O ಮಲ್ಲಿಕಾರ್ಜುನಯ್ಯ, ಪ್ರಕೃತಿ ನಿಲಯ, ರೇಷ್ಮೆ ಗೂಡು ಮಾರುಕಟ್ಟೆ ರಸ್ತೆ, ವಾಪಸಂದ್ರ, ಚಿಕ್ಕಬಳ್ಳಾಪುರ - ೫೬೨೧೦೧

ಹಿಂದಿನ ಪುಟದಿಂದ...

ಅದು ಅನಿವಾರ್ಯವಾಗಿ ಪರಿಷ್ಕಾರಗೊಳ್ಳಬೇಕು.

ಅಷ್ಟಕ್ಕೂ ಕುವೆಂಪು ಅವರು ಈ ಪದ್ಯವನ್ನು ಬರೆದದ್ದು ತಮ್ಮ ಇಪ್ಪತ್ತೇಳನೆಯ ವಯಸ್ಸಿನಲ್ಲಿ. ಆದರ್ಶ ಮತ್ತು ರಮ್ಯತೆಯ ನೆಲೆಯಲ್ಲಿ ಇದನ್ನು ಬರೆದಿದ್ದಾರೆ. ಈ ಚಾರಿತ್ರಿಕ ಹಿನ್ನೆಲೆಯಲ್ಲಿ ಇದನ್ನು ಗಮನಿಸಬೇಕು. ಆದರೆ ಇದನ್ನು ನಾಡಗೀತೆಯನ್ನಾಗಿ ಸ್ವೀಕರಿಸುವಾಗ ಇದರ ಪ್ರತಿಯೊಂದು ಪದದ ಬಗೆಗೂ ವಿಮರ್ಶಾತ್ಮಕ ಎಚ್ಚರವನ್ನು ಉಳಿಸಿಕೊಳ್ಳಬೇಕು. ಇಲ್ಲವಾದಲ್ಲಿ ಜೈನಕೇಂದ್ರವನ್ನು ಧ್ವಂಸಮಾಡಿ ಬ್ರಾಹ್ಮಣ ಕೇಂದ್ರವನ್ನು ಕಟ್ಟಿದ ಶೃಂಗೇರಿ ಮಠ ಆರಾಧ್ಯವಾಗಿಬಿಡುತ್ತದೆ. ಇದರ ವಿಸ್ತೃತ ವಿವರಣೆಗಾಗಿ ಕರ್ನಾಟಕದ ಮೌಖಿಕ ಚರಿತ್ರೆಯು ದಾಖಲೆಯಾದ ೧೯ನೇ ಶತಮಾನದ ದೇವಚಂದ್ರನ 'ರಾಜಾವಳಿ ಕಥೆ'ಯನ್ನು ನೋಡಬಹುದಾಗಿದೆ.

ಹೀಗೆ ಸಮಕಾಲೀನ ಸಂದರ್ಭದಲ್ಲಿ ಕೋಮು ಸೌಹಾರ್ದತೆಯನ್ನು ಕಾಪಾಡಿ, ದೇಶದ ಅಭಿವೃದ್ಧಿಗೆ ಪೂರಕವಾದ ವಾತಾವರಣವನ್ನು ರೂಪಿಸುವಾಗ ಚರಿತ್ರೆಯ ಪಾಠಗಳು ಯಾವುದೇ ಮಮಕಾರವಿಲ್ಲದೆ ನಮ್ಮದಾಗಬೇಕು. ಈ ದಾರಿಯಲ್ಲಿ ನಡೆದ ಪೂರ್ವಿಕರು ನಮ್ಮೊಡನೆಯ ಚರ್ಚೆಯಲ್ಲಿರಬೇಕು. ಅಲ್ಲಿ ಏಳುವ ಚರ್ಚೆ ಬೆಂಕಿಯನ್ನು ಹಣತೆಯ ಬೆಳಕನ್ನಾಗಿ ಮಾಡುತ್ತದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**

ರೀಡರ್, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ -೫೬೩ ೧೦೧




# ಉರಿಯುತ್ತಿದೆ ಗಾಜ಼ಾ : ಇಸ್ರೇಲ್‌ನ ರಾಕ್ಷಸೀ ಕೃತ್ಯ

**ಮ**ಧ್ಯ ಏಶಿಯದ ಗಾಜ಼ಾ ಪಟ್ಟಿಯಲ್ಲಿ ಅಮಾಯಕ ಪ್ಯಾಲಸ್ತೀನಿಯನ್ನರ ಸಾಮೂಹಿಕ ಹತ್ಯೆ ಮುಂದುವರಿದಿದೆ. ಇಸ್ರೇಲ್ ಸೇನೆ ಫ್ಯಾಸಿಸ್ಟ್ ಮಾದರಿಯಲ್ಲಿ ನಾಗರಿಕರ ಮೇಲೆ ಬಾಂಬಿನ ಮಳೆಗರೆಯುತ್ತಿದೆ. ಹೆಂಗಸರು-ಮಕ್ಕಳು-ಮುದುಕರೆಂದು ಲೆಕ್ಕಿಸದೆ ಇಸ್ರೇಲಿನ ಟ್ಯಾಂಕುಗಳು ನುಗ್ಗುತ್ತಿವೆ. ನಾಗರಿಕ ಜಗತ್ತು, ವಿಶ್ವಸಂಸ್ಥೆ ಇದಕ್ಕೆ ಮೂಕಸಾಕ್ಷಿಯಾಗಿ ನಿಂತಿವೆ, ನಿಷ್ಕ್ರಿಯತೆಯಿಂದ. ಹಮಾಸ್ ಉಗ್ರಗಾಮಿಗಳನ್ನು ಹತ್ತಿಕ್ಕುವ ನೆಪದಿಂದ ಇಸ್ರೇಲ್ ಗಾಜ಼ಾ ಪಟ್ಟಿ ಪ್ರದೇಶವನ್ನು ದಿಗ್ಬಂಧನಮಾಡಿ ಕುಡಿಯುವ ನೀರೂ ದೊರೆಯದಂತೆ ಮಾಡಿದೆ. ವಿಶ್ವಸಂಸ್ಥೆಯ ಏಜನ್ಸಿಗಳು ದಿಗ್ಬಂಧನವನ್ನು, ಮುಖ್ಯವಾಗಿ ಆಹಾರ ಸರಬರಾಜು ತಡೆದಿರುವುದನ್ನು ಸಾಮೂಹಿಕ ಶಿಕ್ಷೆ ಎಂದು ಕರೆದಿವೆ. ಗಾಜ಼ಾ ಪಟ್ಟಿಯ ಒಂದೂವರೆ ಮಿಲಿಯ ಪ್ಯಾಲಸ್ತೀನಿಯನ್ನರು ವಿದ್ಯುಚ್ಛಕ್ತಿ, ನೀರು ಸರಬರಾಜು ಇಲ್ಲದೆ, ಆಹಾರ ಸಾಮಗ್ರಿಗಳು, ಔಷಧಗಳ ಕೊರತೆಯಿಂದ ಪರಿತಪಿಸುತ್ತಿದ್ದಾರೆ. ಸಾವಿರಕ್ಕೂ ಹೆಚ್ಚು ನಾಗರಿಕರು ಹತರಾಗಿದ್ದಾರೆ. ಯುದ್ಧಸ್ತಂಭನಕ್ಕಾಗಿ ವಿಶ್ವಸಂಸ್ಥೆಯ ಕರೆಯನ್ನು ಉಲ್ಲಂಘಿಸಿ ಇಸ್ರೇಲ್ ತನ್ನ ದಾಳಿಯನ್ನು ಸತತವಾಗಿ ಮುಂದುವರಿಸುತ್ತಿದೆ. ಇಷ್ಟಾದರೂ ನಾಗರಿಕ ಜಗತ್ತು ಇಸ್ರೇಲಿನ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ ನಿಷ್ಕ್ರಿಯವಾಗಿದೆ. ವಿಶ್ವಸಂಸ್ಥೆಯ ನಿರ್ಣಯಗಳನ್ನು ಅತಿ ಹೆಚ್ಚಾಗಿ ಉಲ್ಲಂಘನೆ ಮಾಡಿ ದಾಖಲೆ ಸೃಷ್ಟಿಸಿರುವ ಏಕೈಕ ದೇಶ ಇಸ್ರೇಲ್. ಅಮೆರಿಕಾದ ಅಭಯಹಸ್ತ ಇರುವುದರಿಂದ ಇಸ್ರೇಲಿನ ಅಟ್ಟಹಾಸ ಅವ್ಯಾಹತವಾಗಿ ಸಾಗಿದೆ. ಇಸ್ರೇಲ್‌ನ ದೌರ್ಜನ್ಯಗಳನ್ನು ಖಂಡಿಸಿರುವ ನೊಬೆಲ್ ಪುರಸ್ಕಾರ ವಿಜೇತ ಐರ್‌ಲೆಂಡಿನ ಮೇಲೀಡ್ ಮ್ಯಾಕ್‌ಗುರ್ ಇಸ್ರೇಲನ್ನು ವಿಶ್ವಸಂಸ್ಥೆಯಿಂದ ಹೊರಹಾಕಬೇಕೆಂದೂ, ಇದಕ್ಕಾಗಿ ಅಂತರರಾಷ್ಟ್ರೀಯ ಜನಾಭಿಪ್ರಾಯ ರೂಪಿಸಬೇಕೆಂದೂ ಕರೆನೀಡಿದ್ದಾರೆ. ಹಮಾಸ್ ಭಯೋತ್ಪಾದಕರನ್ನು ನಿಗ್ರಹಿಸುವ ಹೆಸರಿನಲ್ಲಿ ಇಸ್ರೇಲ್ ನಡೆಸುತ್ತಿರುವ ರಾಜ್ಯಭಯೋತ್ಪಾದನೆಗೆ ಕಡಿವಾಣವೇ ಇಲ್ಲದಂತಾಗಿದೆ. ಎನ್‌ಡಿಎ ಆಡಳಿತದಲ್ಲಿ ಇಸ್ರೇಲ್‌ನೊಂದಿಗೆ ಬೆಳೆಸಿದ ಸಖ್ಯವನ್ನು ಮುಂದುವರಿಸುತ್ತಿರುವ ಮನಮೋಹನ ಸಿಂಗ್ ಇಸ್ರೇಲಿನ ದುಷ್ಕೃತ್ಯವನ್ನು ಖಂಡಿಸಿ, ಅದರ ವಿರುದ್ಧ ಕ್ರಮಕೈಗೊಳ್ಳುವುದರ ಬದಲು ಒಪ್ಪಂದದಂತೆ ಶಸ್ತ್ರಾಸ್ತ್ರಗಳ ಸರಬರಾಜಿನ ವ್ಯವಹಾರ ನಡೆಸುತ್ತಿರುವುದು ಶೋಚನೀಯ. ಪ್ರಾರಂಭದಿಂದಲೂ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಗಾಗಿ ಅಲ್ಲಿನ ಜನತೆಯ ಹೋರಾಟಕ್ಕೆ ಬೆಂಬಲ ನೀಡುತ್ತ ಬಂದಿರುವ ಭಾರತ ಈಗ ಕೈಕಟ್ಟಿ ಕುಳಿತಿದೆ. ಭಾರತ ಸರಕಾರ ಇಸ್ರೇಲಿನ ಮೇಲೆ ಸೂಕ್ತ ರಾಜತಾಂತ್ರಿಕ ಕ್ರಮ ಕೈಗೊಳ್ಳುವಂತೆ ಒತ್ತಾಯ ತರಲು ಜನತೆ ಒತ್ತಾಯ ತರಬೇಕಾಗಿದೆ. ಅರಬ್ ರಾಷ್ಟ್ರಗಳಲ್ಲಿ ಇಸ್ರೇಲ್‌ನ ವಿರುದ್ಧ ಪ್ರದರ್ಶನಗಳು ನಡೆಯುತ್ತಿದ್ದರೂ ಸರಕಾರಗಳು ಮಾತ್ರ ಯಾವುದೇ ಒತ್ತಡ ತರಲು ಮುಂದಾಗದಿರುವುದು ವಿಷಾದನೀಯ. ಇದರಿಂದ ಇಸ್ರೇಲಿನ ಪುಂಡಾಟಿಕೆಗೆ ಮಿತಿಯೇ ಇಲ್ಲದಂತಾಗಿದೆ. ಈಜಿಪ್ಟ್ ಸರಕಾರ ಭಯೋತ್ಪಾದಕರು ಎಂದು ಇಸ್ರೇಲ್ ಕರೆದಿರುವ ಹಮಾಸ್‌ನ ಮೇಲೆ ದಾಳಿಯನ್ನು ಸಮರ್ಥಿಸುವಂಥ ಹೇಳಿಕೆ ನೀಡಿರುವುದು ಖಂಡನೀಯ.

ಸೀಯಾರ್ಕೆ

ಕಳೆದ ವರ್ಷದ ಕೊನೆಯಲ್ಲಿ ಇಸ್ರೇಲ್ ಗಾಜ಼ಾ ಪಟ್ಟಿಯ ಪ್ರದೇಶದ ಮೇಲೆ ಹೇರಿರುವ ದಿಗ್ಬಂಧನ ಹಾಗೂ ಪೂರ್ಣ ಪ್ರಮಾಣದ ದಾಳಿಯು ಸ್ಪಷ್ಟವಾದ ಗುರಿಯನ್ನು ಹೊಂದಿದೆ. ಅದು ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯನ್ನೂ ಸಂಪೂರ್ಣವಾಗಿ ನಿರಾಕರಿಸುವುದಾಗಿದೆ. ಇಸ್ರೇಲ್ ಸ್ಥಾಪನೆಗೊಂಡಂದಿನಿಂದ ಹೊಂದಿರುವ ಏಕೈಕ ಗುರಿ ತನ್ನ ಸರಹದ್ದಿನ ವಿಸ್ತರಣೆ ಮತ್ತು ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯ ನಿರಾಕರಣೆ. ನಾರ್ವೆಯ ಮಧ್ಯಸ್ತಿಕೆಯಿಂದ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಇಸ್ರೇಲ್ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಗೆ ಪೂರ್ವಭಾವಿಯಾಗಿ ಯಾಸೆರ್ ಅರಾಫತ್ ನೇತೃತ್ವದ ಪ್ಯಾಲೆಸ್ತೈನ್ ವಿಮೋಚನಾ ಸಂಸ್ಥೆಗೆ ಸ್ವಯಮಾಡಳಿತ ಅಧಿಕಾರ ನೀಡಲು ಸಮ್ಮತಿಸಿ ಒಪ್ಪಂದಮಾಡಿಕೊಂಡಿತು. ಆದರೆ ಈ ಒಪ್ಪಂದವನ್ನು ಮಾಮೂಲಿನಂತೆ ಪೂರ್ಣವಾಗಿ ಕಾರ್ಯಗತಮಾಡದೆ ಇಲ್ಲದ ಅಡ್ಡಿಗಳನ್ನು ತಂದಿತು. ಇಸ್ರೇಲ್‌ನೊಂದಿಗಿನ ಒಪ್ಪಂದವನ್ನು ವಿರೋಧಿಸಿದ್ದು ಗಾಜ಼ಾ ಪ್ರದೇಶದಲ್ಲಿ ಪ್ರಬಲವಾಗಿರುವ ಹಮಾಸ್. ಹಮಾಸ್ ಸಂಘಟನೆಯನ್ನು ಉಗ್ರಗಾಮಿಗಳು ಎಂದು ಹಣೆಪಟ್ಟಿ ಹಚ್ಚಿ ಇಸ್ರೇಲ್ ಪ್ಯಾಲಸ್ತೈನ್ ಆಡಳಿತೆಗೆ ಒಡ್ಡಿದ ಅಡ್ಡಿಗಳು ಆದರ ಮೇಲೆ ನಡೆಸಿದ ದಾಳಿಗಳು ಲೆಕ್ಕವಿಲ್ಲದಷ್ಟು. ಯಾಸೆರ್ ಅರಾಫತ್ ಅವರ ನಿಧನಾನಂತರ ಅಮೆರಿಕಾ-ಇಸ್ರೇಲ್ ಎರಡೂ ರಾಷ್ಟ್ರಗಳು ಕುತಂತ್ರದಿಂದ ಹಮಾಸ್ ಮತ್ತು ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯ ನಡುವೆ ಬಿರುಕು ಮತ್ತಷ್ಟು ತೀವ್ರಗೊಂಡಿತು. ಇಸ್ರೇಲ್ ಎಡಬಿಡದೆ ಹಮಾಸ್ ಅನುಯಾಯಿಗಳ ಮೇಲೆ ದಾಳಿಯನ್ನು ನಡೆಸತೊಡಗಿತು. ೨೦೦೬ರ ಪಾರ್ಲಿಮೆಂಟರಿ ಚುನಾವಣೆಗಳಲ್ಲಿ ಹಮಾಸ್ ಬಹುಮತ ಗಳಿಸಿದಾಗ್ಯೂ ಅದು ಅಧಿಕಾರವಂಚಿತವಾಯಿತು. ಗಾಜ಼ಾ ಪಟ್ಟಿಯಲ್ಲಿ ಪ್ರಬಲವಾಗಿರುವ ಹಮಾಸ್‌ಅನ್ನು ಮುಗಿಸುವುದು ಇಸ್ರೇಲಿನ ಮುಂದಿನ ಗುರಿಯಾಯಿತು. ಇದಕ್ಕೆ ಇಸ್ರೇಲ್ ಪಶ್ಚಿಮ ದಂಡೆಯ ಪ್ರದೇಶದಲ್ಲಿ ಆಡಳಿತದಲ್ಲಿರುವ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯನ್ನು ಬಳಸಿಕೊಂಡಿತು. ಹಮಾಸ್‌ನ ಭದ್ರಕೋಟೆ ಗಾಜ಼ಾ ಪಟ್ಟಿಯನ್ನು ಆಕ್ರಮಿಸಿಕೊಂಡು ಹಮಾಸ್‌ಅನ್ನು ನಿರ್ನಾಮ ಮಾಡಿದರೆ ಇಸ್ರೇಲಿನ ದಾರಿ ಸುಗಮ. ಉಳಿದ ಪಶ್ಚಿಮ ದಂಡೆಯಲ್ಲಿ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆ ಸಾಧ್ಯವಾಗದ ಮಾತು. ಈಗ ಇಸ್ರೇಲ್ ನಡೆಸಿರುವ ದಾಳಿಯ ಮುಖ್ಯ ಉದ್ದೇಶ ಇದೇ ಆಗಿದೆ. ಇದಕ್ಕೆ ಅಮೆರಿಕಾ ಮತ್ತು ಪಶ್ಚಿಮ ಯೂರೋಪಿನ ರಾಷ್ಟ್ರಗಳ ಕುಮ್ಮಕ್ಕೂ ಇದೆ. ಮಾನವ ಹಕ್ಕುಗಳ ಪ್ರತಿಪಾದಕರು ತಾವು ಎಂದು ಕೊಚ್ಚಿಕೊಳ್ಳುವ ಈ ರಾಷ್ಟ್ರಗಳ ನಾಯಕರಿಗೆ ಏಶಿಯಾದ ಜನರ ಹತ್ಯೆಗೆ ಬೆಲೆಯೇ ಇಲ್ಲ. ಕ್ರಮಬದ್ಧವಾಗಿ ವಿಶ್ವಸಂಸ್ಥೆಯ ಆದೇಶಗಳನ್ನು ಉಲ್ಲಂಘಿಸುತ್ತಿರುವ, ಎರಡನೇ ಮಹಾಯುದ್ಧದ ನಂತರ ಅತ್ಯಂತ ಘೋರವಾದ ನರಹತ್ಯೆಯನ್ನು ನಡೆಸುತ್ತಿರುವ ಇಸ್ರೇಲ್‌ಅನ್ನು ತಡೆಯಲು ಅವು ಮುಂದಾಗುತ್ತಿಲ್ಲ. ಇತರ ದೇಶಗಳನ್ನು ದಂಡಿಸುವುದಕ್ಕೆ ಸದಾ ಸಿದ್ಧವಾಗಿರುವ ಅಮೆರಿಕಾ ಇಸ್ರೇಲಿನ ಅತ್ಯಾಚಾರವನ್ನು ಮಾತ್ರ ಸಹಿಸುತ್ತಿದೆ. ನಾಗರಿಕ ಎಂದು ಕರೆದುಕೊಳ್ಳುವ ಪಾಶ್ಚಾತ್ಯ ದೇಶಗಳ ದ್ವಿಮುಖ ಧೋರಣೆ ಎದ್ದುಕಾಣುತ್ತದೆ. ಪ್ರಪಂಚದ ಪ್ರಜಾಪ್ರಭುತ್ವವಾದಿ ಜನತೆ ಎಚ್ಚೆತ್ತು ಇಸ್ರೇಲಿನ ಅಟ್ಟಹಾಸವನ್ನು ಅಂತ್ಯಗೊಳಿಸುವಂತೆ ವಿಶ್ವಸಂಸ್ಥೆಯ ಮೇಲೆ ಒತ್ತಾಯತರಬೇಕಾಗಿದೆ.



# ಮಧ್ಯ ಆಫ್ರಿಕಾದ ರಾಷ್ಟ್ರ ಕಾಂಗೋದ ದುರಂತ

**ಜಾ**ಗತೀಕರಣದ ಭರಾಟೆ, ಅದರ ಬೆನ್ನಲ್ಲೇ ಬಂದಿರುವ ಆರ್ಥಿಕ ಕುಸಿತ, ಭಯೋತ್ಪಾದನೆ, ಗಾಜಾದ ಮೇಲೆ ಇಸ್ರೇಲ್ ದಾಳಿ ಮೊದಲಾದ ಸುದ್ದಿಗಳ ಅವಾಂತರದಲ್ಲಿ ಆಫ್ರಿಕಾದ ವಿದ್ಯಮಾನಗಳು ಸುದ್ದಿಯಾಗುವುದೇ ಇಲ್ಲ. ಸಾಮಾನ್ಯವಾಗಿ ಮಾಧ್ಯಮಗಳ ಗಮನ ಆಫ್ರಿಕಾದ ದೇಶಗಳ ಕಡೆ ಹರಿಯುವುದೇ ಇಲ್ಲ. ಅದು ಇವತ್ತಿಗೂ ಕತ್ತಲೆ ಖಂಡವಾಗಿಯೇ ಉಳಿದಿದೆ. ಕೆಲವು ದಿನಗಳ ಹಿಂದೆ ಪತ್ರಿಕೆಯೊಂದರಲ್ಲಿ ಕಾಂಗೊ, ರುವಾಂಡ ಕುರಿತು ಪ್ರಕಟವಾದ ವರದಿಯ ಪ್ರಕಾರ ಕಾಂಗೋದ ಪೂರ್ವಭಾಗದಲ್ಲಿ ನಡೆಯುತ್ತಿರುವ ಜನಾಂಗಗಳ ಮಧ್ಯೆ ಸಮರದಿಂದಾಗಿ ಅನಾಹುತವೇ ಸಂಭವಿಸುತ್ತಿದೆ. ಮಾನವ ಜೀವನ ದುಸ್ತರವಾಗಿದೆ. ವಿಶ್ವಸಂಸ್ಥೆಯ ತನಿಖಾ ತಂಡವು ಭದ್ರತಾ ಮಂಡಳಿಗೆ ಸಲ್ಲಿಸಿರುವ ವರದಿ ಸರಕಾರಿ ಪ್ರೇರಿತ. ಈ ಸಂಘರ್ಷದಿಂದಾಗಿ ಈವರೆಗೆ ಎರಡು ಲಕ್ಷ ಮಂದಿ ಸಾವಿಗೀಡಾಗಿದ್ದಾರೆ. ೨೫೦,೦೦೦ ಮಂದಿ ನಿರಾಶ್ರಿತರಾಗಿದ್ದಾರೆ. ವಿಶ್ವಸಂಸ್ಥೆಯು ಶಾಂತಿ ಸೇನೆಯನ್ನು ನಿಯೋಜಿಸಿದ್ದರೂ ಸಂಪೂರ್ಣವಾಗಿ ಶಾಂತಿ ನೆಲೆಸಿಲ್ಲ. ವಿಶ್ವಸಂಸ್ಥೆಯ ಅಧಿಕಾರಿಗಳು ಅಧಿಕ ಶಾಂತಿ ಸೇನೆ ನೆಲೆಗೊಳಿಸಲು ಕೋರಿದ್ದರೂ ಅಮೆರಿಕಾ ಹಾಗೂ ಯೂರೋಪಿನ ದೇಶಗಳು ಸೇನೆ ಕಳಿಸಲು ಸಿದ್ಧವಿಲ್ಲದಿರುವುದರಿಂದ ಸಾಧ್ಯವಾಗಿಲ್ಲ. ಹಾಗಾಗಿಯೇ ಘರ್ಷಣೆಗಳು ಮುಂದುವರಿಯುತ್ತಿವೆ.

ಕಾಂಗೋದ ಪೂರ್ವಭಾಗದಲ್ಲಿರುವ ನೈಸರ್ಗಿಕ ಸಂಪತ್ತಿನ ಮೇಲೆ ಸ್ವಾಮ್ಯ ಪಡೆಯುವುದಕ್ಕೆ ಈ ಸಂಘರ್ಷ ನಡೆಯುತ್ತಿದೆ. ಟುಟ್ಸಿ ಜನಾಂಗದ ನಾಯಕ ಜನರಲ್ ಕುಂಡ ನೇತೃತ್ವದಲ್ಲಿರುವ ಪಡೆಗಳು ಕಾಂಗೋ ಸರಕಾರಿ ಸೇನೆಗಳನ್ನು ಎದುರಿಸುತ್ತಿವೆ. ಈ ಸಂಘರ್ಷಕ್ಕೆ ಕೆಲವು ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳೂ ಇತರ ಉದ್ಯಮ ಸಂಸ್ಥೆಗಳೂ ಪೋಷಣೆ ನೀಡುತ್ತಿವೆ. ಕಾಂಗೋದ ಈ ಪ್ರದೇಶ ಅತ್ಯಮೂಲ್ಯವಾದ ಖನಿಜ ಸಂಪತ್ತನ್ನು ಹೊಂದಿರುವುದರಿಂದ ವಿದೇಶಿ ಕಂಪೆನಿಗಳಿಗೆ ವಿಶೇಷ ಆಕರ್ಷಣೆ. ಪ್ರಪಂಚದ ತಾಮ್ರದ ನಿಕ್ಷೇಪದಲ್ಲಿ ಶೇ. ೧೦ರಷ್ಟು ಇಲ್ಲಿ ಲಭ್ಯ. ಇದರ ಜೊತೆಗೆ ಕ್ಯಾಸಿಟರೈ ಮತ್ತು ಕೊಲ್ಟನ್‌ನಂಥ ಅಪರೂಪದ ಲೋಹಗಳೂ ದೊರೆಯುತ್ತವೆ. ಪಶ್ಚಿಮ ರಾಷ್ಟ್ರಗಳ ಜೊತೆಗೆ ಚೀಣಾ ಕೂಡ ಪೈಪೋಟಿಗೆ ಇಳಿದಿದೆ. ಈಚಿನ ವರ್ಷಗಳಲ್ಲಿ ಚೀಣಾ ದೊಡ್ಡ ಪ್ರಮಾಣದಲ್ಲಿ ಆಫ್ರಿಕಾದ ದೇಶಗಳಲ್ಲಿ ಬಂಡವಾಳ ಹೂಡುತ್ತಿದೆ ಎಂಬ ವಿಚಾರ ಹೊಸದೇನಲ್ಲ. ಕಾಂಗೋದ ನೈಸರ್ಗಿಕ ಸಂಪತ್ತೇ ಅಲ್ಲಿನ ಜನತೆಗೆ ಮುಳುವಾಗಿದೆ. ಕಳೆದ ಶತಮಾನದ ಪ್ರಾರಂಭದಲ್ಲಿ ಬೆಲ್ಜಿಯಮ್‌ನ ವಸಾಹತಾಗಿ ತೀವ್ರ ಶೋಷಣೆಗೆ ಈಡಾದ ದೇಶ ಕಾಂಗೋ. ೧೯೬೦ರಲ್ಲಿ ವಿಮೋಚನೆಗೊಂಡು ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಯಿತು. ಕಾಂಗೋದ ಜನತೆಯ ನೇತಾರ ಪ್ಯಾಟ್ರಿಸ್ ಲುಮುಂಬ ಅವರ ನೇತೃತ್ವದಲ್ಲಿ ಸರಕಾರ ಸ್ಥಾಪನೆಗೊಂಡಿತು. ಆದರೆ ಅದು ಹೆಚ್ಚು ಕಾಲ ಉಳಿಯಲಿಲ್ಲ. ಪುರೋಗಾಮಿ ನೀತಿಗಳಿಗೆ ಬದ್ಧವಾಗಿದ್ದ ಲುಮುಂಬ ಸರಕಾರ ಜಾರಿಗೆ ತಂದ ಸುಧಾರಣಾ ಕ್ರಮಗಳು ಉದ್ಯಮಗಳ ರಾಷ್ಟ್ರೀಕರಣ ನೀತಿ ಕಾಂಗೋದ ಆರ್ಥಿಕದ ಮೇಲೆ ನಿಯಂತ್ರಣ ಇರಿಸಿಕೊಂಡಿದ್ದ ಬೆಲ್ಜಿಯಮ್‌ನ ಸಾಮ್ರಾಜ್ಯ ಶಾಹಿಗಳನ್ನು ಆಕ್ರೋಶಕ್ಕೀಡು ಮಾಡಿತು. ಲುಮುಂಬ ಸರಕಾರದ ವಿರುದ್ಧ ಸೇನಾಧಿಕಾರಿ ಮೊಬುಟುವನ್ನು ಎತ್ತಿಕಟ್ಟಿತು. ಈ ಸಂಘರ್ಷದಲ್ಲಿ ಲುಮುಂಬ ದಾರುಣವಾಗಿ ಸಾವಿಗೀಡಾದರು. ಸರ್ವಾಧಿಕಾರಿಯಾಗಿ ಮೊಬುಟು ಸಾಕಷ್ಟು ದೀರ್ಘ ಕಾಲ ಆಡಳಿತ ನಡೆಸಿದ. ಯಾವ ಅಭಿವೃದ್ಧಿ ಕಾರ್ಯವನ್ನೂ ಕೈಗೊಳ್ಳದೆ ದೇಶದ ಸಂಪತ್ತಿನ ಲೂಟಿಯಲ್ಲಿ ಪಾಲುದಾರನಾಗಿದ್ದ. ದೇಶದ ಹೆಸರನ್ನು ಜೈರೆ ಎಂದು ನಾಮಕರಣ ಮಾಡಿದ. ಈಗ ಮತ್ತೆ ದೇಶ ಕಾಂಗೋ ಪ್ರಜಾಪ್ರಭುತ್ವ ಗಣರಾಜ್ಯ ಎಂದು ಪುನರ್‌ನಾಮಕರಣಗೊಂಡಿದೆ. ಹೀಗೆ ಅರ್ಧ ಶತಮಾನದಿಂದ ಕಾಂಗೋದ ಇತಿಹಾಸ ಆಂತರಿಕ ಸಂಘರ್ಷಗಳ ಇತಿಹಾಸವೇ ಆಗಿದೆ. ಈಗಲೂ ಅದು ಮುಂದುವರಿಯುತ್ತಿರುವುದು ದುರಂತವೇ ಸರಿ. ಹೊಸದಾಗಿ ಸ್ವತಂತ್ರಗೊಂಡ ಆಫ್ರಿಕಾದ ಹಲವು ದೇಶಗಳಲ್ಲಿ, ಮುಖ್ಯವಾಗಿ ರುವಾಂಡ ಬುರುಂಡಿ, ಉಗಾಂಡ, ಸೊಮಾಲಿಯ, ಆ್ಯಂಗೊಲ, ಇಥಿಯೋಪಿಯಾ, ಮೊದಲಾದ ದೇಶಗಳಲ್ಲಿ ಕೂಡ ಪರಿಸ್ಥಿತಿ ತೀರಾ ಕೆಟ್ಟದ್ದಾಗಿದೆ. ಜನಜೀವನ ದುಸ್ತರವಾಗಿದ್ದು, ವಿವಿಧ ಬುಡಕಟ್ಟುಗಳ ನಡುವೆ ಘರ್ಷಣೆಗಳು ಆಗಾಗ್ಗೆ ಸಂಭವಿಸುತ್ತಿವೆ. ಈ ಮಧ್ಯೆ ನೈಸರ್ಗಿಕ ಸಂಪತ್ತಿನ ವಶಕ್ಕಾಗಿ ವಿದೇಶಿ ಬಂಡವಾಳಗಾರರ ಪೈಪೋಟಿ ಮುಂದುವರಿದಿದೆ.

ಸೀಯಾರ್ಕೆ
'ಚೌಬೀನ', ೪೮೯, ಬನಶಂಕರಿ ೩ನೇ ಹಂತ
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



ಮೇಘಾಲಯದ ಜಲಪಾತಗಳು

**ಅಭಿವೃದ್ಧಿ ಮತ್ತು ಬಂಡುಕೋರರು** *(ಡಿಸೆಂಬರ್ ಸಂಚಿಕೆಯಿಂದ ಮುಂದುವರೆದುದು)*

**ನಾಗಾಲ್ಯಾಂಡ್**

ನಾಗಾಲ್ಯಾಂಡಿನ ಆಂಗಾಮಿ (ಒಂದು ಉಪ ಬುಡಕಟ್ಟು) ಜಾಪ್ರ ಫಿಜೊ ಎಂಬ ಉಗ್ರವಾದಿ ಸ್ಥಾಪಿಸಿದ ನಾಗಾ ನ್ಯಾಷನಲ್ ಕೌನ್ಸಿಲ್ (ಎನ್‌ಎನ್‌ಸಿ) ಆಂದೋಲನ ದಕ್ಷಿಣ ಏಷಿಯಾದಲ್ಲೇ ಹಳೆಯದು. ಆಗ ಭಾರತಕ್ಕೆ ಸ್ವಾತಂತ್ರ್ಯವೂ ಬಂದಿರಲಿಲ್ಲ. ಎನ್‌ಎನ್‌ಸಿ ಪ್ರತಿನಿಧಿಗಳು ಜುಲೈ ೧೯೪೭ರಲ್ಲಿ ಮಹಾತ್ಮಾ ಗಾಂಧೀಜಿಯವರನ್ನು ಭೇಟಿಯಾಗಿ ನಾಗಾಗಳನ್ನು ಸ್ವತಂತ್ರ ಭಾರತದಲ್ಲಿ ಐಕ್ಯ ಮಾಡದಂತೆ ಆಶ್ವಾಸನೆ ತೆಗೆದುಕೊಂಡರು. ಬ್ರಿಟಿಷರ ಎದುರಿಗೆ ಹೋರಾಡಿ ಭಾರತದೊಂದಿಗೆ ಐಕ್ಯವಾಗುವುದನ್ನು ವಿರೋಧಿಸಿ ೧೪ ಆಗಸ್ಟ್ ೧೯೪೭ರಂದು, ಅಂದರೆ ಭಾರತ ಸ್ವಾತಂತ್ರ್ಯ ಪಡೆಯುವುದಕ್ಕೆ ಒಂದು ದಿನ ಮುಂಚೆ ಎನ್‌ಎನ್‌ಸಿ ಸ್ವತಂತ್ರ ನಾಗಾಲ್ಯಾಂಡನ್ನು ಘೋಷಿಸಿತ್ತು. ಆದರೆ ಭಾರತವು ಎನ್‌ಎನ್‌ಸಿ ಮಾತುಗಳನ್ನು ಧಿಕ್ಕರಿಸಿ ಸಂವಿಧಾನ ಕರಡನ್ನು ರಚಿಸಲು ಆಜ್ಞೆ ನೀಡಿತು. ಆದರೆ ಎನ್‌ಎನ್‌ಸಿ ಸಂವಿಧಾನ ಉಪ ಕಮಿಟಿ ಪ್ರತಿನಿಧಿಸಲು ಯಾರನ್ನೂ ಕಳುಹಿಸಲಿಲ್ಲ. ೧೯೫೧ರಲ್ಲಿ ಜನಾಭಿಪ್ರಾಯ ಸಂಗ್ರಹ ಮಾಡಿದಾಗ ಶೇ. ೯೯ ಜನರು ಸ್ವತಂತ್ರ ನಾಗಾಲ್ಯಾಂಡಿನ ಪರವಾಗಿ ಮತ ಚಲಾಯಿಸಿ ಜನಾಭಿಪ್ರಾಯಕ್ಕೆ ಗೌರವ ನೀಡಬೇಕೆಂದು ಘೋಷಿಸಿದ್ದರು. ಫಿಜೊ ನಾಗಾ ಫೆಡರಲ್ ಆರ್ಮಿಯನ್ನು ಸ್ಥಾಪಿಸಿ ಪ್ಯಾರಲಲ್ ಸರಕಾರವನ್ನು ನಡೆಸಿದ್ದ ಈ ಕಾಲದಲ್ಲಿ ಹಲವು ಉಗ್ರ ಚಟುವಟಿಕೆಗಳು ಹುಟ್ಟಿಕೊಂಡವು. ಕಾರಣ ಕೇಂದ್ರಸರಕಾರ ವಿಧಿ ಇಲ್ಲದೆ ಉಗ್ರವಾದಿಗಳು ಎಂದು ಅವರನ್ನು ಪಟ್ಟಿ ಮಾಡಿ ಮಿಲಿಟರಿ ಪಡೆಗಳು ಹೋರಾಟಕ್ಕೆ ನಿಂತವು. ಇದರಿಂದ ಉಗ್ರರು ಇನ್ನಷ್ಟು ವ್ಯಗ್ರರಾಗಿ ಕೊನೆಗೆ ಫಿಜೊ ಗುಂಪು ಅಂಡರ್‌ಗ್ರೌಂಡ್ ಸೇರಿ ಪ್ಯಾರಲಲ್ ಸರಕಾರ ನಡೆಸಿತ್ತು. ನಾವು ಹೋರಾಡುತ್ತಿರುವುದು ತಮ್ಮ ಹಕ್ಕು ಮತ್ತು ನ್ಯಾಯಕ್ಕಾಗಿ ಎಂದು ಘೋಷಿಸಿದ್ದ ಫಿಜೊ. ಸ್ವಾತಂತ್ರ್ಯ ಪೂರ್ವದಿಂದಲೂ ನಾಗಾಲ್ಯಾಂಡ್ ಬಿಡಿಸಲಾರದ ಕಗ್ಗಂಟಾಗಿ ಕೇಂದ್ರ ಸರ್ಕಾರಕ್ಕೆ ತಲೆನೋವಾಗಿ ಉಳಿದುಕೊಂಡೇ ಬಂದಿದೆ.

೧೯೬೨ ಭಾರತಕ್ಕಷ್ಟೇ ಅಲ್ಲ, ನಾಗಾಲ್ಯಾಂಡಿಗೂ ಕತ್ತಲಿನ ವರ್ಷ. ಚೀನಾ ಈಶಾನ್ಯಭಾರತದ ಮೇಲೆ ಧಾಳಿ ಮಾಡಿತ್ತು. ಆರು ಚೀನಾ ಬ್ರಿಗೆಡಿಯರ್ಸ್ ಕೆಮಂಗ್ ಫ್ರಾಂಟೆಯರ್ ವಿಭಾಗದಲ್ಲಿ ಭಾರತದ ಸಿಲಾಪಾಸ್‌ನ ನೂರಂಗ್‌ವರೆಗೂ ೧೬ ಕಿ.ಮೀ. ಒಳಕ್ಕೆ ನುಗ್ಗಿಬಂದಿದ್ದರು. ಭಾರತದ ಗಡಿ ಪಡೆಗಳು

# ಸಪ್ತ ಸಹೋದರಿಯರ ಮುದ್ದು ಮಕ್ಕಳು ಈ ಬಂಡುಕೋರರು

ಎಂ. ವೆಂಕಟಸ್ವಾಮಿ

ಲಾಪಾಸ್ ಹತ್ತಿರ ಒಟ್ಟುಗೂಡಿ ಚೀನಾ ಪಡೆಗಳನ್ನು ತಡೆಗಟ್ಟಲು ಪ್ರಯತ್ನಿಸಿದರೂ ಏನೂ ನಡೆಯಲಿಲ್ಲ. ನವೆಂಬರ್ ೧೮ರಂದು ಚೀನಾ ತುಕಡಿಗಳು ಅಸ್ಸಾಂನ ತೇಜ್‌ಪುರದವರೆಗೂ ಬಂದು, ಮೂರು ದಿನಗಳ ನಂತರ ತಾವೇ ಹಿಂದಕ್ಕೆ ಹೋಗಿಬಿಟ್ಟವು. ನಾಗಾಲ್ಯಾಂಡಿನಲ್ಲಿ ಬೀಡುಬಿಟ್ಟಿದ್ದ ಭಾರತದ ಮಿಲಿಟರಿ ಪಡೆಗಳು ಅರುಣಾಚಲ ಪ್ರದೇಶ, ಅಸ್ಸಾಂ, ಸಿಕ್ಕಿಂನ ಗಡಿಭಾಗಗಳಿಗೆ ತಲುಪಿ ಕಾವಲುನಿಂತವು. ಪಂಡಿತ್ ಜವಾಹರಲಾಲ್ ನೆಹರು ಜೊತೆಗೆ ಸಂಧಾನ ನಡೆಸಿದ ನಾಗಾ ನಾಯಕರು ನಾಗಾ ರಾಜ್ಯ ಸ್ಥಾಪನೆಗೆ ಒಪ್ಪಿಕೊಂಡರು, ಆದರೆ ಸಮಸ್ಯೆ ಅಲ್ಲಿಗೆ ನಿಲ್ಲಲಿಲ್ಲ. ಎನ್‌ಎನ್‌ಸಿ ಇದನ್ನು ಖಂಡಿಸಿತು, ನಿಜ. ಆದರೆ ಆ ಸಂಘಟನೆಯೇ ಇಬ್ಭಾಗವಾಗಿ ಒಡೆದು ಹೋಗಿತ್ತು. ಕೆಲವು ಉಗ್ರ ಗುಂಪುಗಳ ಜೊತೆಗೆ ಕೇಂದ್ರ ಸರಕಾರ ೧೯೭೫ರಲ್ಲಿ ಶಿಲ್ಲಾಂಗ್‌ನಲ್ಲಿ ಒಂದು ಒಪ್ಪಂದ ಮಾಡಿಕೊಂಡಿತು. ಇದನ್ನು ಮತ್ತೆ ಥಯುಂಗ್‌ಲೆಂಗ್ ಮುಯ್‌ವ ಮತ್ತು ಎಸ್‌ಎಸ್ ಕಪ್ಲಾಂಗ್ ಬಂಡುಕೋರರ ಗುಂಪು ನಿರಾಕರಿಸಿ ತಮ್ಮದೆ ನ್ಯಾಷನಲ್ ಸೋಷಲಿಸ್ಟ್ ಕೌನ್ಸಿಲ್ ಆಫ್ ನಗಲಿಮ್ (ಎನ್‌ಎನ್‌ಸಿಎನ್) ಬಂಡುಕೋರ ಗುಂಪನ್ನು ಸ್ಥಾಪಿಸಿಕೊಂಡರು. ಮೂಲ ಎನ್‌ಎನ್‌ಸಿ ಮತ್ತು ಎನ್‌ಎನ್‌ಸಿಎನ್ ಗುಂಪುಗಳ ಹಗೆತನ ಈಗಲೂ ಮುಂದುವರಿಯುತ್ತಿದೆ. ಆದರೆ ಎರಡು ಗುಂಪುಗಳೂ ಸ್ವತಂತ್ರ ನಾಗಾಲ್ಯಾಂಡಿಗಾಗಿ ಹೋರಾಡುತ್ತಲೇ ಇರುತ್ತೇವೆ ಎಂದು ಒಟ್ಟಾಗಿ ಹೇಳಿಕೊಳ್ಳುತ್ತವೆ.

ಬರ್ಮಾ ಮತ್ತು ಬಾಂಗ್ಲಾ ದೇಶಗಳ ಗಡಿಗಳಲ್ಲಿ ಉಗ್ರರ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿದ್ದು, ಆಯುಧಗಳ ಕಳ್ಳಸಾಗಣಿಕೆ, ಹಣ ಸುಲಿಗೆ, ಕೊಲ್ಲುವುದು, ಅಪಹರಿಸುವುದು ನಾಗಾಲ್ಯಾಂಡಿನಲ್ಲೇ ಅಲ್ಲದೆ ನಾಗಾಗಳಿರುವ ಮಣಿಪುರ ಮತ್ತು ಅಸ್ಸಾಂ ಗಡಿಗಳಲ್ಲಿ ಇಂದಿಗೂ ಮುಂದುವರಿಯುತ್ತಿದೆ. ನಾಗಾಲ್ಯಾಂಡಿನಲ್ಲಿ ಹುಟ್ಟಿಕೊಂಡ ಎನ್‌ಎನ್‌ಸಿಎನ್(ಮ) ಮತ್ತು ಎನ್‌ಎನ್‌ಸಿಎನ್(ಕೆ) ಎಂಬ ಉಗ್ರ ಗುಂಪುಗಳು ಈಶಾನ್ಯವಲಯದ ಎಲ್ಲ ಉಗ್ರ ಗುಂಪುಗಳಿಗೆ ಪ್ರೇರಣೆ ಮತ್ತು ತರಬೇತಿ ನೀಡುವ (ಹಣ ಪಡೆದು) ಸಂಸ್ಥೆಗಳಾಗಿವೆ. ಎನ್‌ಎನ್‌ಸಿಎನ್ (ಎಮ್),



ಶಿಲ್ಲಾಂಗ್ ಹತ್ತಿರ ಇರುವ ಬರಾಪಾಣಿ ಸರೋವರ

ಅಸ್ಸಾಂನ ಯುಎಲ್‌ಎಫ್‌ಎ ಮತ್ತು ಬಿಡಿಎಸ್‌ಎಫ್ (ಬೋಡೋ) ಒಟ್ಟಾಗಿ ಹೋರಾಟ ನಡೆಸುವುದಾಗಿ ಒಪ್ಪಂದ ಮಾಡಿಕೊಂಡಿವೆ. ಎನ್‌ಎನ್‌ಸಿಎನ್ ಮೇಘಾಲಯದ ಎಚ್‌ಎಲ್‌ಎನ್‌ಸಿ ಗುಂಪಿಗೆ ಸಹಾಯಮಾಡುತ್ತಿರುವುದಾಗಿ ಹೇಳಿಕೊಳ್ಳುತ್ತದೆ. ಈ ಗುಂಪು ಮೇಘಾಲಯದ ಗಾರೋ ಪರ್ವತ ಜಿಲ್ಲೆಗಳನ್ನು ಪಶ್ಚಿಮ ಬಂಗಾಳ ಮತ್ತು ಅಸ್ಸಾಂ ರಾಜ್ಯಗಳಿಂದ ಸ್ವಾತಂತ್ರ್ಯ ಪಡೆಯಲು ಹೋರಾಡುವುದಾಗಿ ಹೇಳುತ್ತದೆ. ೬೦ ವರ್ಷಗಳಿಂದಲೂ ಕೇಂದ್ರಸರಕಾರ ಈ ಗುಂಪುಗಳ ಜೊತೆಗೆ ನಡೆಸುತ್ತಿರುವ ಮಾತುಕತೆಗಳು ಯಾವುದೇ ಫಲವನ್ನು ನೀಡಿಲ್ಲ. ನಾಗಾಲ್ಯಾಂಡ್‌ನಲ್ಲಿ ೨೬ ಬುಡಕಟ್ಟು ಭಾಷೆಗಳಿದ್ದು ಒಬ್ಬರ ಭಾಷೆ ಇನ್ನೊಬ್ಬರಿಗೆ ಅರ್ಥವಾಗುವುದಿಲ್ಲ. ೨-೩ ಮುಖ್ಯ ಉಪಬುಡಕಟ್ಟು ಭಾಷೆಗಳಿಗೆ ಮಾತ್ರ ರೋಮನ್ ಸ್ಕ್ರಿಪ್ಟ್ ಅಳವಡಿಸಲಾಗಿದ್ದು ಎಲ್ಲರೂ ಇಂಗ್ಲಿಷ್ ಅಥವಾ ನಾಗಾಮೀಸ್ (ಅಸ್ಸಾಮಿಯಿಂದ ಸಿಡಿದು ಬಂದ) ಭಾಷೆಯನ್ನು ಮಾತನಾಡುತ್ತಾರೆ.

**ಅಸ್ಸಾಂ**

ನಾಗಾಲ್ಯಾಂಡ್‌ನಿಂದ ಪ್ರಾರಂಭವಾದ ಬಂಡುಕೋರರ ಚಟುವಟಿಕೆಗಳು ಮಣಿಪುರ, ಮಿಝೋರಾಂ, ತ್ರಿಪುರಾ, ಅಸ್ಸಾಂ ರಾಜ್ಯಗಳಿಗೆ ಆವರಿಸಿಕೊಂಡಿತು. ಮಿಝೋರಾಂನಲ್ಲಿ ಮಿಲಿಟರಿ ಪಡೆಗಳು ಜನರ ಒಪ್ಪಿಗೆ ಪಡೆದು ಉಗ್ರರ ವಿರುದ್ಧ ನಡೆಸಿದ ಹೋರಾಟದಲ್ಲಿ ಯಶಸ್ವಿಯಾದರು. ಆದರೆ ಪಕ್ಕದಲ್ಲಿರುವ ತ್ರಿಪುರಾ ಮತ್ತು ಮಣಿಪುರದಲ್ಲಿ ಅದು ನಡೆಯಲಿಲ್ಲ. ಪ್ರಸ್ತುತ ಅಸ್ಸಾಂ ರಾಜ್ಯ ದೇಶದಲ್ಲಿಯೇ ಅತಿ ಅಪಾಯಕಾರಿ ಸ್ಥಳವಾಗಿದೆ (ಜಮ್ಮು- ಕಾಶ್ಮೀರ ಬಿಟ್ಟರೆ). ಯುನೈಟೆಡ್ ಲಿಬರೇಷನ್ ಫ್ರಂಟ್ ಆಫ್ ಅಸ್ಸಾಂ (ಯುಎಲ್‌ಎಫ್‌ಎ) ಉಗ್ರರು ತಮ್ಮದೂ ಪ್ರತ್ಯೇಕ ದೇಶಕ್ಕಾಗಿ ಹೋರಾಡುತ್ತಿದ್ದು, ಅಸ್ಸಾಂನಲ್ಲಿ ಹಿಂದಿ ಮಾತನಾಡುವ ಎಲ್ಲರನ್ನೂ ಹೊರಹಾಕಲು ಚಳುವಳಿ ಹೂಡಿದ್ದಾರೆ. ೧೯೭೦ರ ದಶಕದಲ್ಲಿ ಪರೇಶ ಬರೂವ ಮತ್ತು ಅರವಿಂದೂ ರಾಜಕೊವ್ವ ಮತ್ತು ಇತರರ (ಯುಎಲ್‌ಎಫ್‌ಎ) ಗುಂಪೊಂದು ಸ್ಥಾಪನೆಯಾಯಿತು. ದೇಶದಲ್ಲಿಯೇ ಹೆಚ್ಚು ನೈಸರ್ಗಿಕ ಅನಿಲ ಮತ್ತು ಇಂಧನ ಭಾವಿಗಳನ್ನು ಹೊಂದಿರುವ ಅಸ್ಸಾಂ ಚಹಾ ತೋಟಗಳಿಗೂ ಹೆಸರಾಗಿದೆ. ಈ ರಾಜ್ಯ ಒಂದರಲ್ಲಿಯೇ ಇದುವರೆಗೂ ಇವರ ಹೋರಾಟದಲ್ಲಿ ೧೦,೦೦೦ ಜನರು ಪ್ರಾಣ ಕಳೆದುಕೊಂಡಿದ್ದಾರೆ. ಯುಎಲ್‌ಎಫ್‌ಎ ಜೊತೆಗೆ ಇತರ ೩೪ ಉಗ್ರ ಗುಂಪುಗಳು ಅಸ್ಸಾಂನಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇವುಗಳಲ್ಲಿ ಎಮ್‌ಯುಎಲ್‌ಟಿಯು, ಎನ್‌ಡಿಎಫ್‌ಬಿ, ಡಿಎಚ್‌ಡಿ ಮುಖ್ಯವಾದುವು.

೨.೫ ಕೋಟಿ ಜನಸಂಖ್ಯೆಯ ಅಸ್ಸಾಂ ಜನರನ್ನು ಮುಖ್ಯವಾಗಿ ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು : (೧) ಅಸ್ಸಾಂ ಸಮಾಜ, ಈ ವಲಯದಲ್ಲಿ ಚಾರಿತ್ರಿಕವಾಗಿ ಮಿಶ್ರಣಗೊಂಡ ಹಲವು ಜನಾಂಗಗಳಿವೆ. (೨) ಮಿಶ್ರಣಗೊಂಡ ಹಲವು ಜನಾಂಗಗಳಿಂದ ಹೊರಗೆ ನಿಂತ ಮೂಲ ಬುಡಕಟ್ಟು ಜನಾಂಗಗಳು. (೩) ಮೂಲವಾಗಿ ಮಿಶ್ರಣಗೊಂಡ ಅಸ್ಸಾಂ ಜನಾಂಗಗಳು. (೪) ವಿದೇಶಿಯರು, ದೇಶದ ಇತರ ರಾಜ್ಯಗಳಿಂದ ವಲಸೆಬಂದು ನೆಲೆಸಿರುವವರು. ಅಸ್ಸಾಂನಲ್ಲಿ ಮೂಲವಾಗಿ ನೆಲೆನಿಂತವರೆಂದರೆ ಆಸ್ಟ್ರಿಕ್ (ಕರ್ಬಿಸ್), ಮಂಗೋಲರು (ಕಿರಾತರು), ಕಾಕಾಸಿಯನ್ (ಆರ್ಯನ್), ನೇಪಾಳಿಯರು ಮತ್ತು ದ್ರಬಿಸ್ (ಕೈಬರ್ತಾಸ್) ಮತ್ತು ಬನಿಯಾಸ್. ಇದೆಲ್ಲದರ ಕಾರಣ ಅಸ್ಸಾಂ ಹಲವು ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಾಜಗಳಿಂದ ಮಿಶ್ರಣಗೊಂಡಿದೆ. ಒಟ್ಟಿನಲ್ಲಿ ಅಸ್ಸಾಂ ಈಶಾನ್ಯ ವಲಯದ ಒಂದು ಮಿನಿ ಸಂಕೀರ್ಣ ಭಾರತವಾಗಿದೆ. ಅಸ್ಸಾಂ



ಬಿಡಾ ನಿವಾಸಿಗಳು

ದೊಡ್ಡ ರಾಜ್ಯ ಮತ್ತು ಈಶಾನ್ಯದ ಹೆಬ್ಬಾಗಿಲಾಗಿದೆ. ಇದರ ಸಮಸ್ಯೆಗಳಿಗೆ ಪರಿಹಾರ ದೊರಕದೆ ಈಶಾನ್ಯದ ಯಾವುದೇ ರಾಜ್ಯಗಳ ತೊಂದರೆಗಳನ್ನು ನಿವಾರಿಸುವುದು ಸುಲಭದ ಮಾತಲ್ಲ. ಈಶಾನ್ಯದ ಎಲ್ಲ ಉಗ್ರಗಾಮಿಗಳು ಅಸ್ಸಾಂ ಉಗ್ರರ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದಾರೆ.

ಸರಕಾರ ಮತ್ತು ಮಿಲಿಟರಿ ಪಡೆಗಳ ಹಿಡಿತಕ್ಕೆ ದೊರಕದೆ ಸಮಸ್ಯೆಗಳ ಸರಮಾಲೆಯನ್ನೇ ಧರಿಸಿರುವ ಅಸ್ಸಾಂನ ತೊಂದರೆಗಳನ್ನು ಮುಖ್ಯವಾಗಿ ಈ ರೀತಿ ಪಟ್ಟಿ ಮಾಡಬಹುದು: ದೇಶದಲ್ಲಿಯೆ ಹೆಚ್ಚು ನೈಸರ್ಗಿಕ ಮತ್ತು ಅನಿಲಬಾವಿಗಳು ಮತ್ತು ಚಹ ತೋಟಗಳನ್ನು ಹೊಂದಿರುವ ಅಸ್ಸಾಂ ದೇಶವು ಬಡ ರಾಜ್ಯಗಳಲ್ಲಿ ಒಂದು. ಇವೆಲ್ಲವನ್ನು ಕೇಂದ್ರ ಸರಕಾರ ದೋಚುತ್ತಿದ್ದು ಬದಲಿಗೆ ಏನೇನೂ ಮಾಡುತ್ತಿಲ್ಲ ಎನ್ನುವುದು ಅಸ್ಸಾಂ ಜನರ ದೂರು. ರಾಜ್ಯದಲ್ಲಿ ೧೫ ಸಮಾಜಗಳಿದ್ದು ಎಲ್ಲವೂ ಜನಾಂಗೀಯ ಕಲಹಗಳಿಂದ ನರಳುತ್ತಿವೆ. ಜಮ್ಮು-ಕಾಶ್ಮೀರ ಬಿಟ್ಟರೆ ಹೆಚ್ಚು ಮುಸ್ಲಿಂ ಜನಸಂಖ್ಯೆ ಇರುವುದು ಅಸ್ಸಾಂನಲ್ಲೆ. ರಾಜ್ಯದ ಇತರ ಭಾಗಗಳಲ್ಲಿರುವ ಬುಡಕಟ್ಟು ಜನರು ನಗರಗಳಲ್ಲಿ ಇರುವವರು, ಹೊರಗಿನವರು ಎಂದುಕೊಂಡರೆ, ಬಾಂಗ್ಲಾ ದೇಶ ಮತ್ತು ದೇಶದ ಇತರ ಭಾಗಗಳಿಂದ ಬಂದವರನ್ನು ವಲಸಿಗರು ಮತ್ತು ಶತ್ರುಗಳು ಎಂದು ಭಾವಿಸುತ್ತಾರೆ. ಅಸ್ಸಾಂ ಇರುವುದು ಅಸ್ಸಾಮಿಗಳಿಗೆ ಮಾತ್ರ ಎನ್ನುವುದು ಅವರ ವಾದ. ಮೂಲ ಜನಾಂಗಗಳಿಗೆ ದೇಶದ ಒಳಗೆಯೇ ಸರಕಾರ ಒಂದೊಂದು ರಾಜ್ಯಕ್ಕೆ ಒಂದೊಂದು ಕಾನೂನು ನೀಡುತ್ತಿರುವುದು ಇದಕ್ಕೆಲ್ಲ ಕಾರಣವಾಗಿದೆ. ಸಾಂಸ್ಕೃತಿಕ ಒಗ್ಗಟ್ಟು ಕಾಣದೆ ಇರುವುದು, ಸಾಮಾಜಿಕ ಅಸಮಾನತೆ, ಅಭಿವೃದ್ಧಿ ಯೋಜನೆಗಳು ಈಡೇರದೆ ಹೋಗುವುದು, ಆರ್ಥಿಕ ಅಸಮಾನತೆ, ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ನಿರಂತರ ವಲಸೆ ಇವುಗಳಿಂದಾಗಿ ಅಸ್ಸಾಂ ತತ್ತರಿಸಿಹೋಗಿದೆ.

ವಿಶೇಷ ತಜ್ಞರ ಅಭಿಪ್ರಾಯದಲ್ಲಿ ಈಶಾನ್ಯ ಭಾರತ, ಬರ್ಮಾ, ಭೂತಾನ್, ಬಾಂಗ್ಲಾದೇಶ ಘನಘೋರ ಕೃತ್ಯಗಳನ್ನು ಎಸಗುವ ತಿರುಗಣಿಯಾಗಿದೆ. ಭೂತಾನ್ ಒಳಗೆ ಉಲ್ಫಾ ಹಲವಾರು ಉಗ್ರರ ಗುಂಪುಗಳನ್ನು ಸ್ಥಾಪಿಸಿ ನಿರುದ್ಯೋಗಿಗಳನ್ನು ನೇಮಿಸಿಕೊಂಡು ತರಬೇತಿ ನೀಡುತ್ತಿತ್ತು. ೨೦೦೩ರಲ್ಲಿ ಭಾರತ ಪಡೆಗಳ ಸಹಾಯದಿಂದ ಭೂತಾನ್‌ನಿಂದ ಈ ಉಗ್ರರನ್ನೆಲ್ಲ ಓಡಿಸಿದ ಮೇಲೆ ಅಸ್ಸಾಂನಲ್ಲಿ ಹಿಂಸೆ



ತೀಸ್ತಾ ನದಿ ಕಣಿವೆ

ಹೆಚ್ಚಾಯಿತು. ಅಸ್ಸಾಂನಲ್ಲಿರುವ ಬಾಂಗ್ಲಾದೇಶೀಯರ ಮೇಲೆ ಹಿಂಸೆ ಮಾಡದೆ ಇರಲು ಉಲ್ಫಾ ಉಗ್ರ ತಾಣಗಳಿಗೆ ಬಾಂಗ್ಲಾದೇಶದ ಗಡಿಗಳಲ್ಲಿ ಸಹಾಯ ದೊರಕುತ್ತಿದೆ ಎನ್ನುವ ಸೂಚನೆಗಳು ಇವೆ. ಭಾರತ ಸರಕಾರ ಯಾವುದೇ ಉಗ್ರ ಗುಂಪುಗಳ ಜೊತೆಗೆ ಸಂಧಾನ ನಡೆಸಲು ಸಿದ್ಧವಾಗಿದೆ. ಆದರೆ ಅವು ಹಿಂಸೆಯನ್ನು ತೊರೆಯಬೇಕು ಮತ್ತು ಷರತ್ತುಗಳು ಸಂವಿಧಾನದ ಚೌಕಟ್ಟಿನ ಒಳಗಿರಬೇಕು ಎನ್ನುತ್ತದೆ. ಫೆಬ್ರವರಿ ೨೦೦೭ರಲ್ಲಿ ಉಲ್ಫಾ ಕಮ್ಯಾಂಡರ್ - ಇನ್ - ಚೀಫ್ ಹೇಳುವಂತೆ ಭಾರತ ಸರಕಾರದ ಜೊತೆಗೆ ಸಂಧಾನ ನಡೆಸಲು ತಾವು ಸಿದ್ಧ. ಆದರೆ ಅಸ್ಸಾಂ ಸಾರ್ವಭೌಮತ್ವದ ಬಗ್ಗೆ ಪ್ರಸ್ತುತ ಮಾತುಕತೆ ನಡೆಸಬಾರದು ಎಂದು ಕರಾರಾಗಿತ್ತು. ಚಹಾ ತೋಟಗಳು ಮತ್ತು ಇಂಧನ ಬಾವಿಗಳಿರುವ ಉತ್ತರ ಅಸ್ಸಾಂನ ಕಾಡುಮೇಡುಗಳ ಪ್ರದೇಶದಲ್ಲಿ ಉಲ್ಫಾಗಳು ಯಾವಾಗಲೂ 'ಹಿಟ್ ಅಂಡ್ ರನ್' ಆಟವಾಡುತ್ತ ಸಿಕ್ಕಿದ ಕಡೆ ಬಾಂಬುಗಳನ್ನು ಸ್ಫೋಟಿಸಿ ಜನರನ್ನು ಸಾಯಿಸುತ್ತಿರುತ್ತಾರೆ. ತೀವ್ರ ತೊಂದರೆಯಾದಾಗ ಕದನವಿರಾಮ ಘೋಷಿಸಿ ಸಾಕಷ್ಟು ಹಣ ದೋಚಿಕೊಂಡು ಒಳಗಿರುವವರು ಹೊರಕ್ಕೆ, ಹೊರಗಿರುವವರು ಒಳಕ್ಕೆ ಬಂದು ನೆಲೆಸುತ್ತಾರೆ. ಸರಕಾರ ಸ್ವಲ್ಪ ದಿನಗಳು ಕಣ್ಣು ಮುಚ್ಚಿಕೊಳ್ಳುತ್ತದೆ. ರಾಜಕಾರಣಿಗಳು, ವ್ಯಾಪಾರಿಗಳು, ಅಧಿಕಾರಿಗಳು ಮತ್ತು ಚಹಾ ತೋಟಗಳ ಮಾಲಿಕರಿಂದ ಉಲ್ಫಾ ಗುಂಪಿನ ಏಜಂಟರು ಸಾಕಷ್ಟು ಹಣ ಸಂಗ್ರಹಿಸುತ್ತಾರೆ. ಮತ್ತೆ ಅದೇ ವರಸೆ, ಉಲ್ಫಾ, ಎನ್‌ಡಿಎಫ್‌ಬಿ, ಕೆಎಲ್‌ಓ, ಎನ್‌ಎಸ್‌ಸಿಎನ್ ಮತ್ತಿತರ ಗುಂಪುಗಳು ದೇಶದ ಎಲ್ಲಾ ಅಪಾಯಕಾರಿ ಉಗ್ರ ಗುಂಪುಗಳ ಜೊತೆಗೆ, ಅದರಲ್ಲೂ ಮುಖ್ಯವಾಗಿ ಮಧ್ಯಪ್ರದೇಶದ ನಕ್ಸಲ್‌ರೊಂದಿಗೆ, ಸಂಪರ್ಕ ಹೊಂದಿವೆ. ಪರಿಸ್ಥಿತಿ ಈಗ ಯಾವ ಮಟ್ಟ ತಲುಪಿದೆ ಎಂದರೆ ಉಲ್ಫಾ ಸಮಸ್ಯೆಯನ್ನು ಹೇಗಾದರೂ ಮಾಡಿ ಆದಷ್ಟು ಬೇಗನೆ ಪರಿಹರಿಸದಿದ್ದರೆ ಮುಂದಿನ ದಿನಗಳಲ್ಲಿ ಅದು ತೀರಾ ಉಲ್ಬಣಿಸಿ ಇಡೀ ಈಶಾನ್ಯದಲ್ಲಿ ಶಾಂತಿ ಸ್ಥಾಪಿಸಲು ಸಾಧ್ಯವೇ ಇಲ್ಲದೆ ಹೋಗುವ ದಿನಗಳು ಶೀಘ್ರದಲ್ಲೇ ಬರಲಿವೆ. ಆಗ ಏನೂ ಮಾಡಲು ಸಾಧ್ಯವಿಲ್ಲದೆ, ದೇಶದಿಂದ ಈಶಾನ್ಯವೆಂಬ ಈ ಅಶಾಂತಿಯ ಕೊಂಡಿ ಕಳಚಿಕೊಂಡರೂ ಆಶ್ಚರ್ಯ ಪಡಬೇಕಾಗಿಲ್ಲ. ಅಸ್ಸಾಂ ಭಾಷೆ ಬೆಂಗಾಲಿ ಮತ್ತು ಹಿಂದಿ ಭಾಷೆಗಳ ಸಮ್ಮಿಶ್ರಣವಾಗಿದ್ದು ಸ್ಕ್ರಿಪ್ಟ್ ಕೂಡ ಅದೇ ಭಾಷೆಗಳ ಮಿಶ್ರಣವಾಗಿದೆ.

**ಮಣಿಪುರ**

ಚಾರಿತ್ರಿಕ ಹಿರಿಮೆಯ ಮಣಿಪುರ ರಾಜ್ಯ ೧೮೯೧ರಲ್ಲಿ ಬ್ರಿಟಿಷರ ವಿರುದ್ಧ ಯುದ್ಧದಲ್ಲಿ ಸೋತ ನಂತರ ಬ್ರಿಟಿಷ್ ಸರಕಾರದ ಭಾಗವಾಗಿ ರಾಜ್ಯಭಾರ ನಡೆಸಿತ್ತು. ೨ನೇ ಜಾಗತಿಕ ಮಹಾಯುದ್ಧದಲ್ಲಿ ಮಣಿಪುರ ಬ್ರಿಟಿಷ್ ಪಡೆಗಳೊಂದಿಗೆ ಜಪಾನ್ ಮತ್ತು ಇತರ ದೇಶಗಳ ವಿರುದ್ಧ ಹಲವು ಮಹತ್ವದ ಹೋರಾಟಗಳಲ್ಲಿ ಪಾಲ್ಗೊಂಡಿತ್ತು. ಜಪಾನ್ ಪಡೆಗಳು ಪೂರ್ವ ಏಷಿಯಾದ ದೇಶಗಳನ್ನೆಲ್ಲ ದಾಟಿ ಮಣಿಪುರ ತಲುಪಿದ್ದವು. ಆಗ ಇಂಡಿಯನ್ ನ್ಯಾಷನಲ್ ಆರ್ಮಿ ಜಪಾನ್ ಪಡೆಗಳ ಜೊತೆಗೆ ಬ್ರಿಟಿಷರ ವಿರುದ್ಧ ಕೈಜೋಡಿಸಿತ್ತು. ಆದರೆ ಉಸ್ತುವಾರಿಯನ್ನು ನೇತಾಜಿ ಸುಭಾಷ್‌ಚಂದ್ರಬೋಸ್ ವಹಿಸಿದ್ದು, ಐಎನ್‌ಎ ಭಾರತದ ನೆಲ ಮೆಟ್ಟುವವರೆಗೂ ಜಪಾನ್ ಪಡೆಗಳೊಂದಿಗೆ ಇರುತ್ತದೆ. ಆನಂತರ ಅದರ ಯಾವ ಷರತ್ತುಗಳೂ ನಮ್ಮ



ನೇಯುವ ಮಹಿಳೆ



ಮಹಿಳೆಯರ ಸಂತೆ

ಮೇಲೆ ಇರುವುದಿಲ್ಲ ಎಂದಿದ್ದರು. ಮಣಿಪುರದ ಮೊಯಿರಾಂಗ್‌ನಲ್ಲಿ ಸುಭಾಷ್‌ಚಂದ್ರ ಬೋಸ್ ನೆಟ್ಟ ತ್ರಿರಂಗ್ ಬಾವುಟವೇ ರಾಷ್ಟ್ರೀಯ ಬಾವುಟ ಆಯಿತು.

೧೯೪೭ರಲ್ಲಿ ಬ್ರಿಟಿಷ್ ಸರಕಾರ ಭಾರತ ದೇಶಕ್ಕೆ ಸ್ವಾತಂತ್ರ್ಯ ನೀಡುವ ಕಾರ್ಯದಲ್ಲಿ ತೊಡಗಿದ್ದಾಗ ಮಣಿಪುರ ಸಂಸ್ಥಾನ ಸ್ವಾತಂತ್ರ್ಯ ಪಡೆಯಿತು. ಮಣಿಪುರ ಮಹಾರಾಜ ಬುದ್ಧಚಂದ್ರ ದೇವರ್ಷ ಮಣಿಪುರ ಶಾಸನವನ್ನು ಕಟ್ಟಳೆ ಮಾಡಿದರು. ೧೯೪೯ರಲ್ಲಿ ಬುದ್ಧಚಂದ್ರನನ್ನು ಶಿಲ್ಲಾಂಗ್‌ಗೆ ಆಹ್ವಾನಿಸಿ ಬಲವಂತದಿಂದ ಆತನ ಕೈಯಲ್ಲಿ ಮಣಿಪುರ ಭಾರತ ದೇಶದ ಒಂದು ಭಾಗ ಎಂದು ಬರೆಸಿಕೊಳ್ಳಲಾಯಿತು. ಇಲ್ಲಿಂದ ಮಣಿಪುರ ಅನೇಕ ತೊಂದರೆಗಳಿಗೆ ಸಿಲುಕಿಕೊಂಡಿತು. ಕೇಂದ್ರ ಸರಕಾರ ನೀಡುವ ಹಣ ನೆಲಮಟ್ಟಕ್ಕೆ ತಲುಪಲೇ ಇಲ್ಲ. ಗಾಂಜಾ-ಅಫೀಮು ವ್ಯಾಪಾರದ ಬಂಡುಕೋರರು ಮತ್ತು ರಾಜಕಾರಣಿಗಳ ಸಂಬಂಧ, ನಾಯಕರ ಕೊರತೆ, ಮೂಲ ಜನಾಂಗಗಳ ಭಿನ್ನಮತ, ಉಗ್ರವಾದಿ ಗುಂಪುಗಳ ವಿಧವಿಧ ಬೇಡಿಕೆಗಳು ಮತ್ತು ಹೋರಾಟಗಳು, ಕಪ್ಪು ಹಣದ ಹಸ್ತಾಂತರ, ಆಯುಧಗಳ ಸರಬರಾಜು, ಬಾಂಗ್ಲಾದೇಶಿಗರ ವಲಸೆ ಇತ್ಯಾದಿಗಳಿಂದ ಮಣಿಪುರ ತತ್ತರಿಸಿಹೋಯಿತು.

ಮಣಿಪುರಿ ಮೂಲ ಜನಾಂಗಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಅಲ್ಲಿ ಮಣಿಪುರದ ಲೋಕ್‌ಟಕ್ ಕಣಿವೆಯಲ್ಲಿರುವ ಮೆಹಿಟೀಸ್ ಜನಾಂಗ ಮತ್ತು ಪರ್ವತಗಳಲ್ಲಿ ಚದುರಿಹೋಗಿರುವ ೨೯ ಉಪ ಬುಡಕಟ್ಟು ಜನಾಂಗಗಳಿವೆ. ಇವರನ್ನು ಮತ್ತೆ ಎರಡು ಮೂಲ ಜನಾಂಗಗಳಾಗಿ ವಿಭಾಗಿಸಬಹುದು. ನಾಗಾ ಮತ್ತು ಕುಕಿ-ಚಿನ್ಸ್ ಮೆಹಟೀಸ್‌ಗಳಲ್ಲಿ ಎರಡು ಗುಂಪುಗಳಿವೆ. ಬಾಮಾನ್ಸ್ (ಬೆಂಗಾಲಿ ಬ್ರಾಹ್ಮಣರು) ಮತ್ತು ಮೆಹಿಟೀ ಪಂಗನ್ಸ್ (ಬಾಂಗ್ಲಾ ದೇಶದಿಂದ ವಲಸೆ ಬಂದಿರುವವರು) ಇಬ್ಬರೂ ಮೆಹಿಟೀ ಭಾಷೆ ಮಾತನಾಡುತ್ತಾರೆ. ಇವರ ಜೊತೆಗೆ ಕಣಿವೆಯಲ್ಲಿ ನೇಪಾಳಿ, ಬಂಗಾಲಿ ಮತ್ತಿತರ ಜನಾಂಗದವರಿದ್ದಾರೆ. ಪರ್ವತಗಳಲ್ಲಿ ಜೀವಿಸುತ್ತಿದ್ದ ಅನೇಕ ಬುಡಕಟ್ಟು ಜನರು ಇಳಿದು ಬಂದು ಈಗ ಕಣಿವೆ ಸೇರಿಕೊಂಡಿದ್ದಾರೆ.

ನಾಗಾ ಗುಂಪುಗಳಲ್ಲಿ ಜೆಲಿಯಾಂಗ್ರಂಗ್ (ಮೂರು ಉಪ ಬುಡಕಟ್ಟುಗಳ ಸಂಗಮ: ರೊಂಗ್‌ಮೆಯಿ ಅಥವಾ ಕಬುಯಿ, ಲಿಯಂಗ್‌ಮೆಯಿ ಅಥವಾ ಜೆಮಿಯ ಮತ್ತು ಕಚನಾಗಾ) ತಂಗ್ಕುಲ, ಮರಮ್, ಮರಿಂಗ್ ಮತ್ತು ಟರೊ. ಚಿನ್-ಕುಕಿ ಗುಂಪಿನಲ್ಲಿ ಟಡಿಮ್‌ಚಿನ್ (ಸುಕ್ತೆ) ಗಂಗ್ಟೆ, ಹ್ಮರ್, ಪೈಯಿಟೆ, ಟೊಡವ, ಮೈಫೈಯಿ ಝೋವ್, ಫೈನೊಲ್, ಧಿಶು, ಕೊಯಿರೆಂಗ್, ಕೋಮ್, ಅನಲ್ ಚೂತೆ, ಲಮ್‌ಗಂಗ್, ಕೊಯಿರೊ, ತಂಗಲ್, ಮೊಯೊನ್ ಮತ್ತು ಮೊನ್‌ಸಂಗ್. ಇತ್ತೀಚೆಗೆ ಬಹಳಷ್ಟು ಚಿನ್-ಕುಕಿಗಳು ತಮ್ಮನ್ನು ನಾಗಾಗಳೆಂದು ಗುರುತಿಸಿಕೊಂಡಿದ್ದಾರೆ. ಹೊರ ಪ್ರದೇಶಗಳಿಂದ ಬಂದವರನ್ನು ಮಯಾಂಗ್ ಎನ್ನುತ್ತಾರೆ. ಮೆಹಿಟೀಗಳು ವೈಷ್ಣವ ಹಿಂದೂಗಳಾಗಿದ್ದು ಇವರಿಗೆ ಯಾವುದೇ ರಿಯಾಯಿತಿ ಇಲ್ಲ. ಜೊತೆಗೆ ಅವರು ಬುಡಕಟ್ಟು ಜನರಿರುವ ಪರ್ವತಗಳಲ್ಲಿ ನೆಲೆಸುವಂತಿಲ್ಲ. ಜಮೀನು ಕೊಂಡುಕೊಳ್ಳಲು ಬಿಡುವುದಿಲ್ಲ. ಅದೇ ಕ್ರೈಸ್ತ ಮತಕ್ಕೆ ಶರಣಾಗಿರುವ ನಾಗಾ ಮತ್ತು ಕುಕಿಗಳಿಗೆ ಯಾವುದೇ ನಿಯಂತ್ರಣಗಳಿಲ್ಲ. ಈ ಕಾರಣದಿಂದ ಮೆಹಿಟೀಸ್ ಮತ್ತು ಬುಡಕಟ್ಟು ಜನರ ನಡುವೆ ಹೊಂದಾಣಿಕೆ ಕಾಣುತ್ತಿಲ್ಲ.



ಈಶಾನ್ಯದ ಅನಾನಸ್

ಮೇಲಿನ ಕಾರಣಗಳಿಂದ ಉಗ್ರರು ಕೂಡ ಮುಖ್ಯವಾಗಿ ಮೆಹಿಟೀ, ನಾಗಾ ಮತ್ತು ಕುಕಿ ಎಂಬ ಮೂರು ಗುಂಪುಗಳಾಗಿ ಚದುರಿಹೋಗಿದ್ದಾರೆ. ಮೆಹಿಟೀ ಉಗ್ರರ ಆಂದೋಲನ ಉದ್ದೇಶಪೂರ್ವಕ ಬ್ರಿಟಿಷ್ ಪ್ರದೇಶವನ್ನು ಭಾರತೀಯರಿಂದ ಹಿಂದಕ್ಕೆ ಪಡೆದುಕೊಳ್ಳುವುದು. ನಾಗಾಗಳ ಹೋರಾಟವೆಂದರೆ ಅಖಂಡ ನಾಗಾ ಸ್ವತಂತ್ರ ದೇಶವನ್ನು ಸ್ಥಾಪಿಸುವುದು. ಅದು ಮಣಿಪುರ, ಅಸ್ಸಾಂ ಅರುಣಾಚಲ ಪ್ರದೇಶ ಮತ್ತು ಬರ್ಮಾ ಭಾಗಗಳಲ್ಲಿರುವ ನಾಗಾಗಳನ್ನೆಲ್ಲ ಒಟ್ಟಾಗಿ ತರುವುದು. ಕುಕಿಗಳ ಕನಸೆಂದರೆ ಬರ್ಮಾದಲ್ಲಿರುವ ಕುಕಿಗಳನ್ನು ಸೇರಿಸಿಕೊಂಡು ಪ್ರತ್ಯೇಕ ಕುಕಿ ನಾಡನ್ನು ಕಟ್ಟುವುದು. ಮಣಿಪುರದಲ್ಲಿ ಒಟ್ಟು ೩೫ ಉಗ್ರರ ಗುಂಪುಗಳು ಕಾರ್ಯ ನಿರ್ವಹಿಸುತ್ತಿವೆ. ರಾಜಕಾರಣಿಗಳು, ಅಧಿಕಾರಿಗಳು, ವ್ಯಾಪಾರಿಗಳು ಎಲ್ಲರೂ ಉಗ್ರ ಗುಂಪುಗಳಿಗೆ ಹಣ ನೀಡಲೇಬೇಕು. ಅನೇಕ ಶಾಲೆಗಳು ಉಗ್ರರಿಗೆ ಹಣ ನೀಡಲಾಗದೆ ಒಂದೊಂದಾಗಿ ಮುಚ್ಚಿಹೋಗಿವೆ. ಶಾಲೆಗೆ ಹೋಗುವ ಮಕ್ಕಳನ್ನು ಹಾರಿಸಿಕೊಂಡು ಹೋಗಿ ಒತ್ತೆ ಇಟ್ಟುಕೊಂಡು ಹಣ ದೋಚಲಾಗುತ್ತಿದೆ. ಯಾವ ಅಧಿಕಾರಿಗಳೂ ಮನೆಯಲ್ಲಿ ಫೋನ್, ಜೇಬಿನಲ್ಲಿ ಮೊಬೈಲ್ ಇಟ್ಟುಕೊಳ್ಳುತ್ತಿಲ್ಲ ಹಾಗೂ ಇಟ್ಟುಕೊಂಡರೆ ಬಂಡುಕೋರರು ಫೋನ್ ಮಾಡಿ ಬೆದರಿಸಿ ಹಣ ಕೇಳುತ್ತಾರೆ. ಬಹಳಷ್ಟು ಮಣಿಪುರಿಗಳು ನೆಲ, ಮನೆಗಳನ್ನು ಮಾರಾಟ ಮಾಡಿ ಅಕ್ಕಪಕ್ಕದ ರಾಜ್ಯಗಳಿಗೆ ವಲಸೆ ಹೋಗುತ್ತಿದ್ದಾರೆ. ಹಣವಂತರಂತೂ ಕಲಕತ್ತಾ, ಬೆಂಗಳೂರು ಮದ್ರಾಸ್ ಸೇರಿಕೊಳ್ಳುತ್ತಿದ್ದಾರೆ. ಕೇಂದ್ರ ಸರಕಾರದ ಅಧಿಕಾರಿಗಳು, ಮಣಿಪುರ ಎಂದರೆ ಬೆಚ್ಚಿಬಿದ್ದು ಆ ಕಡೆಗೆ ತಲೆಹಾಕಿಯೂ ಮಲಗುತ್ತಿಲ್ಲ. ಅಪ್ಪಿತಪ್ಪಿ ಭಂಡ ಧೈರ್ಯಮಾಡಿ ಹೋದರೆ ಉಗ್ರರು ಅವರನ್ನು ಬಲವಂತವಾಗಿ ಅಪಹರಿಸಿ ಒಂದೆರಡು ಲಕ್ಷ ಹಣ ಮಾಡಿಕೊಳ್ಳುತ್ತಾರೆ.



ಸ್ವಾತಂತ್ರ್ಯ ದಿನಾಚರಣೆ

ಈ ಬಂಡುಕೋರ ಗುಂಪುಗಳು ಕೇಂದ್ರ ರಾಜ್ಯ ಸರಕಾರಗಳ ವಿರುದ್ಧ ಕಳೆದ ಐದಾರು ದಶಕಗಳಿಂದ ಹೋರಾಡುತ್ತಲೇ ಬಂದಿವೆ. ಇವರಲ್ಲಿ ಜನರಿಂದ ದೋಚುವ ಹೇರಳ ಹಣವೂ ಇದೆ. ನಿರುದ್ಯೋಗಿಗಳನ್ನು ಹಣ ಕೊಟ್ಟು ಕೊಂಡುಕೊಂಡು ಸಮಾಜಘಾತುಕ ಚಟುವಟಿಕೆಗಳಲ್ಲಿ ತೊಡಗಿಸುತ್ತಾರೆ. ಪಂಡಿತ್ ನೆಹರು ಮಣಿಪುರವನ್ನು 'ಜ್ಯೂಯೆಲ್ ಆಫ್ ಇಂಡಿಯಾ' ಎಂದು ಕರೆದಿದ್ದರು. ಆದರೆ ಉಗ್ರರ ಸಮಸ್ಯೆಗಳಿಂದ ತತ್ತರಿಸಿಹೋಗಿರುವ ಮಣಿಪುರದ ಪರಿಸ್ಥಿತಿ ಅಸ್ಸಾಂ ಮತ್ತು ಜಮ್ಮು-ಕಾಶ್ಮೀರಕ್ಕಿಂತ ಹದಗೆಟ್ಟಿದೆ. ರೈಲು ರಸ್ತೆ ಇಲ್ಲದ ಮಣಿಪುರಕ್ಕೆ ನಾಗಾಲ್ಯಾಂಡ್ ಮೂಲಕ ಹಾದುಹೋಗುವ ದಿಮಾಪುರ – ಕೊಯಿಮಾ-ಇಂಫಾಲ್ ಅರಣ್ಯ ಪರ್ವತಗಳ ರಸ್ತೆ ಬಂಡುಕೋರರು ನೇರವಾಗಿ ಸುಲಿಗೆ ಮಾಡುವ ರಹದಾರಿಯಾಗಿಬಿಟ್ಟಿದೆ. ಮಣಿಪುರ ಭಾಷೆಗೆ ಬೆಂಗಾಲಿ ಸ್ಕ್ರಿಪ್ಟ್ ಅಳವಡಿಸಲಾಗಿದೆ.

### ತ್ರಿಪುರಾ

ಮಾಣಿಕ್ಯ ರಾಜವಂಶದವರು ತ್ರಿಪುರಾ ರಾಜ್ಯವನ್ನು ಆಳುತ್ತಿದ್ದರು. ಬ್ರಿಟಿಷರ ಕಾಲದಲ್ಲೂ ಇದು ಮಹಾರಾಜರ ಆಡಳಿತದಲ್ಲೇ ಇತ್ತು. ಭಾರತಕ್ಕೆ ಸ್ವಾತಂತ್ರ್ಯ ಬಂದ ತಕ್ಷಣವೆ

ಸೆಪ್ಟೆಂಬರ್ ೯, ೧೯೪೭ರಂದು ಭಾರತದೊಂದಿಗೆ ಐಕ್ಯಗೊಳ್ಳಲು ತ್ರಿಪುರಾ ಮಹಾರಾಣಿ ಒಪ್ಪಿಗೆ ನೀಡಿದ್ದರು. ಆಕ್ಟೋಬರ್ ೧೫, ೧೯೪೯ರಂದು ಭಾರತ, ತ್ರಿಪುರಾ ರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಮೂರು ಕಡೆ ಬಾಂಗ್ಲಾದೇಶದಿಂದ ಸುತ್ತುವರಿದಿರುವ ಈ ಪರ್ವತ ಕಣಿವೆಗಳ ನಾಡಿನಲ್ಲಿ ಬಂಗಾಲಿಗಳ ಸಂಖ್ಯೆಯೇ ಹೆಚ್ಚು. ೨೦೦೧ರ ಜನಗಣತಿ ಪ್ರಕಾರ ಶೇ. ೭೦ರಷ್ಟು ಬಂಗಾಲಿಗಳು ಮತ್ತು ಶೇ. ೩೦ರಷ್ಟು ಸ್ಥಳೀಯ ಬುಡಕಟ್ಟು ಜನರಿದ್ದು, ಇವರೆಲ್ಲ ಕ್ರೈಸ್ತರಾಗಿ ಮತಾಂತರ ಹೊಂದಿದ್ದಾರೆ. ಬಂಗಾಲಿ ಭಾಷೆಯೆ ತ್ರಿಪುರಾ ರಾಜ ಭಾಷೆಯಾಗಿದ್ದು ತ್ರಿಪುರಾದಲ್ಲಿ ಕಮ್ಯುನಿಸ್ಟರು ದೊಡ್ಡ ರಾಜಕೀಯ ಶಕ್ತಿಯಾಗಿದ್ದಾರೆ. ೧೯೪೭ರಲ್ಲಿ ಪೂರ್ವ ಪಾಕಿಸ್ತಾನದಲ್ಲಿದ್ದ ಹಿಂದೂ ಬಂಗಾಲಿಗಳು ತ್ರಿಪುರಾ ಕಡೆಗೆ ವಲಸೆ ಬಂದರೆ, ೧೯೭೦ರಲ್ಲಿ ಬಾಂಗ್ಲಾದೇಶ ಹುಟ್ಟಿಕೊಂಡಾಗ ಹಿಂದು ಮತ್ತು ಮುಸ್ಲಿಮರು ತ್ರಿಪುರಾ ಸೇರಿಕೊಂಡರು. ಈ ಕಾರಣದಿಂದ ಸ್ಥಳೀಯರ ಸಂಖ್ಯೆ ತೀರ ಕಡಿಮೆಯಾಗಿ ಕೆಲವು ಬಂಡುಕೋರರ ಗುಂಪುಗಳು ಹೊರಗಿನವರ ವಿರುದ್ಧ ಹೋರಾಡುತ್ತಿವೆ. ಇವು ಹಲವು ಮೂಲಜನಾಂಗಗಳ ಭಿನ್ನ ಭಾಷೆ ಮತ್ತು ಸಾಂಸ್ಕೃತಿಕ ವೈವಿಧ್ಯಗಳನ್ನು ಹೊಂದಿವೆ. ಮುಖ್ಯ ಜನಾಂಗಗಳೆಂದರೆ ಕೊಕ್‌ಬೊರಕ್ ಭಾಷೆ ಮಾತನಾಡುವವರು (೧೬%) ಜಮಾತಿಯಾ, ರಿಯಂಗ್ ಮತ್ತು ನೊಆಟಿಯ. ಬುಡಕಟ್ಟುಗಳು ಮತ್ತು ಬಂಗಾಲಿಗಳ ನಡುವೆ ತೀವ್ರ ಘರ್ಷಣೆಯ ವಾತಾವರಣ ಇದೆ. ಇಲ್ಲಿನ ಉಗ್ರರು, ಈಶಾನ್ಯದ ಹಲವು ಭಯಾನಕ ಉಗ್ರ ಗುಂಪುಗಳ ಜೊತೆಗೂಡಿ ಪ್ರತ್ಯೇಕ ತ್ರಿಪುರಾ ದೇಶವನ್ನು ಕಟ್ಟಲು ಹೋರಾಡುತ್ತಿದ್ದಾರೆ. ಈಶಾನ್ಯದ ಅತಿ ಸಣ್ಣ ರಾಜ್ಯ ಇದಾಗಿದ್ದು, ಜನಸಂಖ್ಯೆಯಲ್ಲಿ ಅಸ್ಸಾಂ ಬಿಟ್ಟರೆ ಇಲ್ಲೆ ಹೆಚ್ಚು ಜನಸಂಖ್ಯೆ ಇರುವುದು. ಶೇ. ೭೪ ಅಕ್ಷರಸ್ಥರಿದ್ದು ದೇಶದ ೨೪ನೇ ಬಡ ರಾಜ್ಯವಾಗಿದೆ. ಕೇರಳದ ನಂತರ ಇದು ಎರಡನೇ ರಬ್ಬರ್ ರಾಜ್ಯ ಎಂಬ ಹೆಗ್ಗಳಿಕೆ ಪಡೆದಿದೆ. ಸದ್ಯಕ್ಕೆ ತ್ರಿಪುರಾ ಸ್ವಲ್ಪ ನಿರಾಳವಾಗಿ ಉಸಿರಾಡುತ್ತಿದೆ.

**ಅರುಣಾಚಲ ಪ್ರದೇಶ**

ಈ ರಾಜ್ಯ ಚೀನಾ ಜೊತೆಗೆ ಉದ್ದವಾದ ಗಡಿ ಹೊಂದಿದ್ದು, ಯಾವಾಗಲೂ ಉದ್ರಿಕ್ತ ಪರಿಸ್ಥಿತಿಯಿಂದಲೇ ಕೂಡಿರುತ್ತದೆ. ಚೀನಾ, ತವಾಂಗ್ ಪ್ರದೇಶ ತಮ್ಮದು ಎನ್ನುತ್ತಲೇ ಇದೆ. ಏಳು ರಾಜ್ಯಗಳ ಪೈಕಿ ಮಿಜೋರಾಂ ಮತ್ತು ಮೇಘಾಲಯಗಳ ಪರಿಸ್ಥಿತಿ ಸ್ವಲ್ಪ ಸುಧಾರಿಸಿದ್ದು, ಅಕ್ಕಪಕ್ಕದ ರಾಜ್ಯಗಳಲ್ಲಿ ನಡೆಯುತ್ತಿರುವ ಹಿಂಸೆ ಯಾವ ಘಳಿಗೆಯಲ್ಲಾದರೂ ಹರಡಬಹುದಾಗಿದೆ. ಕೇಂದ್ರ ಸರಕಾರ ಯಾವುದೇ ವಿಷಯವಾಗಲಿ ಎಂದೂ ಕಾನೂನಿನ ಚೌಕಟ್ಟಿನ ಒಳಗೇ ಇರಬೇಕು ಎಂದರೂ ಮಿಲಿಟರಿ ಪಡೆಗಳು ಬಂಡುಕೋರರನ್ನು ಹಿಡಿತದಲ್ಲಿಡಲು ಸಾಧ್ಯವಾಗಿಲ್ಲ. ಸರಕಾರ ಕೋಟ್ಯಂತರ ರೂಪಾಯಿ ಚೆಲ್ಲುತ್ತಿದೆ. ನೂರಾರು ಜನರು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ.

ಈಶಾನ್ಯ ರಾಜ್ಯಗಳಲ್ಲಿ ಪರಿಸ್ಥಿತಿ ಹೇಗಿದೆಯೆಂದರೆ, ವರ್ಷಕ್ಕೆ ಎರಡು ಸಲ ನಡೆಯುವ ಸರಕಾರಿ ಹಬ್ಬಗಳಾದ ಸ್ವಾತಂತ್ರ್ಯ ಮತ್ತು ಗಣರಾಜ್ಯ ದಿನಾಚರಣೆಗಳನ್ನು ಯಾವ ರೀತಿ ಆಚರಿಸುತ್ತವೆ ಎಂದರೆ ಯಾವುದೋ ಅಪರಿಚಿತ ದೇಶದಲ್ಲಿ ಅಪರಿಚಿತ ಜನರು ರಾಷ್ಟ್ರ ಧ್ವಜವನ್ನು ಹಾರಿಸುವುದು ಏನೊ ಅಪರಾಧ ಮಾಡುತ್ತಿರುವಂತೆ ತೋರುತ್ತದೆ. ಟಿವಿ ಚಾನೆಲ್‌ಗಳು ಈ ರಾಜ್ಯಗಳ ರಂಗು ರಂಗು ಸಾಂಸ್ಕೃತಿಕ ಕಲೆ ಮತ್ತು ನೃತ್ಯಗಳನ್ನು ಬಿತ್ತರಿಸುತ್ತವೆ. ಅದು ಕೇಂದ್ರ ಸರಕಾರದ ಕುರುಡು ಕಣ್ಣುಗಳಿಗೆ ಹೇಗೆ ಕಾಣಿಸುತ್ತದೆ ಗೊತ್ತಿಲ್ಲ. ಇದು ದೆಹಲಿಯಿಂದ ಬರುವ ಹಣಕ್ಕೆ ರಾಜ್ಯ ಸರಕಾರಗಳು ತೋರಿಸುವ



ಅರುಣಾಚಲ ಪ್ರದೇಶದ ಭತ್ತದ ಬಯಲುಗಳು



ಅರುಣಾಚಲ ಪ್ರದೇಶದ ಒಂದು ಹಳ್ಳಿ

ನಾಟಕೀಯ ಪ್ರಕ್ರಿಯೆಯೆಂದರೆ ತಪ್ಪಾಗುವುದಿಲ್ಲ. ೨೦೦೭ ಮತ್ತು ೨೦೦೮ರಲ್ಲಿ ನಾನು ಶಿಲ್ಲಾಂಗ್‌ನಲ್ಲಿದ್ದೆ. ಅಸ್ಸಾಂನಲ್ಲಿ ೮ ನಾಗಾಲ್ಯಾಂಡ್ ಮತ್ತು ಮೇಘಾಲಯದ ಬಂಡುಕೋರರ ಗುಂಪುಗಳು ಸ್ವಾತಂತ್ರ್ಯ ದಿನವನ್ನು ಪ್ರತಿಭಟಿಸಿ ಆಯಾ ರಾಜ್ಯಗಳ ಬಂದ್ ಘೋಷಿಸಿದ್ದವು. ಅಸ್ಸಾಂನಲ್ಲಿ ಅನೇಕ ಕಡೆ ಕಪ್ಪುಬಾವುಟಗಳನ್ನು ಹಾರಿಸಲಾಗಿತ್ತು. ಬಂಡುಕೋರರ ಆಸ್ಥಾನಗಳಲ್ಲಿ ದೇಶದ ವಿರುದ್ಧ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಗಿತ್ತು. ಒಮ್ಮೆ 'ಬಂದ್' ಎಂದ ತಕ್ಷಣ ಸಾರ್ವಜನಿಕರು ಭೀತಿಯಿಂದ ಮನೆಗಳಲ್ಲಿಯೆ ಇದ್ದುಬಿಡುತ್ತಾರೆ. ರಾಜ್ಯ ಸರಕಾರದ ಕಾರ್ಮಿಕರಿಗೆ ಅಂದು ರಜಾ ದಿನ. ಎಲ್ಲೆಲ್ಲೂ ಪೊಲೀಸರ ಬಂದೋಬಸ್ತು. ಭೀತಿಯಿಂದ ಅಲ್ಲಿ ಇಲ್ಲಿ ತ್ರಿರಂಗ ಬಾವುಟಗಳು ಹಾರಾಡುವುದಕ್ಕಿಂತ ಕಪ್ಪು ಬಾವುಟಗಳೇ ಹೆಚ್ಚಾಗಿ ಹಾರಾಡುತ್ತವೆ. ನಮ್ಮ ಕಛೇರಿಯ ಮುಂದೆ ಎರಡು ಸಲ ಬಾವುಟ ಹಾರಿಸಿದಾಗ ನನ್ನಂತಹ ಹೊರ ರಾಜ್ಯಗಳಿಂದ ಬಂದಿದ್ದ ಅಧಿಕಾರಿಗಳು ಮಾತ್ರ ಇದ್ದೆವು. ಸ್ಥಳೀಯ ಅಧಿಕಾರಿಗಳು, ಕಾರ್ಮಿಕರು ಒಬ್ಬರೂ ಬಂದಿರಲಿಲ್ಲ. ಬಂದ್ ಎಂದು ಒಂದೇ ಒಂದು ಈ-ಮೇಲ್ ಬಂದಿದೆ ಎಂದು ಯಾರಾದರೂ ಗುಲ್ಲೆಬ್ಬಿಸಿದರೆ ಸಾಕು, ಇಡೀ ರಾಜ್ಯದಲ್ಲಿ ಒಂದೇ ಒಂದು ಸರಕಾರಿ, ಖಾಸಗಿ ವಾಹನವೂ ಓಡುವುದಿಲ್ಲ. ಒಂದು ಅಂಗಡಿಯೂ ತೆರೆದಿರುವುದಿಲ್ಲ. ಬಂದ್ ಕರೆದವರು ಯಾವ ಗುಂಪಿನ ಬಂಡುಕೋರರು ಎನ್ನುವುದು ಯಾರಿಗೂ ಗೊತ್ತಿರುವುದಿಲ್ಲ. ನಿಜಕ್ಕೂ ಇವೆಲ್ಲ ಭಾರತಕ್ಕೆ ಸೇರಿದ ರಾಜ್ಯಗಳೇ, ಎನ್ನುವ ಗುಮಾನಿ ಬರುತ್ತದೆ.

ಈಶಾನ್ಯದ ೮ ರಾಜ್ಯಗಳ ಒಟ್ಟು ಜನಸಂಖ್ಯೆ ೨೦೦೭-೦೮ರಲ್ಲಿ ೩.೨೦ ಕೋಟಿಯಾದರೆ ಅವುಗಳಿಗಾಗಿ ಸರಕಾರ ಮಾಡುವ ವೆಚ್ಚ ೩೦,೦೦೦ ಕೋಟಿ. ಅಂದರೆ ಪ್ರತಿ ಮನುಷ್ಯನ ಮೇಲೆ ಸರಾಸರಿ ೧೦,೦೦೦ ರೂ. ಖರ್ಚು ಮಾಡುತ್ತದೆ. ಕೇಂದ್ರ ಸರಕಾರದಿಂದ ಬರುವ ಸುಮಾರು ೨೦,೦೦೦ ಕೋಟಿ ರೂ. ಕೆಳಗಿನಂತೆ ಆಯಾ ರಾಜ್ಯಗಳಿಗೆ ಅನುದಾನವಾಗಿ ದೊರಕುತ್ತದೆ.

| | |
|---|---|
| ಅರುಣಾಚಲ ಪ್ರದೇಶ – ೮೫% | ಅಸ್ಸಾಂ – ೫೧% |
| ಮೇಘಾಲಯ – ೭೦% | ಮಣಿಪುರ – ೮೦% |
| ನಾಗಾಲ್ಯಾಂಡ್ – ೮೦% | ಸಿಕ್ಕಿಂ – ೪೦% |
| ತ್ರಿಪುರಾ – ೭೦% | ಮಿಜೊರಾಂ – ೭೨% |

ಉಳಿದ ೧೦,೦೦೦ ಕೋಟಿ ಆಯಾ ರಾಜ್ಯಗಳ ರೆವಿನ್ಯೂ. ವಿಶೇಷವೆಂದರೆ, ಇಲ್ಲಿನ ಎಲ್ಲಾ ರಾಜ್ಯಗಳ ಬುಡಕಟ್ಟು ಜನರು ಕೇಂದ್ರ ಮತ್ತು ರಾಜ್ಯ ಸರಕಾರಗಳಿಗೆ ಯಾವುದೇ ರೀತಿಯ ತೆರಿಗೆಯನ್ನು ಪಾವತಿಸುವಂತಿಲ್ಲ. ಸ್ಥಳೀಯ ಅಧಿಕಾರಿಗಳು, ವ್ಯಾಪಾರಿಗಳು, ರಾಜಕಾರಣಿಗಳಿಗೂ ತೆರಿಗೆ ಇಲ್ಲ. ಆದರೆ ಇಲ್ಲಿಗೆ ವರ್ಗವಾಗಿ ಬರುವ ಇತರೆ ರಾಜ್ಯಗಳ ಕೇಂದ್ರ ಸರಕಾರ, ಬ್ಯಾಂಕ್ ಅಧಿಕಾರಿಗಳು ಮತ್ತಿತರರು ತೆರಿಗೆ ಕೊಡಬೇಕು. ಆದರೂ ಇಲ್ಲಿನ ಗುಡ್ಡಗಾಡು ಹಳ್ಳಿಗಳಲ್ಲಿ ಬಡತನ ಮಾತ್ರ ನೀಗಿಲ್ಲ. ಕೆಲವರು ಹೇಳುವಂತೆ ಸರಕಾರ ಯಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಮಾಡದೆ ಪ್ರತಿಯೊಬ್ಬರ ಹೆಸರಿನಲ್ಲಿ ವರ್ಷಕ್ಕೆ ೧೦,೦೦೦ರೂ. ಬ್ಯಾಂಕ್ ಖಾತೆಗೆ ಹಾಕಿಬಿಟ್ಟರೆ ಭ್ರಷ್ಟ ಅಧಿಕಾರಿಗಳು ಮತ್ತು ರಾಜಕಾರಣಿಗಳಿಂದ ಅವರನ್ನು ತಪ್ಪಿಸಬಹುದಾಗಿದೆ.

ಎಂ. ವೆಂಕಟಸ್ವಾಮಿ
ಸಂಖ್ಯೆ ೩೧೧, ಸಿಸಿಜ ಹಾಸ್ಟೆಲ್, ಸಿಪಿಡಬ್ಲ್ಯು ಕ್ವಾರ್ಟರ್ಸ್, ದೊಮ್ಮಲೂರು ಅಂಚೆ, ಬೆಂಗಳೂರು - ೭೧

# ಬೆಟ್ಟವೆಂದು ತಿಳಿದದ್ದು...

ನಿಜ ಹೇಳ್ತಾ ಇದ್ದೇನೆ. ನನಗೀಗ ಐವತ್ತೊಮ್ರು. ವಯಸ್ಸು ಜಾಸ್ತಿಯಾದುದಕ್ಕೆ ಬೇಜಾರಿದೆ. ಮೇಲಿಂದ ನಿವೃತ್ತಿ ವಯಸ್ಸು ಇನ್ನೆರಡು ವರ್ಷ ಹೆಚ್ಚಾಯಿತು. ಕಾದು ನೋಡಿ: ನಿವೃತ್ತಿ ವಯಸ್ಸು ಜೀವಿತಾವಧಿ ಎಂಬ ಸುತ್ತೋಲೆ ಮುಂದೆಂದಾದರೂ ಒಂದು ದಿನ ಬಂದರೂ ಬರಬಹುದು. ಆ ಬಗ್ಗೆ ಮತ್ತೆ ಮಾತಾಡೋಣ. ಈಗ ಹೇಳೋದಕ್ಕೆ ಹೊರಟಿದ್ದು ಬೇರೆಯೆ.

ಓದುಗರು ಗಮನಿಸಿದ್ದಿರಬಹುದು, 'ಬನ್ನಿ ಕನಸುಗಳೆ ಬನ್ನಿ' ಎಂಬ ಶೀರ್ಷಿಕೆಯಲ್ಲಿ 'ಹೊಸತು' ನನ್ನದೊಂದು ಕವಿತೆ ಪ್ರಕಟಿಸಿತ್ತು. ಜಾಸ್ತಿಯಾದ ವಯಸ್ಸಿಗೂ ಕವನಕ್ಕೂ ಏನು ಸಂಬಂಧ ಅಂತ ಕೇಳ್ಬೇಡಿ. ಕವನಕ್ಕೆ ಸಂಬಂಧ ಇಲ್ಲದೆ ಇರಬಹುದು, ಆದರೆ ಕನಸುಗಳಿಗೆ ಸಂಬಂಧ ಇದೆಯಲ್ಲ. ಕನಸು ಕಾಣೋದಕ್ಕೆ ವಯಸ್ಸಿನ ಮಿತಿಯೆಂಬುದಿಲ್ಲ. ಯಾರು ಯಾವಾಗ ಬೇಕಾದರೂ, ಏನು ಬೇಕಾದರೂ ಕನಸು ಕಾಣಬಹುದು. ಇಂದಿನ ಮುಕ್ತ ಆರ್ಥಿಕ ನೀತಿಯಲ್ಲಿ ಹಾಗೆ ಮುಕ್ತವಾಗಿ ಹೇಳೋದಕ್ಕೆ ಸ್ವಲ್ಪ ಭಯ ಅಷ್ಟೆ. ಅದರ ಮೇಲೂ ಪೇಟೆಂಟ್ ಕಾಯಿದೆ ಲಾಗೂ ಆಗಿಬಿಟ್ಟರೆ !



ವಿಷಯಕ್ಕೆ ಬರ್ತೇನೆ. ಆ ನನ್ನ ಕವನ ಸುಂದರ ಚಿತ್ರದೊಂದಿಗೆ ಪ್ರಕಟವಾಗಿ ಎಂಟು-ಹತ್ತು ದಿನಗಳೂ ಕಳೆದಿರಲಿಕ್ಕಿಲ್ಲ, ಮಾರಾಟ ಮಾಡೋದಕ್ಕಿಟ್ಟ ಕವನವನ್ನು ಖರೀದಿಮಾಡುವುದಕ್ಕೆಂಬಂತೆ ಒಂದು ಪತ್ರ ಬಂತು. ಬೆಲೆ ನಿಗದಿಪಡಿಸೋಣವೆಂದರೆ, ಬರೆದವರ ಹೆಸರಿದೆ, ಆದರೆ ವಿಳಾಸವಿಲ್ಲ. ಅಂಚೆ ಕಛೇರಿಯವರು ಹಾಕಿದ ಮುದ್ರೆ ನಿಚ್ಚಳವಾಗಿತ್ತಾದರೂ ಹೆಸರು ಬರೆದು ಆ ಊರಿಗೆ ತಲುಪಿಸಿಬಿಡೋಣವೆಂದರೆ ಬರೆದವರು ಆ ಊರಿನಲ್ಲಿ ತಾರಾಮೌಲ್ಯವಿರುವ ವ್ಯಕ್ತಿ ಖಂಡಿತವಾಗಿಯೂ ಇರಲಿಕ್ಕಿಲ್ಲ. ಹಾಗಾಗಿ ಪತ್ರ-ಮಿತ್ರರಾಗುವ ಅವಕಾಶವೂ ಕೈಬಿಟ್ಟು ಹೋಯಿತೆನ್ನಿ! ಅಷ್ಟೇನಾ, ಅಂತ ಪೆಚ್ಚು ಮುಖ ಮಾಡಬೇಡಿ, ಹೇಳೋದಕ್ಕೆ ನನಗೆ ತುಂಬಾ ಇದೆ. ಕುತೂಹಲಕಾರಿಯಾಗಿದೆಯಲ್ಲವಾ ? ಹಾಗಿದ್ದರೆ ಆಫ್ಟರ್ ದ ಬ್ರೇಕ್ !

ಬ್ರೇಕಿನ ನಂತರ ಮುಂದುವರಿಸುವುದಾದರೆ ಪ್ರತಿ ವಾರವೂ ತಪ್ಪದೆ ನನ್ನ ವಿಳಾಸಕ್ಕೆ ಪತ್ರ ಬರ್ತಿತ್ತು. ಅದರ ಒಕ್ಕಣೆ ವಾರದಿಂದ ವಾರಕ್ಕೆ ಬದಲಾಗ್ತಾಹೋಯ್ತು. ಹೀಗೆ ಆ ಹುಡುಗನಿಗೆ ನನ್ನ ಕನಸಿನ ಚಂದಾದಾರನಾಗುವ ಮನಸ್ಸಾಯ್ತು, ಅನ್ನಿ. ನನ್ನಲ್ಲಿ ಎಲ್ಲಿಲ್ಲದ ತವಕ-ತಲ್ಲಣಗಳು ಆರಂಭವಾದವು. ಪತ್ರ ಒಡೆದು ಓದುವ ಮುನ್ನ ಭಯ-ಆತಂಕ ! ಇದು ಪ್ರೇಮದ ಕುರುಹೆಂದು ನೀವು ತಿಳಿದೇ ತಿಳಿಯುತ್ತೀರೆಂದು ನಾನು ಮೊದಲೇ ನನ್ನ ವಯೋಮಾನವನ್ನು ಬಹಿರಂಗಪಡಿಸಿಬಿಟ್ಟಿದ್ದೇನೆ.

ಈ ದಿಗಿಲು-ಆತಂಕಕ್ಕೆ ಮುಖ್ಯ ಕಾರಣವಿಷ್ಟೇ. ಪತ್ರ ನೋಡಿದರೆ ಮನೆಯವರೇನೆಂದುಕೊಂಡಾರು ? ವಿಶ್ವಾಸ-ಅವಿಶ್ವಾಸದ ಪ್ರಶ್ನೆ ಮುಂದಿನದು. ಅಂತೂ ವಿಷಯ ಮಂಡಿಸುವುದಕ್ಕೆ ತಾಲೀಮು ಆರಂಭವಾಯ್ತು. ಎಲ್ಲಕ್ಕಿಂತ ಹೆಚ್ಚಾಗಿ ಪ್ರಾಯಕ್ಕೆ ಬಂದಿರುವ - ಬರುತ್ತಿರುವ ನನ್ನ ಮಕ್ಕಳ ಪ್ರತಿಕ್ರಿಯೆ ಈ ವಿಷಯದಲ್ಲಿ ಹೇಗಿರಬಹುದು ?

ಇದರಿಂದಾದ ಒಂದು ಬದಲಾವಣೆಯೆಂದರೆ ಡಬ್ಬಿಗೆ ಬಂದು ಬೀಳುವ ಪತ್ರಗಳನ್ನ ಯಾರಾದರೂ ಎತ್ತಿಕೊಂಡು ಬರಲಿ ಎಂಬ ನನ್ನ ಸೋಮಾರಿತನಕ್ಕೆ ಕಡಿವಾಣ ಬಿತ್ತು. ಬೆರಳುಗಳಿಗೆ ವ್ಯಾಯಾಮ ಕೊಡುವ ಹೊಸ ಯೋಗಾಭ್ಯಾಸವೊಂದು ತನ್ನಿಂದತಾನೆ ಪ್ರಾರಂಭವಾಯ್ತು. ಅದೇನೆಂದರೆ, ಆ ಪ್ರೇಮಪತ್ರವನ್ನು ಆದ್ಯಂತ ಓದಿಮುಗಿಸಿ ಏಳೆಂಟು ಬೆರಳುಗಳ ಸಹಾಯದಿಂದ ಸಾಧ್ಯವಾದಷ್ಟು ಚಿಕ್ಕಚಿಕ್ಕ ಚೂರುಗಳನ್ನಾಗಿ ಮಾಡುವುದು, ಉತ್ತರ ಬರೆದು ಪೂರ್ಣವಿರಾಮ ಹಾಕಲು ಕಾಲ ಕೂಡಿಬರದ ಕಾರಣದಿಂದಾಗಿ ಅಂಚೆ ಕಛೇರಿಯವರು ಸೌಟು ಮಜ್ಜಿಗೆಗಾಗುವಷ್ಟು ಬೊಕ್ಕಸಕ್ಕೆ ಇಳಿಸಿಕೊಂಡರು.

ಒಂದು ದಿನ ಪತ್ರ ನೋಡುತ್ತಿದ್ದಂತೆ ಯುರೇಕಾ-ಯುರೇಕಾ ಎಂದು ಕೂಗಬೇಕೆನಿಸಿದರೂ ಕೇಳಿದವರ ಮುಂದೆಲ್ಲಾ ವಿಷಯಕ್ಕೆ ಹೊಸದಾಗಿ ಪೀಠಿಕೆ ಹಾಕಬೇಕಾದೀತೆಂದು ಸುಮ್ಮನಾಗಿಬಿಟ್ಟೆ. ಆದರೆ ಇಲ್ಲಿ ಗುಟ್ಟಾಗಿಡುವುದೇನಿಲ್ಲ. ವಿವರಿಸಿಯೇ ಬಿಡುತ್ತೇನೆ. ಅಂದು ಬಂದ ಪತ್ರದಲ್ಲಿ ಮೊಬಾಯಿಲ್ ನಂಬರೊಂದು ಸಿಕ್ಕಿದ್ದು ನನ್ನ ಸಂತಸವನ್ನು ನೂರ್ಮಡಿಸಿತ್ತು. ಇಷ್ಟು ಗಂಟೆಯಿಂದ ಇಷ್ಟು ಗಂಟೆಯ ನಡುವೆ ಫೋನಾಯಿಸಬೇಕೆಂಬ ಕೋರಿಕೆ ಅದರಲ್ಲಿತ್ತು. ಯಾಕೋ ಫೋನ್ ಮಾಡುವ ಮನಸ್ಸಾಗಲಿಲ್ಲ.

ಆ ಮೊಬಾಯಿಲ್ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದ ನನ್ನ ಹಳೆ ವಿದ್ಯಾರ್ಥಿಯೊಬ್ಬನ ನೆನಪು ಆ ಕ್ಷಣ ತೀವ್ರವಾಗಿ ಕಾಡತೊಡಗಿತು. ಅವನಿಂದ ಗುರುದಕ್ಷಿಣೆ ಪಡೆಯುವುದಕ್ಕೆ ಇದುವೆ ಸಕಾಲವೆಂದೆನಿಸಿತು. ಹಾಗಾಗಿ ಅತ್ತ ಕಡೆ ಹೆಜ್ಜೆ ಹಾಕಿದೆ.

ಅಂದು ಅವನು ರಜೆ ಮಾಡಿದ್ದ. ಅಲ್ಲಿಯವರೆಗೆ ಪಾದ ಬೆಳೆಸಿದ್ದಕ್ಕಾಗಿ ಬೇಸರವೂ ಆಯಿತು. ಆಮೇಲನಿಸಿತು ಹಾಗಾದದ್ದು ಒಳ್ಳೆಯದೇ ಆಯಿತು ಎಂದು. ಅಲ್ಲಿ ಗುಟ್ಟಾಗಿ ಏನನ್ನೂ ಹೇಳುವುದಕ್ಕಾಗುತ್ತಿರಲಿಲ್ಲ. ಕೇಳಿಸಿಕೊಳ್ಳಬಾರದೆಂದರೂ ಶಬ್ದಗಳು ತಾವಾಗಿಯೇ ಹೋಗಿಬೀಳುವುದಕ್ಕೆ ಅಕ್ಕ-ಪಕ್ಕದಲ್ಲಿ ಹಲವು ಕಿವಿಗಳಿದ್ದವು. ನಮ್ಮ ವಿಭಾಗದ ಏಕಾಂತದಲ್ಲಿ ಸಾಕಷ್ಟು ಮಾತಾಡಬಹುದೆಂದು ಮನಸ್ಸಿನಲ್ಲಿಯೆ ಲೆಕ್ಕಹಾಕಿ ಬಿಡುವಿದ್ದಾಗ ನಮ್ಮಲ್ಲಿಗೆ ಬಂದು ಹೋಗುವಂತೆ ಹೇಳಿಬಂದೆ. ಅಲ್ಲಾಗುವ ಇನ್ನೊಂದು ಲಾಭವೆಂದರೆ ನಿಗದಿಪಡಿಸಿದ ಸಮಯಮಿತಿಯನ್ನು ಪಾಲಿಸದಿದ್ದರೆ ಆಗುವ ಪರಿಣಾಮವಾದರೂ ಏನೆಂಬುದನ್ನು ನೋಡಬಹುದಲ್ಲ! ಆಜ್ಞಾಕಾರಿ ಶಿಷ್ಯ ನನ್ನೆದುರು ಬಂದು ನಿಂತಾಗ ಹೇಳುವುದಕ್ಕೆ ಒಮ್ಮೆ ಅಳುಕಾಯಿತಾದರೂ ಹೆಚ್ಚಿನ ಸಮಸ್ಯೆಗಳು ಪರಿಹಾರ ಕಂಡುಕೊಳ್ಳದಿರುವುದಕ್ಕೆ ವಿಷಯವನ್ನು ಬಚ್ಚಿಡುವುದೇ ಕಾರಣವೆಂಬುದನ್ನು ಮರೆಯುವಂತಿಲ್ಲ.

ಅಂತೂ ನಾನು ಯಾವುದನ್ನು ಬೆಟ್ಟವೆಂದು ತಿಳಿದಿದ್ದೆನೊ ಅದು ನನ್ನ ಶಿಷ್ಯನ ಸಹಾಯದಿಂದ ಸಾಸಿವೆಗಿಂತಲೂ ಚಿಕ್ಕದಾದ ಕುತೂಹಲಕಾರಿ ಘಟನೆಯನ್ನು ನಾನು ಹೇಳಲೇಬೇಕು. ಅವನು ತನ್ನದೇ ಮೊಬಾಯಿಲಿನಿಂದ ಆ ನಂಬರ್ ಡಾಯಲ್ ಮಾಡಿದ. ಅಲ್ಲಿಂದ ದನಿ ಬಂತು – ''ಯಾರ್ ಬೇಕಿತ್ತರೀ...''

''ಅಮ್ಮಾ, ನಾವು ಮೊಬಾಯಿಲ್ ಕಂಪನಿಯಿಂದ ಮಾತಾಡ್ತಿರೋದು.''

''ಹೂಂನ್ರೀ... ಹೇಳ್ರೀ...''

''ಈ ಮೊಬಾಯಿಲ್ ನಂಬರ್ ಯಾರ ಹೆಸರಲ್ಲಿದೆ ?''

''ನಮ್ಮ ಅಪ್ಪಾರ ಹೆಸರಲ್ಲಿದೆರೀ. ಆದರ ನಮ್ಮ ತಮ್ಮ ಉಪಯೋಗಿಸ್ತಾನರೀ.''

''ಚೆಕ್ ಮಾಡಲಿಕ್ಕಿದೆಯಮ್ಮಾ, ನಿಮ್ಮ ವಿಳಾಸ ಸರಿಯಾಗಿ ಹೇಳಿ ನೋಡೋಣ.''

ಇನ್ನೊಂದು ತುದಿಯಿಂದ ವಿಳಾಸ ತುಣುಕು-ತುಣುಕಾಗಿ ಬರುತ್ತಿದ್ದಂತೆ ನನ್ನ ಶಿಷ್ಯನ ಬಾಯಿಂದ ಅದು ಮರು ಪ್ರಸಾರಗೊಳ್ಳುತ್ತ ಹೋಯಿತು. ಪೆನ್ನು ಹಿಡಿದ ನನ್ನ ಕೈ ಅದನ್ನು ಬರೆಯುತ್ತ ಹೋಯಿತು.

ಬರವಣಿಗೆ ಮುಗಿದಿತ್ತು. ಆದರೆ ಮಾತು ಇನ್ನೂ ಮುಂದುವರಿದಿತ್ತು.

''ಬಿಲ್ ಸರಿಯಾಗಿ ಕಟ್ತಾ ಇದ್ದೀರಲ್ಲವಾ ?''

''ಹೂಂನ್ರೀ...''

''ಸರಿ ಹಾಗಾದರೆ...''

ನನಗೆ ಬೇಕಾದದ್ದು ವಿಳಾಸ ಮಾತ್ರ. ಅದುವೆ ಸತ್ಯ, ಅದನ್ನು ಬಿಟ್ಟರೆ ಆ ಕ್ಷಣ ಮತ್ತೆಲ್ಲವೂ ಮಿಥ್ಯ.

ಎಷ್ಟೊಂದು ಪತ್ರಗಳಿಗೆ ಉತ್ತರಿಸುವುದು ಬಾಕಿಯಿತ್ತು! ಸುದೀರ್ಘವಾಗಿ ಉತ್ತರ ಬರೆದು ನನ್ನೆಲ್ಲ ತವಕ-ತಲ್ಲಣಗಳಿಗೆ ಪೂರ್ಣವಿರಾಮ ಕೊಟ್ಟೆ. ಅಬ್ಬಾ ! ಆ ರಾತ್ರಿ ಅದೆಂಥ ನಿದ್ದೆಬಂತೆಂದು ಬರೆದರೆ ಅದೂ ಒಂದು ಲೇಖನವಾದೀತು.

ಡಾ|| ಮಾಧವಿ ಎಸ್. ಭಂಡಾರಿ
ಉಡುಪಿ.

# ರೋಚಕ ಪತ್ರಿಕೋದ್ಯಮ ಹಾಗೂ ಮಹಿಳಾ ಶೋಷಣೆಗಳ ಕಥಾನಕ 'ಕಮಲಾ'

ವಿಜಯ್ ತೆಂಡೂಲ್ಕರ್ ಮರಾಠಿಯ ಪ್ರಮುಖ ನಾಟಕಕಾರರಷ್ಟೇ ಅಲ್ಲದೆ ಇಡೀ ಭಾರತೀಯ ರಂಗಭೂಮಿಯನ್ನು ಪ್ರಭಾವಿಸಿದ ವ್ಯಕ್ತಿ. ಇವರ 'ಕಮಲಾ' ನಾಟಕ ಅತ್ಯಂತ ಆಧುನಿಕವೂ, ವಿಶಿಷ್ಟವೂ ಆಗಿರುವಂತಹುದು. ಈ ನಾಟಕದಲ್ಲಿ, ಆಧುನಿಕ ಜಗತ್ತಿನಲ್ಲಿ ಅತ್ಯಂತ ಪ್ರಚಲಿತವಾಗಿರುವ ರೋಚಕ ಪತ್ರಿಕೋದ್ಯಮ ಹಾಗೂ ಪುರುಷ ಪ್ರಾಧಾನ್ಯತೆಯಡಿಯಲ್ಲಿ ನಲುಗಿ ಹೋಗುತ್ತಿರುವ ಮಹಿಳೆಯರ ಚಿತ್ರಣ ಅತ್ಯಂತ ಸೂಕ್ಷ್ಮವಾಗಿ, ವಿಡಂಬನಾತ್ಮಕವಾಗಿ ಮೂಡಿಬಂದಿದೆ.

ಈ ನಾಟಕದಲ್ಲಿ ಎರಡು ಅಂಕಗಳಿವೆ. ಮೊದಲ ಅಂಕದಲ್ಲಿ ದೆಹಲಿಯ ಖ್ಯಾತ ಇಂಗ್ಲಿಷ್‌ನ ಪತ್ರಿಕೆಯಲ್ಲಿ ಸಹಸಂಪಾದಕನಾಗಿರುವ ಜೈಸಿಂಗ್ ಜಾಧವನ ಕುಟುಂಬದ ಪರಿಚಯವಾಗುತ್ತದೆ. ಜೈಸಿಂಗ್‌ನ ಹೆಂಡತಿ ಸರಿತಾ ಸುಶಿಕ್ಷಿತ ಹೆಣ್ಣು, ಮಕ್ಕಳಿನ್ನೂ ಆಗಿಲ್ಲ, ಮನೆಯ ಜವಾಬ್ದಾರಿಯನ್ನೆಲ್ಲ ಹೊತ್ತು ಗಂಡನ ನೆರಳಾಗಿ ಇರುವವಳು – ಒಂದು ರೀತಿಯ ಅಡಿಯಾಳೇ ಎನ್ನಬಹುದು. ಜೈಸಿಂಗ್-ಸರಿತಾರ ಮನೆಯಲ್ಲಿ ಇರುವ ಕೆಲಸದಾಕೆ – ಕಮಲಾಬಾಯಿ. ಈಕೆ ಹಳ್ಳಿಯಿಂದ ಬಂದವಳು; ಬಡತನದ ಕಾರಣದಿಂದಾಗಿ, ಜೈಸಿಂಗ್‌ನ ಮನೆಯಲ್ಲೇ ಕೆಲಸ ಮಾಡಿಕೊಂಡು, ವಾಸಿಸುತ್ತಿರುವವಳು. ಮೊದಲ ಅಂಕದಲ್ಲಿ ಇನ್ನೊಂದು ಪಾತ್ರದ ಪರಿಚಯವಾಗುತ್ತದೆ – ಅದು ಕಾಕಾ ಸಾಹೇಬರದು. ಕಾಕಾಸಾಹೇಬ ಸರಿತಾಳ ಚಿಕ್ಕಪ್ಪ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವ ಹಿರಿಯ ಪತ್ರಕರ್ತ; ಅವರು ಸಣ್ಣ ಊರೊಂದರಲ್ಲಿ ಸ್ಥಳೀಯ ಭಾಷೆಯಲ್ಲೇ, ತಮ್ಮ ಸ್ವಂತ ಖರ್ಚಿನಲ್ಲಿ ಪತ್ರಿಕೆಯೊಂದನ್ನು ನಡೆಸುತ್ತಿರುವವರು. ಅವರು ತಮ್ಮ ಪತ್ರಿಕೆಗಾಗಿ ಅಚ್ಚಿನ ಕಾಗದವನ್ನು ಪಡೆಯಲು ದೆಹಲಿಗೆ ಬಂದು, ಸರಿತಾಳ ಮನೆಯಲ್ಲಿ ಉಳಿದುಕೊಂಡಿದ್ದಾರೆ. ಮೊದಲ ಅಂಕದ ಮಧ್ಯದಲ್ಲಿ ಬಿಹಾರಕ್ಕೆ ಹೋಗಿದ್ದ ಜೈಸಿಂಗ್ ಮನೆಗೆ ಬರುತ್ತಾನೆ. ಬರುವಾಗ ಜೊತೆಗೆ 'ಕಮಲಾ'ಳನ್ನು ಕರೆದುಕೊಂಡು ಬರುತ್ತಾನೆ. ಬಿಹಾರದ ಹಳ್ಳಿಯೊಂದರ ಸಂತೆಯಲ್ಲಿ ಕಮಲಾಳನ್ನು ಜೈಸಿಂಗ್ ಇನ್ನೂರೈವತ್ತು ರೂಪಾಯಿಗೆ ಕೊಂಡುಕೊಂಡು ಬಂದಿದ್ದಾನೆ. ಅವಳನ್ನು ಒಂದು ದೊಡ್ಡ ಪತ್ರಿಕಾ ಸಂದರ್ಶನದಲ್ಲಿ ಪ್ರದರ್ಶಿಸುವ ಹವಣಿಕೆಯಲ್ಲಿದ್ದಾನೆ. ಕಮಲಾ ಮತ್ತು ಜೈಸಿಂಗ್ ಪತ್ರಿಕಾಸಂದರ್ಶನಕ್ಕೆ ಹೋಗುವಲ್ಲಿಗೆ ಒಂದನೇ ಅಂಕ ಮುಗಿಯುತ್ತದೆ.

ಪತ್ರಿಕಾ ಸಂದರ್ಶನ ಮುಗಿಸಿಕೊಂಡು ಬಂದ ಜೈಸಿಂಗ್ ತನ್ನೊಡನೆ ಇನ್ನೊಬ್ಬ ಪತ್ರಕರ್ತ ಜೈನ್‌ನನ್ನು ಕರೆದುಕೊಂಡು ಬಂದಿದ್ದಾನೆ, ಜೊತೆಗೆ ಕಮಲಾ ಇದ್ದಾಳೆ. ಜೈಸಿಂಗ್ ಮತ್ತು ಜೈನ್‌ರ ಸಂಭಾಷಣೆಯೊಂದಿಗೆ ಎರಡನೇ ಅಂಕ ಆರಂಭವಾಗುತ್ತದೆ. ಪತ್ರಿಕಾ ಸಂದರ್ಶನದಲ್ಲಿ ಪತ್ರಕರ್ತರು ಕಮಲಾಳಿಗೆ ಕೇಳಿದ ಪ್ರಶ್ನೆಗಳು, ಅವಳು ಅವಾಕ್ಕಾದ ರೀತಿ ಮುಂತಾದವು ಇವರ ಸಂಭಾಷಣೆಯಲ್ಲಿ ತಮಾಷೆಗೆ ಈಡಾಗುತ್ತವೆ. ಪತ್ರಿಕಾ ಸಂದರ್ಶನದಲ್ಲಿ ಕಮಲಳಂಥ ಅಮಾಯಕಳಿಗೆ ಪತ್ರಕರ್ತರು, ಬಡತನದ ರೇಖೆಯ ಕೆಳಗಿರುವವರ ಬಗ್ಗೆ ನಿಮ್ಮ ಅಭಿಪ್ರಾಯವೇನು, ಆದಿವಾಸಿಗಳಲ್ಲಿ ಮುಕ್ತ ಲೈಂಗಿಕತೆ ಇದೆಯಲ್ಲವೇ, ನೀವು ಎಷ್ಟು ಗಂಡಸರೊಂದಿಗೆ ಮಲಗಿದ್ದೀರಿ, ಮುಂತಾದ ಪ್ರಶ್ನೆಗಳನ್ನು ಕೇಳುತ್ತಾರೆ. ಇವರ ಸಂಭಾಷಣೆಯನ್ನು ಕೇಳಿಸಿಕೊಳ್ಳುತ್ತಿರುವ ಕಾಕಾಸಾಹೇಬ್, ಜೈಸಿಂಗ್‌ನನ್ನು ನಯವಾಗಿ ವಿರೋಧಿಸುತ್ತಾರೆ. ಬಿಹಾರದ ಮೂಲೆಯಲ್ಲಿ ಮನುಷ್ಯರ ಮಾರಾಟವನ್ನು ವಿರೋಧಿಸಲು ಉದ್ಯುಕ್ತನಾಗಿರುವ ಜೈಸಿಂಗ್, ಇನ್ನೊಂದು ರೀತಿಯಲ್ಲಿ ಕಮಲಾಳನ್ನು ಪ್ರದರ್ಶಿಸಿ ಮಾರಾಟವನ್ನೇ ಮಾಡುತ್ತಿದ್ದಾನೆ ಎಂಬುದು ಅವರ ಆರೋಪ. ಇದೇ ಅಂಕದಲ್ಲಿ ಕುಡಿತದ ಅಮಲಿನಲ್ಲಿ ಜೈಸಿಂಗ್ ಸರಿತಾಳ ಸಾಮೀಪ್ಯವನ್ನು ಬಯಸುತ್ತಾನೆ. ಆದರೆ, ಜೈಸಿಂಗ್‌ನ ಎಲ್ಲ ವ್ಯವಹಾರದ ಬಗ್ಗೆ ಅಸಮಾಧಾನಗೊಂಡ ಸರಿತಾ, ಜೈಸಿಂಗ್‌ನೊಡನೆ ಮಲಗುವ ಕೋಣೆಗೆ ಹೋಗಲು ನಿರಾಕರಿಸುತ್ತಾಳೆ. ರಾತ್ರಿಯಲ್ಲಿ ಒಬ್ಬಳೇ ಡ್ರಾಯಿಂಗ್ ರೂಂನಲ್ಲಿ ಕುಳಿತ ಸರಿತಾಗೆ, ಗುಲಾಮಿ ಕಮಲಾಳೊಂದಿಗೆ ಮುಖಾಮುಖಿಯಾಗುತ್ತದೆ. ಕಮಲಾ, ಸರಿತಾಗೆ ಕೇಳುವ ಮೊದಲ ಪ್ರಶ್ನೆ – ನಿನ್ನೊಡೆಯ ನಿನ್ನನ್ನು ಎಷ್ಟು ರೂಪಾಯಿಗೆ ಕೊಂಡಿದ್ದಾನೆ ಎಂಬುದು. ಸರಿತಾಳಿಗೆ ವೈದ್ಯಕೀಯ ಪರೀಕ್ಷೆಗಳ ನಂತರವೂ ಮಕ್ಕಳಾಗಿಲ್ಲ ಎಂಬುದನ್ನು ತಿಳಿದ ಕಮಲಾ, ತಾನು ಒಡೆಯನೊಂದಿಗೆ ಇದ್ದು ಮಕ್ಕಳನ್ನು ಹಡೆಯುವುದಾಗಿಯೂ, ಮನೆಗೆಲಸವೆಲ್ಲವನ್ನೂ ಮಾಡುವುದಾಗಿಯೂ, ತಿಂಗಳಲ್ಲಿ ಹದಿನೈದು ದಿನ ತಾನು ಜೈಸಿಂಗ್‌ನೊಂದಿಗೆ ಮಲಗುವುದಾಗಿಯೂ, ಹದಿನೈದು ದಿನ ಸರಿತಾ ಮಲಗಬಹುದೆಂದೂ ಸೂಚಿಸುತ್ತಾಳೆ. ಸರಿತಾ ಇದಕ್ಕೆ ಒಪ್ಪುತ್ತಾಳೆ. ಮರುದಿನ ಬೆಳಗ್ಗೆ, ಎಲ್ಲ ಪತ್ರಿಕೆಗಳಲ್ಲೂ ಕಮಲಳದೇ ಸುದ್ದಿ, ಜೈಸಿಂಗ್‌ನಿಗೆ ಅಭಿನಂದನೆಗಳ ಸುರಿಮಳೆ. ಆದರೆ, ಇದ್ದಕ್ಕಿದ್ದಂತೆ ನೀತಿಭಾಗ್ ಪೊಲೀಸ್‌ಠಾಣೆಯಿಂದ ಜೈಸಿಂಗ್‌ಗೆ ಫೋನ್ ಬರುತ್ತದೆ. ಪೊಲೀಸರು ಕಮಲಾಳನ್ನು ಕಸ್ಟಡಿಗೆ ತೆಗೆದುಕೊಳ್ಳಲು ಬಯಸುತ್ತಾರೆ. ಆದರೆ, ಜೈಸಿಂಗ್ ಇದೆಲ್ಲಕ್ಕಿಂತ ಮೊದಲೇ ಕಮಲಾಳನ್ನು ಅನಾಥಾಲಯಕ್ಕೆ ಸೇರಿಸುತ್ತಾನೆ. ಇದನ್ನು ಸರಿತಾ ವಿರೋಧಿಸಿ ಕಮಲ ಮನೆಯಲ್ಲೇ ಇರಲಿ ಎನ್ನುತ್ತಾಳೆ. ಈ ಎಲ್ಲ ಘಟನೆಗಳಿಂದ ಸರಿತಾಳಲ್ಲಿ ಏನೋ ಬದಲಾವಣೆಯಾಗಿದೆ. ಆದ್ದರಿಂದಲೇ ಆಕೆ, ಕಾಕಾ ಸಾಹೇಬನಲ್ಲಿ 'ಕಮಲಾ ಒಬ್ಬಳೇ ಗುಲಾಮಳಲ್ಲ, ಅವಳಂತೆ ನಾನೂ... ನಾನೂ...' ಎಂದು ಬಿಕ್ಕುವುದು. ಅಂಕದ ಕೊನೆಯಲ್ಲಿ ಪತ್ರಕರ್ತ ಜೈನ್, ಸರಿತಾಳ ಮನೆಗೆ ಬಂದು 'ಜೈಸಿಂಗ್‌ನನ್ನು ಕೆಲಸದಿಂದ ವಜಾ ಮಾಡಲಿದ್ದಾರೆ' ಎಂಬ ಸುದ್ದಿ ತರುತ್ತಾನೆ. ಇದನ್ನು ತಿಳಿದ ಜೈಸಿಂಗ್ ಕುಡಿದು ಮತ್ತನಾಗಿ ಎಲ್ಲರನ್ನೂ ಬೈದು ಕುಸಿಯುತ್ತಾನೆ. ಸರಿತಾ ಅವನನ್ನು ಉಪಚರಿಸುತ್ತಾಳೆ. ಪತ್ರಿಕೆಯ ಮಾಲಿಕ ಜೈಸಿಂಗ್‌ನನ್ನು ವಜಾಮಾಡಲು ಕಾರಣ ಉನ್ನತಮಟ್ಟದ ರಾಜಕಾರಣಿಗಳು ಹೆಂಗಸರ ವ್ಯಾಪಾರದಲ್ಲಿ ಶಾಮೀಲಾಗಿರುವುದು. ಇಂತಹ ವ್ಯವಸ್ಥೆಯನ್ನು ಪ್ರಕಟ ಮಾಡಿದ ಜೈಸಿಂಗ್‌ಗೆ ಶಿಕ್ಷೆಯಾಗುತ್ತದೆ.

ಈ ನಾಟಕದಲ್ಲಿ ರೋಚಕ ಸುದ್ದಿ ಮಾಡುವ, ಅಂತಹ ಸುದ್ದಿಗಳನ್ನು ಇಂಗ್ಲಿಷ್‌ನಲ್ಲಿಯೇ ಪ್ರಕಟಿಸುವ, ಮಾನವೀಯತೆಯ ಹೆಸರಿನಲ್ಲಿ ವ್ಯಾಪಾರಮಾಡುವ ಪತ್ರಿಕೋದ್ಯಮದ ಬಗ್ಗೆ ಒಳನೋಟಗಳಿವೆ. ಹಾಗೆಯೇ ಈ ನಾಟಕದಲ್ಲಿ ಬರುವ ಮೂರೂ ಸ್ತ್ರೀ ಪಾತ್ರಗಳು - ಸರಿತಾ, ಕಮಲಾಬಾಯಿ, ಕಮಲಾ-ವ್ಯಾಪಾರದ ಸರಕುಗಳಂತಿದ್ದಾರೆ. ಇಡೀ ಪ್ರಕರಣದಿಂದ, ತನ್ನೊಳಗನ್ನು ಶೋಧಿಸಿಕೊಂಡ ಸರಿತಾ ಕೊನೆಯಲ್ಲಿ, 'ಒಂದು ದಿನ ನಾನು ಈ ಗುಲಾಮಗಿರಿಯಿಂದ ಮುಕ್ತಳಾಗುತ್ತೇನೆ' ಎಂಬ ಮಾತು ಹೇಳುತ್ತಾಳೆ.

ವಿಜಯ್ ತೆಂಡೂಲ್ಕರ್ ಅವರು ಈ ನಾಟಕವನ್ನು ನಿಜ ಘಟನೆಯೊಂದು ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ವರದಿಯಾದಾಗ ಬರೆದರು. ಅಶ್ವಿನ್ ಸರಿನ್ ಎಂಬ ಪತ್ರಕರ್ತ, ನಿಜವಾಗಿಯೂ ಒಂದು ಹೆಣ್ಣನ್ನು ಸಂತೆಯಲ್ಲಿ ಖರೀದಿಸಿ ಸುದ್ದಿ ಮಾಡಿದ್ದ.

ಎಸ್. ಮಾಲತಿ
'ಮಹಾಲಸ ನಿಲಯ', ಜೋಗ ರಸ್ತೆ, ಸಾಗರ - ೫೭೭ ೪೦೧





'ಕಮಲಾ' ನಾಟಕದ ದೃಶ್ಯಗಳು

# ಮತಾಂತರವೆಂಬ ಕೊಳ್ಳಿದೆವ್ವ

**ದ್ವಿಜರಿಂದ ಎಸ್.ಟಿ.ಗಳವರೆಗೆ ಹಲವು ವರ್ಗಗಳಿದ್ದು, ಯಾವ್ಯಾವ ವರ್ಗಗಳ ಎಷ್ಟೆಷ್ಟು ಜನ 'ಬಲಾತ್ಕಾರ'ದಿಂದ ಮತಾಂತರವಾಗಿದ್ದಾರೆಂಬ ಮಾಹಿತಿಯನ್ನು ಮುಂದಿಡದೆ ಮತಾಂತರ ನಿಷೇಧ ಕಾಯಿದೆಗಾಗಿ ಒತ್ತಡ ತರುತ್ತಿರುವುದೇಕೆ ? ಬಲಾತ್ಕಾರದಿಂದಾಗಿ ಕ್ರಿಸ್ತನನ್ನೋ ಕುರಾನನ್ನೋ ಆರಾಧಿಸಲೊಪ್ಪಿದವರು ಕುರಿಗಳಿಗಿಂತ ಭಿನ್ನರಾಗಿರಲಾರರು. ಪೇಜಾವರರನ್ನೊಳಗೊಂಡು ಎಲ್ಲ ಸ್ವಾಮಿಗಳೂ ಯಾವ್ಯಾವ ಉಪಜಾತಿಗಳಿಂದ ಉತ್ತರಾಧಿಕಾರಿಯನ್ನು ಆರಿಸುತ್ತಾರೋ ಆಯಾ ಉಪಜಾತಿಗಳಿಗಷ್ಟೇ ಜಗದ್ಗುರುಗಳು ಎಂಬುದನ್ನು ಅರಿಯದವರೂ ಕುರಿಗಳೇ. ಶ್ರುತಿ-ಸ್ಮೃತಿ, ದೇವಸ್ಥಾನ ಸಂಸ್ಕೃತಿಗಳಿಂದ ಶೋಷಿಸಲ್ಪಟ್ಟ ವರ್ಗಗಳಿಗೆ ತಿಳುವಳಿಕೆ ಮೂಡುತ್ತಿದೆ. ಅವರಿಗೆ ದ್ವಿಜರ ಧರ್ಮವನ್ನು ಪ್ರೀತಿಸಲಾಗಲಿ ಮುಸ್ಲಿಮ್-ಕ್ರೈಸ್ತರನ್ನು ದ್ವೇಷಿಸಲಾಗಲಿ ಕಾರಣಗಳಿಲ್ಲ. ಹಾಗಾಗಿ ಮತಾಂತರವೆಂಬ ಕೊಳ್ಳಿದೆವ್ವವನ್ನು ಸೃಷ್ಟಿಸಲೇಬೇಕಾದ ಅನಿವಾರ್ಯತೆ ವೈದಿಕರಿಗೆ ಬಂದಿದೆ.**

**ಪಿ. ಎಸ್. ಶ್ರೀಧರಮೂರ್ತಿ**

ಹಿಂದುಗಳನ್ನು ಬಲಾತ್ಕಾರದಿಂದ ಮತಾಂತರಗೊಳಿಸುವ ಅಪಾಯಕಾರಿ ಸಂಚು ನಡೆಯುತ್ತಿದೆ ಎಂಬ ತೀವ್ರ ವಿಷಾದ ಪದೇ ಪದೇ ದೊಡ್ಡ ಸುದ್ದಿಯಾಗುತ್ತಿದೆ. ದೇಶದ ಜನಸಂಖ್ಯೆ ಕುರಿತ ಮಾಹಿತಿ ಈ ಪ್ರಶ್ನೆ ಕುರಿತ ವಸ್ತುನಿಷ್ಠ ಚರ್ಚೆಗೆ ಅತ್ಯಗತ್ಯ. ಜನಗಣತಿ (ಸೆನ್ಸಸ್) ವರದಿಗಳಲ್ಲಿ ಭಾಷಾವಾರು ಮಾಹಿತಿ ಸಿಗುತ್ತದೆಯಷ್ಟೇ; ಜಾತಿವಾರು ಮಾಹಿತಿಯಲ್ಲ. ಹಿಂದುಳಿದ ವರ್ಗಗಳ ಆಯೋಗಗಳು ಸಂಗ್ರಹಿಸಿದ ಸಾಕ್ಷ್ಯಾಧಾರಗಳಿಂದ ಯಾರ್ಯಾರು ಎಷ್ಟೆಷ್ಟು ಸಂಖ್ಯೆಯಲ್ಲಿ ಇದ್ದಾರೆಂಬ ಅಂದಾಜು ಸಿಗುತ್ತದೆ.

**ಜನಸಂಖ್ಯೆಯ ಶೇಕಡಾವಾರು ವಿಂಗಡಣೆ**

| | |
|---|---|
| ದ್ವಿಜರು | ೮ |
| ಶೂದ್ರರು | ೨೫ |
| ಅತಿ ಶೂದ್ರರು | ೮ |
| ಪಂಚಮರು | ೨೦ |
| ಎಸ್.ಟಿ.ಗಳು | ೧೦ |
| ಬೌದ್ಧರು | ೨.೫ |
| ಜೈನರು | ೩ |
| ಸಿಖ್ಖರು | ೨.೫ |
| ಲಿಂಗಾಯಿತರು | ೨.೫ |
| ಮುಸ್ಲಿಮರು | ೧೫.೫ |
| ಕ್ರೈಸ್ತರು | ೨.೫ |
| ಅತ್ಯಲ್ಪ ಸಂಖ್ಯಾತರು | ೦.೫ |
| ಒಟ್ಟು | ೧೦೦.೦ |

ದ್ವಿಜರೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು. ಶೂದ್ರರೆಂದರೆ ಒಕ್ಕಲಿಗ, ರೆಡ್ಡಿ, ಕಾಯಸ್ಥ, ಯಾದವ, ಜಾಟ್ ಕಾಪು, ಕಮ್ಮೆ ಇತ್ಯಾದಿ. ಅತಿಶೂದ್ರರೆಂದರೆ ಕುಂಬಾರ, ಉಪ್ಪಾರ, ಬೆಸ್ತ, ನಾಯಿಂದ, ಈಡಿಗ, ಅಗಸ ಇತ್ಯಾದಿ. ಈ ಅದ್ವಿಜರಿಗೆ ಜನಿವಾರ ಇಲ್ಲವಾದರೂ ಜಾತಿ (ವರ್ಣ) ಇದೆ; ಆದ್ದರಿಂದ ಸವರ್ಣೀಯರು.

ಪಂಚಮರೆಂದರೆ ಜಾತಿ (ವರ್ಣ) ಇಲ್ಲದ ಅವರ್ಣೀಯರು (ಔಟ್‌ಕಾಸ್ಟ್). ಜಾತಿ ಇಲ್ಲದ ಇವರನ್ನು ಷೆಡ್ಯೂಲ್ಡ್ ಕಾಸ್ಟ್-ಪರಿಶಿಷ್ಟ ಜಾತಿ ಎಂದು ಕರೆದದ್ದೇ ತಪ್ಪು. ದಲಿತರು ಎಂಬ ಸೂಕ್ತ ಹೆಸರಿಗಾಗಿ ಈ ಜನ ಅಂಬೇಡ್ಕರ್ ವರೆಗೆ ಕಾಯಬೇಕಾಯ್ತು. ಶಾಸ್ತ್ರಗಳ ಪ್ರಕಾರ ಇವರು ಚಂಡಾಲರು. ಚಂಡಾಲರ ಕುರಿತ ಪ್ರಸ್ತಾಪ ಮನುಸ್ಮೃತಿಯಲ್ಲಿ ಹದಿನೇಳು ಸಲ ಬಂದಿದೆ. ಯಾವುದೇ ಮಾನವ ಹಕ್ಕುಗಳು ಇರದಿದ್ದ ಇವರ ಮೇಲೆ ಶಾಸ್ತ್ರಗಳು ಕ್ರೂರ ಸ್ಯಾಂಕ್ಷನ್‌ಗಳನ್ನು ಹೇರಿವೆ. ಭೂಮಾಲಿಕತ್ವ, ವ್ಯಾಪಾರ, ಹೊಸ ಬಟ್ಟೆಗಳು ಮುಂತಾದ ಹಕ್ಕುಗಳಿರದಿದ್ದ ಇವರಿಗೆ ಊರಿನವರ ಮಲಮೂತ್ರಗಳನ್ನೂ ಸತ್ತ ಪ್ರಾಣಿಗಳನ್ನೂ ಸಾಗಿಸುವ ಕರ್ತವ್ಯವನ್ನು ಶಾಸ್ತ್ರಗಳು ವಿಧಿಸಿವೆ. ರೋಮನ್ನರಲ್ಲಿದ್ದ ಗುಲಾಮಪದ್ಧತಿಯಂತೆ ಖರೀದಿಸಲ್ಪಟ್ಟ ಗುಲಾಮನ ಹೊಟ್ಟೆ ಬಟ್ಟೆ ಯಜಮಾನನ ಹೊಣೆಯಾಗಿತ್ತು. ಇಲ್ಲಿ ಚಂಡಾಲನನ್ನು ಸಾಕುವ ಹೊಣೆ ಯಾರಿಗೂ ಇರಲಿಲ್ಲ! ವೇದಗಳನ್ನು ಕೇಳಿಸಿಕೊಂಡಲ್ಲಿ ಕಿವಿಗೆ ಕಾದ ಸೀಸ ಹುಯಿಸಿಕೊಳ್ಳುವ ಶಿಕ್ಷೆಯನ್ನು ಗೌತಮ ಧರ್ಮ ಸೂತ್ರವೆಂಬ ಸ್ಮೃತಿ ಶೂದ್ರರಿಗೆ ವಿಧಿಸಿದೆ ಎಂದ ಮೇಲೆ ಈ ಚಂಡಾಲನ ಪಾಡು ಹೇಗಿದ್ದಿರಬಹುದು? ಯಾವುದೇ ಧರ್ಮಕ್ಕೆ (ರಿಲಿಜನ್) ಸೇರಿರದ ಈ ಅಸ್ಪೃಶ್ಯರಿಗೆ ವೈದಿಕಧರ್ಮದ ದೌರ್ಜನ್ಯಗಳಿಗೆ ತಲೆಯೊಡ್ಡುವುದೇ ಧರ್ಮ (ಕರ್ತವ್ಯ)ವಾಗಿತ್ತು.

ಕೊನೆಯದಾಗಿ ಎಸ್.ಟಿ.ಗಳು ಎಂದರೆ ಚಾತುರ್ವರ್ಣ್ಯ ವ್ಯವಸ್ಥೆಗೆ ಸಂಪೂರ್ಣ ಪರಕೀಯರಾದ, ಎಂದರೆ ದ್ವಿಜರ ಹತೋಟಿಗೆ ಸಿಗದೆ ಕಾಡುಮೇಡುಗಳಲ್ಲಿ ಬದುಕುವ ಅಲೆಮಾರಿ ಮತ್ತು ಗುಡ್ಡಗಾಡು ಜನರು. ಸಂವಿಧಾನದಂತೆ ಪರಿಶಿಷ್ಟ ವರ್ಗಗಳವರು. ಲಂಬಾಣ, ಬಿಲ್ಲವ, ಸೋಲಿಗ, ಆದಿವಾಸಿಗಳು, ಸಂತಾಲರು, ಬೇಡ, ನಾಗ, ಗೋಂಡ, ತೋಡ, ಬಡಗ ಇತ್ಯಾದಿಗಳು. ಚಳುವಳಿ ಮೂಲಕ ಇತ್ತೀಚೆಗೆ ರಾಜಾಸ್ಥಾನದ ಗುಜ್ಜರ್ ಜನಾಂಗ ಸುದ್ದಿ ಮಾಡಿತು. ಗೋಜ್ರಿ ಇವರ ಭಾಷೆ. ಹಿಮಾಚಲ ಪ್ರದೇಶದಲ್ಲಿ ಪರಿಶಿಷ್ಟ ವರ್ಗ (ಎಸ್.ಟಿ.)ದಲ್ಲಿರುವ ಇವರು ರಾಜಾಸ್ಥಾನ, ಮಧ್ಯ ಪ್ರದೇಶಗಳಲ್ಲಿ ಒ.ಬಿ.ಸಿ. (ಅದರ್ ಬ್ಯಾಕ್‌ವರ್ಡ್ ಕಾಸ್ಟ್) ಎಂದರೆ ಅತಿಶೂದ್ರ ವರ್ಗದಲ್ಲಿದ್ದಾರೆ. ಎಸ್.ಟಿ. ಪಟ್ಟಿಗೆ ಸೇರಿಸಬೇಕೆಂದು ಇವರ ಒತ್ತಾಯ. ಉರ್ದು ಪಂಜಾಬಿಗಳನ್ನು ಬಳಸುವವರೂ ಇವರಲ್ಲಿದ್ದಾರೆ. ದಿ॥ ರಾಜೇಶ್ ಪೈಲಟ್ ಈ ಸಮುದಾಯದವರು. ಇವರ ಚಳುವಳಿಯನ್ನು ಹತ್ತಿಕ್ಕಲು, ''ಹಿಂದು''ಗಳು ನಡೆಸುತ್ತಿರುವ ಹರಿಯಾಣ, ಮಧ್ಯಪ್ರದೇಶ ಮತ್ತು ಉತ್ತರ ಪ್ರದೇಶ ಸರ್ಕಾರಗಳು ಸುಮಾರು ನಲವತ್ತು ಗುಜ್ಜರರನ್ನು ಗುಂಡಿಕ್ಕಿ ಕೊಂದಿವೆ.

**ಬಂಡಾಯ-ಪ್ರಾಟೆಸ್ಟಂಟ್ (ಅವೈದಿಕ) ಧರ್ಮಗಳು**

ಧರ್ಮ ಎಂಬ ಶಬ್ದವನ್ನು ವೈದಿಕರು ತಮ್ಮ ಅನುಕೂಲಕ್ಕೆ ತಕ್ಕಂತೆ ಅರ್ಥೈಸುತ್ತಾರೆ. ಚಾತುರ್ವರ್ಣ್ಯ ಧರ್ಮ ರಿಲಿಜನ್ ಅಲ್ಲ. ಧರ್ಮವೆಂದರೆ ಇಲ್ಲಿ ಪ್ರತಿಷ್ಠೆ ಮತ್ತು ಕರ್ತವ್ಯಗಳ ಪಟ್ಟಿ. ಶ್ರುತಿ (ವೇದ) ಸ್ಮೃತಿ (ಶಾಸ್ತ್ರ)ಗಳು ನಿರ್ದೇಶಿಸಿದ ಚಾತುರ್ವರ್ಣ್ಯ, ಅಸ್ಪೃಶ್ಯತೆ, ಶಾಸ್ತ್ರೋಕ್ತ ಮತ್ತು ವರ್ಣ (ಜಾತಿ) ಆಧಾರಿತ ಪ್ರತಿಷ್ಠೆ ಸವಲತ್ತು ದೌಲತ್ತುಗಳು, ನಿಕೃಷ್ಟತೆ, ಅಪಮಾನ, ಅಸಮಾನತೆಗಳು ಇತ್ಯಾದಿಗಳನ್ನು ಪ್ರತಿಭಟಿಸಿ, ವೇದಗಳ ಪ್ರಾಮಾಣ್ಯವನ್ನು ಧಿಕ್ಕರಿಸಿದ ಬುದ್ಧ, ಮಹಾವೀರ, ಬಸವಣ್ಣ ಮತ್ತು ಗುರುನಾನಕರ ಅನುಯಾಯಿಗಳು ಬೌದ್ಧರು, ಜೈನರು, ಲಿಂಗಾಯಿತರು ಮತ್ತು ಸಿಖ್ಖರೆನಿಸಿಕೊಂಡರು. ಇವು ಬಂಡಾಯವೆದ್ದು ಪ್ರತ್ಯೇಕಿಸಿಕೊಂಡವರ ಪ್ರಾಟೆಸ್ಟಂಟ್ ಧರ್ಮ (ರಿಲಿಜನ್)ಗಳು. ರಿಲಿಜನ್ ಎಂಬ ದೃಷ್ಟಿಯಿಂದ ನೋಡಿದಾಗ ಚಾತುರ್ವರ್ಣ್ಯ ಒಂದು ಅಧರ್ಮ!

ನಿರ್ದಿಷ್ಟ ವ್ಯಾಖ್ಯೆ (ಡೆಫಿನಿಶನ್) ಹೊಂದಿರುವ ಮುಸ್ಲಿಮರು ಮತ್ತು ಕ್ರೈಸ್ತರ ಬಗ್ಗೆ ವಿವರಣೆ ಅನಗತ್ಯ. ದೇಶದ ಹೊರಗೆ ಹುಟ್ಟಿದ ಜನ, ಧರ್ಮಗಳು ಮತ್ತು ಆ

ಧರ್ಮಗಳವರನ್ನು ಎಂದರೆ ಮುಸ್ಲಿಮ್, ಕ್ರೈಸ್ತ, ಯಹೂದ್ಯರನ್ನು ಸ್ಮೃತಿಗಳು ಮ್ಲೇಚ್ಛರೆಂದು ಕರೆದಿವೆ. 'ಮ್ಲೇಚ್ಛ' ಎಂಬ ಶಬ್ದ ಮನುಸ್ಮೃತಿಯಲ್ಲಿ ಎರಡು ಸಲ ಬಂದಿದೆ. ಕಾಫಿರ್ ಎಂದರೆ ಕೆಟ್ಟವನಲ್ಲ; ಇಸ್ಲಾಮನ್ನು ಅನುಸರಿಸದವನು ಎಂದಷ್ಟೇ ಅರ್ಥ. ಆದರೆ ಮ್ಲೇಚ್ಛ ಶಬ್ದಕ್ಕೆ ಅನಾಗರಿಕ, ಕ್ರೂರಿ ಇತ್ಯಾದಿ ಅರ್ಥಗಳಿವೆ. ಹೊರಗಿನಿಂದ ಮೊದಲು ಇಲ್ಲಿಗೆ ಬಂದವರು ಆರ್ಯರು. ಇಲ್ಲಿ ನೆಲಸಿದ ಮೇಲೆ ಇವರೇ ಮ್ಲೇಚ್ಛ ಶಬ್ದವನ್ನು ಹೊಸೆದರು! ಇರಾನ್ ಎಂಬುದು ಆರ್ಯನ್ ಶಬ್ದದ ಇನ್ನೊಂದು ರೂಪ. ಆ ಕುರಿತ ದೀರ್ಘ ಚರ್ಚೆ ಇಲ್ಲಿ ಬೇಡ. ಕೊನೆಯದಾಗಿ ಅತ್ಯಲ್ಪ ಸಂಖ್ಯಾತರೆಂದರೆ, ಫಾರ್ಸಿ, ಆಂಗ್ಲೋ-ಇಂಡಿಯನ್, ಆರ್ಮೀನಿಯನ್, ಟಿಬೆಟ್ ಮೂಲದವರು ಇತ್ಯಾದಿ. ಇವರುಗಳೂ ಮ್ಲೇಚ್ಛರೇ.

**ವೈದಿಕ ಸಮಾಜಶಾಸ್ತ್ರ**

ವೈದಿಕ ಸಮಾಜಶಾಸ್ತ್ರದಂತೆ ಎಂಟು ಪಂಗಡಗಳಿವೆ : ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅತಿಶೂದ್ರ, ಚಂಡಾಲ, ಅವೈದಿಕ, ಮ್ಲೇಚ್ಛ. ಶೂದ್ರ, ಚಂಡಾಲ (ಪಂಚಮ)ರು ವೈದಿಕರ ಹತೋಟಿಯಲ್ಲಿದ್ದರು. ನಾಯಿಂದ, ಬೆಸ್ತ, ತಿಗಳ, ಧೋಬಿ, ಲಂಬಾಣಿ ಮುಂತಾದ ಅತಿ ಶೂದ್ರರು ಕೆಲವು ಸಂದರ್ಭಗಳಲ್ಲಿ ಅಸ್ಪೃಶ್ಯರು. ತಮಿಳ್ನಾಡಿನ ವನ್ನಿಯರು ಇಲ್ಲಿ ತಿಗಳರು. ಡಾ॥ ರಾಮದಾಸ್ ನೇತೃತ್ವದ ಪಾಟ್ಟಾಳಿ ಮಕ್ಕಳ್ ಕಕ್ಷಿ (ಪಿ.ಎಂ.ಕೆ.) ಎಂಬ ಈ ಜನಾಂಗದವರದೇ ಆದ ಪಕ್ಷವಿದೆ. ತರ್ಕಾರಿ, ಸೊಪ್ಪು ಬೆಳೆದು (ತೋಟಗಾರಿಕೆ) ಮಾರುವುದು ಇವರ ಕಸುಬು. ಲಾಲ್‌ಬಾಗನ್ನು ನಿರ್ಮಿಸುವಾಗ ಟಿಪ್ಪು ಸುಲ್ತಾನ್ ಇವರನ್ನು ತಮಿಳ್ನಾಡಿನಿಂದ ಕರೆಸಿದ. ಗೊಬ್ಬರ ಸಾಗಿಸುವುದರಿಂದ ಕೆಲವೆಡೆ ಇವರು ಅಸ್ಪೃಶ್ಯರು. ಅತಿಶೂದ್ರವರ್ಗದವರು ದ್ವಿಜರಿಗೆ ಅಸ್ಪೃಶ್ಯರು; ಶೂದ್ರರಿಗಲ್ಲ. ಅಸಮಾನತೆಯ ಆಚರಣೆಯಲ್ಲಿ ಮತ್ತೆ ಅಸಮಾನತೆ! ಇಂದಿನ ಪರಿಭಾಷೆಯಲ್ಲಿನ ಓ.ಬಿ.ಸಿ. (ಅದರ್ ಬ್ಯಾಕ್‌ವರ್ಡ್ ಕ್ಲಾಸಸ್) ಗಳಲ್ಲಿನ ಬಹುತೇಕರು ಅತಿಶೂದ್ರರು. ಅವೈದಿಕ (ಬಂಡಾಯ) ಧರ್ಮಗಳವರನ್ನು ವೈದಿಕರು ತೀರಾ ಕ್ರೌರ್ಯದಿಂದ ನಡೆಸಿಕೊಂಡರು. ಬಸವಣ್ಣನವರ ಸಾಮಾಜಿಕ ಕ್ರಾಂತಿಯನ್ನು ಹತ್ತಿಕ್ಕಲು ವೈದಿಕರು ಕೈಗೊಂಡ ಅಮಾನುಷ ಕ್ರಮಗಳಿಗೆ ಸಮನಾದುವು ವಿಶ್ವದಲ್ಲೇ ವಿರಳ.

ಚಾತುರ್ವರ್ಣ್ಯ ವ್ಯವಸ್ಥೆ ಎಸಗಿದ ಅನ್ಯಾಯಕ್ಕೆ ತುತ್ತಾಗಿದ್ದ ಶೂದ್ರಾದಿಗಳೂ, ಶ್ರುತಿ-ಸ್ಮೃತಿಗಳನ್ನು ತಾತ್ಪೂರ್ತಿಕವಾಗಿ ನಿರಾಕರಿಸಿದ ಕೆಲವು ದ್ವಿಜರೂ ಈ ಹೊಸ ಧರ್ಮಗಳನ್ನು ಸ್ವೀಕರಿಸಿದರು. ಇಸ್ಲಾಮ್-ಕ್ರೈಸ್ತ ಧರ್ಮಗಳಂತಲ್ಲದ ಇಲ್ಲಿ ವೇದವಿರೋಧಿ (ಆ್ಯಂಟಿ-ವೇದಿಕ್) ಧ್ವನಿ ಇದೆ. ಶರಣರ ವಚನಗಳಲ್ಲಿ ಶ್ರುತಿ-ಸ್ಮೃತಿಗಳ ಪುರಾಣಗಳ ಕಟು ಖಂಡನೆಯಿದೆ. ಬೌದ್ಧಧರ್ಮಕ್ಕೆ ಅನಾತ್ಮವಾದವೆಂಬ ಹೆಸರೂ ಇದೆ. ಇಂತಹ ವೈರುಧ್ಯವಿದ್ದುದರಿಂದಲೇ ಡಾ॥ ಅಂಬೇಡ್ಕರ್ ಬೌದ್ಧಧರ್ಮಕ್ಕೆ ಆಕರ್ಷಿತರಾದರು. ಈ ಮತಗಳವರು ವೈದಿಕರ ದೃಷ್ಟಿಯಲ್ಲಿ ಒಂದು ರೀತಿಯ 'ಕಾಫಿರ'ರು. ಜೈನ, ಬೌದ್ಧ ನೀತಿಬೋಧಕರನ್ನು ಪಾಷಂಡಿ (ವಿತಂಡವಾದಿ)ಗಳೆಂದು ಕರೆದರು ಎಂದು ಮ್ಯಾಕ್ಸ್ ಮುಲ್ಲರ್ ಬರೆದಿದ್ದಾರೆ. ವೈದಿಕರ ಪ್ರಕಾರ ನಾಸ್ತಿಕರೆಂದರೆ ದೇವರನ್ನು ನಂಬುವವರಲ್ಲ; ವೇದಗಳನ್ನು ನಿರಾಕರಿಸಿದವರು. ''ನಾಸ್ತಿಕೋ ವೇದನಿಂದಕಃ''.

ಅಶೋಕ (ಕ್ರಿ. ಪೂ. ೨೭೩-೨೩೨)ನ ಸಂತತಿಯಲ್ಲಿ ಕೊನೆಯವನಾದ ಬೃಹದ್ರಥನ ಅಂತ್ಯದೊಂದಿಗೆ ಮೌರ್ಯರ ಆಳ್ವಿಕೆ ಕುಸಿದು ಪುಷ್ಯಮಿತ್ರಶುಂಗ (ಕ್ರಿ.ಪೂ. ೧೮೭)ನ ಆಳ್ವಿಕೆಯೊಡನೆ ವೈದಿಕರ ಶಕ್ತಿ ತಲೆ ಎತ್ತಿತು. ಬೌದ್ಧಧರ್ಮವನ್ನು ಬಗ್ಗುಬಡಿದುದಲ್ಲದೆ ವೈದಿಕ ಮೌಲ್ಯಗಳು ಮತ್ತು ಆಚರಣೆಗಳು ರಾಜಾಶ್ರಯದೊಂದಿಗೆ ಪುನಶ್ಚೇತನಗೊಂಡವು. ರಾಮಾಯಣಕ್ಕೆ ಆದ್ಯತೆ ದೊರಕಿತು. ಮಹಾಭಾರತಕ್ಕೆ ಹೊಸ ಸೇರ್ಪಡೆಗಳಾದುವು. ಮನುಸ್ಮೃತಿ ಮೆರೆಯಿತು. ಗೌತಮಬುದ್ಧರನ್ನೂ ಅವರಿಂದ ಪ್ರಭಾವಿತರಾದವರನ್ನೂ ರಾಕ್ಷಸ (ಅಸುರ)ರೆಂದು ಬಣ್ಣಿಸುವ ಕೃತಿಗಳ ರಚನೆಯಾಯಿತು. (ಆರ್. ಸಿ. ಮಜುಂದಾರರ ಅಡ್ವಾನ್ಸ್‌ಡ್ ಹಿಸ್ಟರಿ ಪುಟ - ೧೧೧ ಮತ್ತು ೨೦೭). ಕೆಲವು ರಾಜರ ನೆರವಿನಿಂದ ಆದಿ ಶಂಕರಾಚಾರ್ಯರು ಬೌದ್ಧರನ್ನು ಕೊಲ್ಲಿಸಿದ ವಿವರಗಳ ದೀರ್ಘಚರ್ಚೆ ಇಲ್ಲಿ ಬೇಡ. ಎಷ್ಟಾದರೂ ''ಹಿಂದು''ಗಳ ಪರಮತ ಸಹಿಷ್ಣುತೆ ಲೋಕವಿಖ್ಯಾತವಾದುದು! ಮ್ಲೇಚ್ಛರ ಬಗ್ಗೆ ವೈದಿಕರು ತೆಪ್ಪಗಿದ್ದರು. ಏಕೆಂದರೆ ಸುಲ್ತಾನ್, ಬಾದಶಹ, ವೈಸ್‌ರಾಯಿಗಳಾಗಿ ಅವರು ಸಿಂಹಾಸನದ ಮೇಲೆ ಕುಳಿತಿದ್ದರು. ವೈದಿಕರು ಅವರ ಸೇವೆ ಮಾಡಿಕೊಂಡಿದ್ದರು! ರಾಜಾ ಜೈಸಿಂಗ್ ಎಂಬ ಕ್ಷತ್ರಿಯ, ಎಂದರೆ ದ್ವಿಜ, ಔರಂಗ್‌ಜೇಬನ ಸೇನಾಧಿಪತಿಯಾಗಿದ್ದ.

**'ಹಿಂದು' ಶಬ್ದ ಎಲ್ಲಿಯದು ?**

ಶ್ರುತಿ, ಸ್ಮೃತಿ, ಉಪನಿಷತ್ತು, ಬ್ರಹ್ಮಸೂತ್ರ, ಗೀತೆ, ಪುರಾಣ ಇಲ್ಲೆಲ್ಲೂ ''ಹಿಂದು'' ಶಬ್ದ ಇಲ್ಲ. ಈ ಶಬ್ದ ಸಂಸ್ಕೃತದ್ದಲ್ಲ; ಭಾರತದ್ದಲ್ಲ; ಕೊನೆಗೆ ಹಿಂದುಗಳೇ ಸೃಷ್ಟಿಸಿದ ಶಬ್ದವೂ ಅಲ್ಲ. ದ್ವಿಜರಿಂದ ಅಸ್ಪೃಶ್ಯರವರೆಗೆ ಎಲ್ಲರನ್ನೂ ಸೇರಿಸಿ ಹಿಂದು ಎಂದು ಯಾವುದೇ ಋಷಿ

ಯಾಗಲಿ ಮತವಾಗಲಿ ಕರೆಯಲಿಲ್ಲ. 'ಹಿಂದು' ಎಂಬುದು ಪರ್ಶಿಯನ್ ಶಬ್ದ, ಎಂದರೆ ಮ್ಲೇಚ್ಛ ಶಬ್ದ. ಮ್ಲೇಚ್ಛರಲ್ಲೂ ಮುಸ್ಲಿಮರು ಕೊಟ್ಟ ಶಬ್ದ. ಹಿಂದು ಎಂಬ ಪರ್ಶಿಯನ್ ಶಬ್ದಕ್ಕೆ ಮುಖದ ಮೇಲಿನ ಮೊಡವೆ, ಸೇವಕ, ಕಳ್ಳ, ಗುಲಾಮ ಎಂಬಿತ್ಯಾದಿ ಅರ್ಥಗಳಿವೆ. ಕಾಬೂಲ್ ಮತ್ತು ಖೈಬರ್ ಕಣಿವೆಯ ಉತ್ತರಕ್ಕಿರುವ ಹಿಂದೂ ಖುಷ್ ಪರ್ವತದ ಬಹುಭಾಗ ಆಫ್ಘಾನಿಸ್ತಾನದಲ್ಲಿದೆ. ಕುಖ್ಯಾತ ಕಳ್ಳಕಾಕರನ್ನು ಪರ್ಶಿಯನ್ನರು ಈ ಪರ್ವತದ ತುದಿಗೆ ಓಡಿಸಿಕೊಂಡು ಹೋಗಿ ಪರ್ವತದಾಚೆಗಿನ ಕೊಳ್ಳದಲ್ಲಿ ಕಳ್ಳರನ್ನು ತಳ್ಳಿ ಸಾಯಿಸುತ್ತಿದ್ದರು. ಹಿಂದೂಖುಷ್ ಎಂದರೆ ಕಳ್ಳರನ್ನು ನಾಶಗೊಳಿಸುವ ಪರ್ವತ ಎಂದರ್ಥ. 'ಹಿಂದು' ಶಬ್ದಕ್ಕೆ ಅವಹೇಳನಕಾರಿ ಅರ್ಥಗಳಿದ್ದುದರಿಂದ, ಸಿಂಧೂ ನದಿಯ ಹೆಸರಿನಿಂದ ಹಿಂದು ಶಬ್ದ ಹುಟ್ಟಿತೆಂಬ ಕಟ್ಟುಕತೆಯನ್ನು ವೈದಿಕರು ಹೊಸೆದರು. ಮ್ಲೇಚ್ಛ-ಮುಸ್ಲಿಮರಿಂದಾಗಿಯೇ ''ನಾವೆಲ್ಲ ಹಿಂದು; ನಾವೆಲ್ಲ ಒಂದು''. ಆಫ್ಘಾನಿಸ್ತಾನ್ , ಬಲೂಚಿಸ್ತಾನ್, ಕಜಾಕಿಸ್ತಾನ್ ಎಂಬ ಹೆಸರುಗಳನ್ನು ಸೃಷ್ಟಿಸಿದವರೇ ಹಿಂದೂಸ್ತಾನ್ ಶಬ್ದವನ್ನೂ ಸೃಷ್ಟಿಸಿದರು. ಮುಸ್ಲಿಮ್ ಆಳ್ವಿಕೆಯ ಕಾಲದಲ್ಲಿ ಮುಖ್ಯವಾಗಿ ಮುಘಲರು ಕ್ರೈಸ್ತ, ಮುಸ್ಲಿಮ್, ಯಹೂದಿ ಮತ್ತು ಪಾರ್ಸಿಗಳನ್ನುಳಿದು ಇತರರನ್ನೆಲ್ಲಾ ಆಡಳಿತಾತ್ಮಕ (ಧಾರ್ಮಿಕ ಅಲ್ಲ!) ಕಾರಣಗಳಿಗಾಗಿ 'ಹಿಂದು' ಎಂದು ಕರೆದರು; 'ಹಿಂದು ಧರ್ಮೀಯರು' ಎಂದಲ್ಲ.

**ಸ್ವಾಮಿ ವಿವೇಕಾನಂದರ ವಿಶ್ಲೇಷಣೆ**

ಪರ್ಶಿಯನ್ನರು ಸಿಂಧೂನದಿಯ ಇತ್ತಕಡೆಯ ಜನರನ್ನೆಲ್ಲ ಹಿಂದುಗಳೆಂದು ಕರೆದರು; ಮುಸ್ಲಿಮರ ಆಳ್ವಿಕೆಯ ಕಾಲದಲ್ಲಿ ನಾವೂ ನಮ್ಮನ್ನು ಹಿಂದುಗಳೆಂದು ಕರೆದುಕೊಂಡೆವು; ಆದರೆ ಇಲ್ಲಿರುವವರೆಲ್ಲ ಒಂದೇ ಧರ್ಮವನ್ನು ಅನುಸರಿಸುತ್ತಿಲ್ಲವಾದ್ದರಿಂದ ನಾವು 'ಹಿಂದು' ಎಂಬ ಹೆಸರನ್ನು ನಮಗೆ ಅನ್ವಯಿಸಿಕೊಳ್ಳುವುದು ಸರಿಯಲ್ಲ. ನಮ್ಮನ್ನು ನಾವು ವೈದಿಕರೆಂದೋ, ವೇದಗಳನ್ನು ಅನುಸರಿಸುವವರೆಂದೋ, ವೇದಾಂತಿಗಳೆಂದೋ ಕರೆದುಕೊಳ್ಳುವುದೇ ಸೂಕ್ತ. ಮುಂದುವರೆದು ವಿವೇಕಾನಂದರು ''ವೇದಗಳಿಗೆ ಪರಮೋಚ್ಚ ಮನ್ನಣೆ ನೀಡದವನಿಗೆ 'ಹಿಂದು' ಎನಿಸಿಕೊಳ್ಳುವ ಹಕ್ಕಿಲ್ಲ'' ಎಂದಿದ್ದಾರೆ. ಮುಸ್ಲಿಮರು ಬಡ ಜನರನ್ನು ಬಲಾತ್ಕರಿಸಿ ಮತಾಂತರಗೊಳಿಸಿದರೆಂಬುದು ''ಮೂರ್ಖತನ'' ಎಂದೂ ಆ ಜನ ಪುರೋಹಿತಶಾಹಿ ಮತ್ತು ಜಮೀನುದಾರರ ದೌರ್ಜನ್ಯದಿಂದ ಬಿಡುಗಡೆಹೊಂದಲೆಂದೇ ಇಸ್ಲಾಮನ್ನು ಸ್ವೀಕರಿಸಿದರೆಂದೂ ಸಾರಿದ್ದಾರೆ. (ಕಂಪ್ಲೀಟ್ ವರ್ಕ್ಸ್ ಆಫ್ ಸ್ವಾಮಿ ವಿವೇಕಾನಂದ, ಮೂರನೇ ಸಂಪುಟ - ಪುಟ ೧೧೮, ೨೨೮ ಮತ್ತು ಎಂಟನೇ ಸಂಪುಟ - ಪುಟ ೩೩೦ ನೋಡಿ.)

ವೇದವನ್ನು ಕೇಳಿಸಿಕೊಳ್ಳಲೂಬಾರದ ಶೂದ್ರರು, ಸ್ಮೃತಿಗಳಿಂದ ಚಂಡಾಲರೆನಿಸಿಕೊಂಡ ದಲಿತರು, ''ವೇದಗಳಿಗೆ ಪರಮೋಚ್ಚ ಮನ್ನಣೆ''ಯನ್ನು ಏಕೆ ಕೊಡಬೇಕು ? ಇತಿಹಾಸದ ಪುಟಗಳಲ್ಲಿ ದಾಖಲಾಗದ ಎಷ್ಟೋ ಕಂಬಾಲಪಲ್ಲಿಗಳಲ್ಲಿ, ಬದನವಾಳಗಳಲ್ಲಿ ದಲಿತರ ಮಾರಣಹೋಮ ನಡೆಸಿದವರು ವೇದ ಧರ್ಮೀಯರೇ ಹೊರತು ಮುಸ್ಲಿಮರಲ್ಲ; ಕ್ರೈಸ್ತರೂ ಅಲ್ಲ.

**ಹಿಂದು 'ಧರ್ಮ' - ಯಾವುದು ? ಎಲ್ಲಿದೆ ?**

ಆಸ್ಟ್ರೇಲಿಯನ್ನರು, ಯೂರೋಪಿಯನ್ನರು ಎಂಬಂತೆ ಹಿಂದು ಎಂಬುದು ಒಂದು ಜನಸಮುದಾಯಕ್ಕೆ ಮ್ಲೇಚ್ಛರು




ಕೊಟ್ಟ ಹೆಸರು. ಆಸ್ಟ್ರೇಲಿಯನಿಸಮ್, ಯೂರೋಪಿಯನಿಸಮ್ ಎಂಬ ಧರ್ಮಗಳು ಹೇಗೆ ಇಲ್ಲವೋ ಅಂತೆಯೇ ಹಿಂದೂಯಿಸಮ್-ಹಿಂದೂಧರ್ಮ ಎಂಬುದು ಸಹ ಅರ್ಥವಿಲ್ಲದ ಶಬ್ದ. ನಿರ್ದಿಷ್ಟ ಅರ್ಥ ಮತ್ತು ವ್ಯಾಖ್ಯೆ – ಡೆಫೆನಿಶನ್ – ಇಲ್ಲದ ಶಬ್ದ ವ್ಯಾಪಕವಾಗಿ ಮತ್ತು ನಿರಂತರ ಬಳಕೆಯಾಗುತ್ತಿರುವುದರಿಂದ ಚಿಂತನೆ ದಾರಿ ತಪ್ಪುತ್ತಿದೆ; ಚರ್ಚೆ ಗೊಂದಲವಾಗುತ್ತಿದೆ. ವೇದಧರ್ಮವನ್ನು ಹಿಂದುಧರ್ಮ ಎಂಬ ಹೆಸರಿನಲ್ಲಿ ಚಲಾವಣೆಗೆ ತರುವ ಪ್ರಯತ್ನ ಮಾಡುತ್ತಿರುವವರೂ ವೈದಿಕರೇ; ದಲಿತರು ಹಿಂದುಗಳೆಂದು ಅರ್ಭಟಿಸುತ್ತಿರುವವರೂ ವೈದಿಕರೇ ಹೊರತು ದಲಿತರಲ್ಲ. ಹೊಲೆಯನಾಗಿದ್ದವನು, ಕ್ರೈಸ್ತಧರ್ಮ ಸ್ವೀಕರಿಸಿದೊಡನೆ ವೈದಿಕಮಠಗಳ ದೃಷ್ಟಿಯಲ್ಲಿ ಅವನು 'ಬಲಾತ್ಕರಿಸಲ್ಪಟ್ಟ ಹಿಂದು' ಆಗಿಬಿಡುತ್ತಾನೆ! ಶ್ರುತಿಸ್ಮೃತಿಗಳಲ್ಲಿನ ಮೌಲ್ಯ (ಜಾತಿಕಟ್ಟಳೆ)ಗಳನ್ನು ರಕ್ಷಿಸಿ ಉಳಿಸುವ ಉದ್ದೇಶದಿಂದಲೇ ಸ್ಥಾಪಿಸಲ್ಪಟ್ಟ ವೈದಿಕಮಠಗಳ ಈ ಅಪ್ರಾಮಾಣಿಕತೆ ಖಂಡನೀಯ. ಕ್ರೈಸ್ತರಂತೆ ಸಾರ್ವಜನಿಕ ಶಾಲಾಕಾಲೇಜುಗಳನ್ನು ಸ್ಥಾಪಿಸದಿದ್ದುದಕ್ಕೆ ಈ ಮಠಗಳ ಮೂಲೋದ್ದೇಶವೇ ಕಾರಣ.

ಋಗ್ವೇದದಲ್ಲಿನ ಪುರುಷಸೂಕ್ತ, ಸ್ಮೃತಿಗಳಲ್ಲಿನ ಜಾತಿಕಟ್ಟಳೆಗಳಿಂದಾಗಿ ಶ್ರೇಷ್ಠ, ನಿಕೃಷ್ಟ, ಉಚ್ಚ-ನೀಚ, ದ್ವಿಜ-ಅದ್ವಿಜ, ಸವರ್ಣೀಯ-ಅವರ್ಣೀಯ, ಸ್ಪೃಶ್ಯ-ಅಸ್ಪೃಶ್ಯ, ಸುಮಂಗಲಿ-ಅಮಂಗಲಿ – ಹೀಗೆ ಮಾನವರನ್ನು ಅವೈಜ್ಞಾನಿಕವಾಗಿ ವಿಂಗಡಿಸಿ ಗೋಳುಹುಯ್ದುಕೊಂಡ ಚಾತುರ್ವರ್ಣ್ಯದಂಥ ಶೋಷಣಾಧಾರಿತ ಸಾಮಾಜಿಕ-ಆರ್ಥಿಕ ವ್ಯವಸ್ಥೆ, ಬೇರೆಲ್ಲೂ ಧರ್ಮದ ಹೆಸರಿನಲ್ಲಿ ಮೆರೆಯಲಿಲ್ಲ. ಹಿಂದು 'ಧರ್ಮ' ಎಂಬುದು ಚಾತುರ್ವರ್ಣ್ಯ 'ವ್ಯವಸ್ಥೆ'ಯೇ ಹೊರತು ಬೇರೇನೂ ಅಲ್ಲ. ಆದ್ದರಿಂದಲೇ ಚತುರ್ವರ್ಣಗಳವರು ಮಾತ್ರವೇ ಹಿಂದುಗಳೆಂದು ಹೇಳಿಕೊಳ್ಳಲು ಇಚ್ಛಿಸುತ್ತಾರೆ. ಬೌದ್ಧ, ಜೈನ, ಸಿಖ್ಖರಷ್ಟೇ ಅಲ್ಲದೆ ಕೆಲ ಲಿಂಗಾಯಿತರೂ ತಾವು ಹಿಂದುಗಳಲ್ಲ ಎನ್ನುತ್ತಾರೆ. ನಾಲ್ಕನೆ ವರ್ಣದ ಶೂದ್ರರಲ್ಲೂ ಹಲವು ಪ್ರಜ್ಞಾವಂತರಲ್ಲಿ ಹಿಂದು ಎನಿಸಿಕೊಳ್ಳುವ ಬಗ್ಗೆ ಜಿಗುಪ್ಸೆ ಬೆಳೆಯುತ್ತಿದೆ. ಮನುಸ್ಮೃತಿಯನ್ನು ಓದಿದ ನಂತರ ಕುವೆಂಪು, ''ನಾನು ಹಿಂದು ಅಲ್ಲ'' ಎಂದರು. ಹಾಗಿದ್ದಲ್ಲಿ ಅವರು ದೇಶಬಿಟ್ಟು ಹೋಗಲಿ ಎಂದು ಕೆಲದಿನ ಹಿಂದುತ್ವವಾದಿಗಳು ಕೂಗಾಡಿ ಸುಮ್ಮನಾದರು. ಚಾತುರ್ವರ್ಣ್ಯ ಒಂದು ಅಧರ್ಮವೆಂಬುದೇ ಲೋಹಿಯಾರ ನಿಲುವು. ಅಂಬೇಡ್ಕರರೂ, ಪೆರಿಯಾರ್ ಈ. ವಿ. ರಾಮಸ್ವಾಮಿಯವರೂ ಮನುಸ್ಮೃತಿಯ ಪ್ರತಿಗಳನ್ನು ಸಾರ್ವಜನಿಕ ಸಭೆಗಳಲ್ಲಿ ಸುಟ್ಟರು. ಎಂದರೆ ಎಲ್ಲ ಶೂದ್ರರೂ ಸ್ಮೃತಿಶ್ರುತಿಗಳನ್ನು ಮನ್ನಿಸುತ್ತಾರೆಂಬುದೂ ಸರಿಯಲ್ಲ.

**ಕಾನೂನು, ಕೋರ್ಟು ಹೇಳುವುದೇನು ?**

ಸ್ವತ್ತಿಗೆ ಉತ್ತರಾಧಿಕಾರಿ, ವಿವಾಹ ಇತ್ಯಾದಿಗಳನ್ನು ಕುರಿತ ೧೯೫೫-೫೬ರ ನಾಲ್ಕು ಹಿಂದೂಕಾಯಿದೆಗಳಿದ್ದು, ಯಾರ್‍ಯಾರಿಗೆ ಇವು ಅನ್ವಯಿಸುತ್ತದೆಂಬ ಬಗ್ಗೆ ಒಂದೇ ರೀತಿಯ ವಿಧಿ (ಸೆಕ್ಷನ್) ಈ ನಾಲ್ಕೂ ಕಾಯಿದೆಗಳಲ್ಲಿದೆ. ಇದರಂತೆ (೧) ಹಿಂದು, ಬೌದ್ಧ, ಜೈನ ಮತ್ತು ಸಿಖ್ ''ಧರ್ಮ''ದವರಿಗೂ, (೨) ಮುಸ್ಲಿಮ್, ಕ್ರೈಸ್ತ, ಪಾರ್ಸಿ ಮತ್ತು ಯಹೂದ್ಯರಲ್ಲದ ಭಾರತೀಯರೆಲ್ಲರಿಗೂ ಇವು ಅನ್ವಯಿಸುತ್ತವೆ. ಅಲ್ಲದೆ, (೩) ಪರಿಶಿಷ್ಟ ವರ್ಗಗಳವರಿಗೆ (ಎಸ್.ಟಿ.) ಕೇಂದ್ರ ಸರ್ಕಾರ ಸೂಕ್ತ ನೋಟಿಫಿಕೇಶನ್ ಹೊರಡಿಸಿದಲ್ಲಿ ಮಾತ್ರವೇ ಈ ಕಾಯಿದೆಗಳು ಅನ್ವಯಿಸುತ್ತವೆ. ಎಂದರೆ ಹಿಂದು ಧರ್ಮೀಯರು ಬೇರೆ; ಹಿಂದು ಜನಾಂಗ ಬೇರೆ ಎಂಬುದು ಸ್ಪಷ್ಟವಾಯಿತು. ಅಲ್ಲದೆ ಪರಿಶಿಷ್ಟ ವರ್ಗ ಹಿಂದು ಜನಾಂಗಕ್ಕೂ ಸೇರದವರು ಎಂದಾಯಿತು. ಜತೆಗೆ ಹಿಂದುಧರ್ಮ ಅಥವಾ ಮತಕ್ಕೆ ಸ್ಪಷ್ಟ ವ್ಯಾಖ್ಯಾನ (ಡೆಫೆನಿಶನ್) ವಿಲ್ಲವಷ್ಟೇ ಅಲ್ಲ; ಅದು ಸಾಧ್ಯವೂ ಇಲ್ಲ ಎಂಬುದು ಸ್ಪಷ್ಟವಾಯಿತು.

'ಹಿಂದು' ಶಬ್ದದ ಅರ್ಥ ಕುರಿತ ಪ್ರಶ್ನೆ ಸುಪ್ರೀಮ್ ಕೋರ್ಟಿನ ಮುಂದೆ ೧೯೬೬, ೧೯೬೯ ಮತ್ತು ೧೯೭೭ರಲ್ಲಿ ಬಂದಿದ್ದು ಆ ತೀರ್ಪುಗಳಲ್ಲಿ ಹಲವು ಖ್ಯಾತ ವಿದ್ವಾಂಸರನ್ನು ಉಲ್ಲೇಖಿಸಲಾಗಿದೆ. ಈ ಶಬ್ದಕ್ಕೆ ವ್ಯಾಖ್ಯೆ ಸಾಧ್ಯವಿಲ್ಲವೆಂದ ಕೋರ್ಟು, ಇದನ್ನು ಧರ್ಮ (ರಿಲಿಜನ್) ಎನ್ನುವುದಕ್ಕಿಂತ ಒಂದು ಜೀವನಶೈಲಿ ಎನ್ನುವುದು ಸೂಕ್ತ ಎಂದಿದೆ.

**ಮತಾಂತರ ನಿಷೇಧಕ್ಕಾಗಿ ಬಲಾತ್ಕಾರ**

ದ್ವಿಜರಿಂದ ಎಸ್.ಟಿ.ಗಳವರೆಗೆ ಹಲವು ವರ್ಗಗಳಿದ್ದು, ಯಾವ್ಯಾವ ವರ್ಗಗಳ ಎಷ್ಟೆಷ್ಟು ಜನ ''ಬಲಾತ್ಕಾರ''ದಿಂದ ಮತಾಂತರವಾಗಿದ್ದಾರೆಂಬ ಮಾಹಿತಿಯನ್ನು ಮುಂದಿಡದೆ ಮತಾಂತರ ನಿಷೇಧ ಕಾಯಿದೆಗಾಗಿ ಒತ್ತಡ ತರುತ್ತಿರುವುದೇಕೆ ? ಬಲಾತ್ಕಾರದಿಂದಾಗಿ ಕ್ರಿಸ್ತನನ್ನೋ ಕುರಾನನ್ನೋ ಆರಾಧಿಸಲೊಪ್ಪಿದವರು ಕುರಿಗಳಿಗಿಂತ ಭಿನ್ನರಾಗಿರಲಾರರು. ಪೇಜಾವರರನ್ನೊಳಗೊಂಡು ಎಲ್ಲ ಸ್ವಾಮಿಗಳೂ ಯಾವ್ಯಾವ ಉಪಜಾತಿಗಳಿಂದ ಉತ್ತರಾಧಿಕಾರಿಯನ್ನು ಆರಿಸುತ್ತಾರೋ ಆಯಾ ಉಪಜಾತಿಗಳಿಗಷ್ಟೇ ಜಗದ್ಗುರುಗಳು ಎಂಬುದನ್ನು ಅರಿಯದವರೂ ಕುರಿಗಳೇ. ಶ್ರುತಿಸ್ಮೃತಿ, ದೇವಸ್ಥಾನ ಸಂಸ್ಕೃತಿಗಳಿಂದ ಶೋಷಿಸಲ್ಪಟ್ಟ ವರ್ಗಗಳಿಗೆ ತಿಳುವಳಿಕೆ ಮೂಡುತ್ತಿದೆ. ಅವರಿಗೆ ದ್ವಿಜರ ಧರ್ಮವನ್ನು ಪ್ರೀತಿಸಲಾಗಲಿ ಮುಸ್ಲಿಮ್-ಕ್ರೈಸ್ತರನ್ನು ದ್ವೇಷಿಸಲಾಗಲಿ ಕಾರಣಗಳಿಲ್ಲ. ಹಾಗಾಗಿ ಮತಾಂತರವೆಂಬ ಕೊಳ್ಳಿದೆವ್ವವನ್ನು ಸೃಷ್ಟಿಸಲೇಬೇಕಾದ ಅನಿವಾರ್ಯತೆ ವೈದಿಕರಿಗೆ ಬಂದಿದೆ.

ಪಿ. ಎಸ್. ಶ್ರೀಧರಮೂರ್ತಿ
ನಂ. ೩೫, ಗಾಂಧಿಬಜಾರ್, ಬೆಂಗಳೂರು - ೫೬೦ ೦೦೪



ನಭಾವಲೋಕನ

# ಗ್ರಹಗಳ ಗುಂಪುಗಾರಿಕೆ

ಕಳೆದ ಡಿಸೆಂಬರ್ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಗ್ರಹಗಳು ಒಂದು ತಿಂಗಳ ರಜೆಯ ನಂತರ ಬೆಳಗಿನ ಪಾಳಿಗೆ ಬಂದಿವೆ. ಬೆಳಗಿನ ಜಾವ ಪೂರ್ವ ದಿಕ್ಕಿಗೆ ದೃಷ್ಟಿ ಹರಿಸಿದರೆ ಮೊದಲವಾರ ಒಂದೇ ಗ್ರಹ ಕಾಣುವುದು. ಅದು ಬುಧ. ಆಮೇಲೆ ಮೊದಲವಾರದಲ್ಲಿ ಎರಡೇ ಚುಕ್ಕೆಗಳು ಇರುತ್ತವೆ. ಒಂದು ಗುರು ಇನ್ನೊಂದು ಬುಧ. ಗುರು ದಿಗಂತದ ಅಂಚಿನಲ್ಲಿ ಕಾಣುತ್ತದೆ. ಆದರೆ ಸಾಕಷ್ಟು ಪ್ರಕಾಶಮಾನವಾಗಿ ಇರುವುದರಿಂದ ಪತ್ತೆ ಮಾಡಬಹುದು. ಆಮೇಲೆ ಮೂರು ಚುಕ್ಕೆಗಳು ಕಾಣುವುವು. ಯಾವುದು ಯಾವ ಗ್ರಹ? ಇದು ಸಮಸ್ಯೆ. ಇಲ್ಲಿದೆ ಉತ್ತರ. ೧೭ರ ಬೆಳಗಿನ ಜಾವ ಮಂಗಳ ಗುರು ಜೋಡಿಯಾಗುವುವು. ಕೆಂಪು ಗ್ರಹ; ಸುಲಭವಾಗಿ ಗುರುತಿಸಬಹುದು. ಮುಂದೆ ಬುಧ ಬೇಗ ಬೇಗ ದಿಗಂತದತ್ತ ಸರಿಯತೊಡಗುವುದು. ೨೨ರಂದು ಬಾಲಚಂದ್ರ ಬುಧದ ಪಕ್ಕ ಕಾಣುವುದು. ೨೩ರಂದು ಗುರು, ಮಂಗಳ ಮತ್ತು ಚಂದ್ರ ಗುಂಪುಗೂಡುವುವು. ವಾಸ್ತವದಲ್ಲಿ ಚಂದ್ರ ಆಚ್ಛಾದನೆ ಉಂಟುಮಾಡುತ್ತದೆ; ಅಂದರೆ ಬುಧ ಮತ್ತು ಗುರು ಗ್ರಹಗಳನ್ನು ಮರೆಮಾಡುತ್ತದೆ. ಆದರೆ ನಮಗೆ ಅದು ಕಾಣುವುದಿಲ್ಲ. ಆ ಮುಂದಿನ ದಿನ ಬುಧ - ಗುರು ಜೋಡಿಯಾಗುವುವು. ಹೀಗೆ ೧೭ರಿಂದ ೨೪ರವರೆಗಿನ ಅವಧಿಯಲ್ಲಿ ಈ ಗ್ರಹಗಳ ಗುಂಪುಗಾರಿಕೆ ನೋಡಲು ಮಕ್ಕಳ ಆಟದಂತೆ ಕಾಣುವುದು. ಕ್ಯಾಮೆರಾ ಸಜ್ಜು ಮಾಡಿಟ್ಟುಕೊಂಡು ಈ ಆಟವನ್ನು ಸೆರೆ ಹಿಡಿಯಬಹುದು.

ನಿಮ್ಮ ದೃಷ್ಟಿಶಕ್ತಿಗೆ ಸವಾಲು ಎಸೆಯುವ ಇನ್ನೊಂದು ಘಟನೆ ಈ ತಿಂಗಳು ನಡೆಯಲಿದೆ. ೯ರ ಹುಣ್ಣಿಮೆಯ ಚಂದ್ರನನ್ನು ಗಮನಿಸಿ. ಬಹಳ ಸೂಕ್ಷ್ಮವಾಗಿ ನೋಡಿದರೆ ಅಂಚಿನಲ್ಲಿ ಸ್ವಲ್ಪ ಮಸಿ ಮೆತ್ತಿದಹಾಗೆ ಕಾಣಬಹುದು. ಮೋಡವಿರುವುದರಿಂದ ಹಾಗೆ ಕಾಣುತ್ತಿರಬಹುದು ಎಂದು ಭಾವಿಸಬೇಡಿ. ಅದು ಭೂಮಿಯ ನೆರಳಿನ ಅಂಚನ್ನು ಹಾದು ಹೋಗುತ್ತಿದೆ. ಇದೂ ಗ್ರಹಣವೇ; ಆದರೂ ಅದು ನೆರಳಿನ ದಟ್ಟಭಾಗವನ್ನು ದಾಟದೇ ಸರಿದು ಹೋಗುವುದರಿಂದ ಬರಿಗಣ್ಣಿಗೆ ಗೋಚರವಾಗುವುದಿಲ್ಲ. ಬೆಳಕಿನಲ್ಲಿ ಏನೂ ವ್ಯತ್ಯಾಸವೂ ಆಗುವುದಿಲ್ಲ. ಇದಕ್ಕೆ ಪಾರ್ಶ್ವಛಾಯಾಗ್ರಹಣ ಎಂದು ಹೆಸರು. ಇದನ್ನು ಬರಿಗಣ್ಣಿನಿಂದ ಗುರುತಿಸುವುದು ಸವಾಲೇ ಎನ್ನಬಹುದು.

ಸಂಜೆ ಕೋರೈಸುವ ಗ್ರಹ ಶುಕ್ರ. ೨೭ರಂದು ಚಂದ್ರ ಇದನ್ನು ಮುಚ್ಚಿಹಾಕುವ ಆಚ್ಛಾದನೆ ಇದೆ. ಆದರೆ ಆ ನೋಟ ನಮಗಿಲ್ಲ. ಶನಿ ಗ್ರಹ ಸುಮಾರು ಮಧ್ಯರಾತ್ರಿಗೆ ಉದಯಿಸುತ್ತದೆ. ೧೧ರಂದು ಚಂದ್ರನ ಪಕ್ಕ ಇದು ಕಾಣುತ್ತದೆ. ಬೆಳಗಿನ ಜಾವದ ಹೊತ್ತಿಗೆ ಸುಮಾರು ನೆತ್ತಿಯ ಮೇಲೆ ಕಾಣುತ್ತದೆ. ಒಂದೆರಡು ಧೂಮಕೇತುಗಳು ಬರಿಗಣ್ಣಿಗೆ ಕಾಣುವಂತೆ ಪ್ರಕಾಶ ಪಡೆಯುವ ಸಾಧ್ಯತೆ ಇದೆ. ಆದರೆ ಹುಡುಕುವುದು ಕಷ್ಟವೇ ಎನ್ನಬಹುದು.

ಉ
ಪೂ
ಪ
ದ
ಕುಂತಿ
ವಿಜಯಸಾರಥಿ
ಪಾರ್ಥ
ದ್ರೌಪದಿ
ಮಿಥುನ
ವೃಷಭ
ಮೇಷ
ಮೀನ
ಶುಕ್ರ
ಮಹಾವ್ಯಾಧ
ತಿಮಿಂಗಿಲ
ಲುಬ್ಧಕ
ಮಹಾಶ್ವಾನ
ವೈತರಣಿ
ಅಗಸ್ತ್ಯ



ಫೆಬ್ರವರಿ ೨೩ನೇ ತಾರೀಖು ಮುಂಜಾನೆ ಪೂರ್ವದತ್ತ ನೋಡಿದಾಗ ಕಾಣಿಸುವ ಗುರು, ಅಂಗಾರಕ, ಬುಧ ಮತ್ತು ಚಂದ್ರ

## ಖಗೋಳ ದಿನಚರಿ

೩ ಚಾಂದ್ರಮಾಸದ ಮೊದಲ ಪಾದ

೯ ಹುಣ್ಣಿಮೆ ಪಾರ್ಶ್ವ ಛಾಯಾಗ್ರಹಣ ೧೮:೦೭ರಿಂದ ೨೨:೧೦ರವರೆಗೆ

೧೧ ಶನಿ-ಚಂದ್ರ ಜೋಡಿ *

೧೩ ಬುಧಗ್ರಹದ ಗರಿಷ್ಠ ಕೋನೋನ್ನತಿ *

೧೬ ಚಾಂದ್ರಮಾಸದ ಕೊನೆಯಪಾದ

೧೭ ಮಂಗಳ-ಗುರು ನಡುವೆ ಕನಿಷ್ಠ (ಅರ್ಧ ಡಿಗ್ರಿ) ಕೋನ *

೨೨ ಬುಧ-ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)

೨೩ ಗುರು-ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)
ಮಂಗಳ ಚಂದ್ರ ಜೋಡಿ

೨೪ ಬುಧ - ಗುರು ನಡುವೆ (ಅರ್ಧ ಡಿಗ್ರಿ) ಕೋನ *

೨೫ ಅಮಾವಾಸ್ಯೆ ೦೭:೦೫ಕ್ಕೆ

೨೭ ಶುಕ್ರ-ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)

ಮಾರ್ಚ್ ೧ ಬುಧ - ಮಂಗಳ ಜೋಡಿ *

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಧರ್ಮ ನಿರಪೇಕ್ಷತೆ ಮತ್ತು ವಚನಕಾರರು

ಹನ್ನೆರಡನೆಯ ಶತಮಾನದ ವಚನಕಾರರ ಸಾಮಾಜಿಕ ಚಳುವಳಿಯನ್ನು ಸುವರ್ಣಯುಗವೆಂದು ಕರೆಯಬಹುದು. ಆ ಚಳುವಳಿಯ ಬೆಳಕನ್ನು ಬೆಂಕಿಯನ್ನಾಗಿ ಪರಿವರ್ತಿಸಿ, ಸಾಮಾನ್ಯರ ಬದುಕನ್ನು ಸುಟ್ಟು ತಮ್ಮ ಬೇಳೆ ಬೇಯಿಸಿಕೊಂಡ ಬಂಡವಾಳಶಾಹಿ ಮತ್ತು ಪುರೋಹಿತ ವರ್ಗ ಇಂದಿಗೂ ತನ್ನ ಅಟ್ಟಹಾಸದ ವೈಭವದಲ್ಲಿಯೇ ಮೆರೆಯುತ್ತಿದೆ. ಇದನ್ನು ತಡೆಯುವಲ್ಲಿ ಸಾಮಾನ್ಯ ಜನರ, ಜನ ಸಂಘಟನೆಗಳು ಸಫಲತೆಯನ್ನು ಕಂಡಂತೆ ಕಾಣಿಸಿದರೂ ಅದರ ವಿಫಲತೆಯೇ ಎದ್ದು ಕಾಣುತ್ತದೆ.

ಅಂದು ಜನಸಾಮಾನ್ಯರು ಸಾಮ್ರಾಜ್ಯಶಾಹಿಗಳ ಬಂಧನದಲ್ಲಿ ಯಾತನೆ ಅನುಭವಿಸುತ್ತಿದ್ದರೆ, ಇಂದು ಬಂಡವಾಳಶಾಹಿಗಳ ಕೊಂಡವಾಡೆಯಲ್ಲಿ ಬಳಲುತ್ತಿದ್ದಾರೆ. ಇದು ಶ್ರೀಸಾಮಾನ್ಯನ ಅರಿವಿಗೆ ಬಾರದಿರುವುದು ಇನ್ನೂ ಆಶ್ಚರ್ಯಕರ ಸಂಗತಿಯಾಗಿದೆ. ಹಾಗೆಯೇ ಜನಸಾಮಾನ್ಯರ ಆತ್ಮಗಳು ಅಂದು, ಇಂದು, ಎಂದೆಂದಿಗೂ ಬಂಡವಾಳಶಾಹಿಗಳ ಮತ್ತು ಪುರೋಹಿತರ ಬಂದೀಖಾನೆಯಲ್ಲಿ ತಳಮಳಿಸುತ್ತಿವೆ. ಬಂಡವಾಳಶಾಹಿಗಳು ರಾಜಕೀಯ ನಾಯಕರಾಗಿ ಅಧಿಕಾರಿಗಳಾಗಿ ಬಲಾತ್ಕಾರದಿಂದ ಜನರನ್ನು ಸುಲಿಯುತ್ತಿದ್ದರೆ ಪುರೋಹಿತಶಾಹಿಗಳು ಸ್ವರ್ಗ ನರಕ ಎಂಬ ಭಯ ಹುಟ್ಟಿಸಿ ಕಳ್ಳ ಸುಳ್ಳ ದೇವರುಗಳನ್ನು ಸೃಷ್ಟಿಸಿ ಕೊಳ್ಳೆ ಹೊಡೆಯುತ್ತಿದ್ದಾರೆ. ಇದು ತ್ರಿಕಾಲಾಬಾಧಿತ ಸತ್ಯ.

ಮೇಲಿನ ವಿಷವರ್ತುಲದಿಂದ ಪಾರಾಗಲು ಮನುಷ್ಯ ಮೊದಲು ತಾನು ಸ್ವಾವಲಂಬಿಯಾಗಿ ಬದುಕಲು ಕಲಿಯಬೇಕು, ಸದಾ ಕಾಲವೂ ತಾನು ಪ್ರಸನ್ನ ಚಿತ್ತದಿಂದ ಇರಲು ರೂಢಿಸಿಕೊಳ್ಳಬೇಕು. ಭೀತಿಯಿಂದ ಮುಕ್ತನಾಗಬೇಕು. ಸತ್ಯವನ್ನು ಪ್ರೀತಿಸಬೇಕು. ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಬೇಕು. ಸಾರ್ವಜನಿಕರಲ್ಲಿ ಪ್ರೀತಿ ವಿಶ್ವಾಸವನ್ನು ಹೊಂದಿರಬೇಕು, ಪರಿಸರ ರಕ್ಷಣೆಯ ಬಗ್ಗೆ ಬಹಳ ಕಾಳಜಿ ಇರಬೇಕು. ಶ್ರೇಷ್ಠ ವ್ಯಕ್ತಿಗಳ ಚಿಂತನೆಗಳನ್ನು ಮೆಲುಕುಹಾಕುತ್ತಿರಬೇಕು. ಉತ್ತಮ ಕಾರ್ಯಕ್ರಮಗಳ ಕೃಷಿ ಸದಾ ನಡೆಯುತ್ತಿರಬೇಕು. ವೈಚಾರಿಕ ಮತ್ತು ವೈಜ್ಞಾನಿಕ ವಿಚಾರದಲ್ಲಿ ಸದಾ ಸನ್ನದ್ಧನಾಗಿರಬೇಕು. ಸಂಕಟದಲ್ಲಿ ಸಿಕ್ಕವರನ್ನು ಬರಿ ಕನಿಕರದಿಂದ ನೋಡಿದರೆ ಸಾಲದು. ಅವರಿಗೆ ನೆರವು ನೀಡಿ ರಕ್ಷಿಸುವುದನ್ನು ಕಲಿಯಬೇಕು. ಹೀಗೆ ಬದುಕನ್ನು ರೂಪಿಸುವುದರಿಂದ ಪುರೋಹಿತಶಾಹಿಗಳಿಂದ ತಾನು ಪಾರಾಗಿ ಇತರರನ್ನು ಪಾರುಮಾಡಲು ಸಾಧ್ಯವಾಗುತ್ತದೆ. ಹೀಗೆ ನೈತಿಕತೆಯ ನೆಲೆಗಟ್ಟಿನ ಮೇಲೆ ನಿಂತು, ಲೋಕ ಕಲ್ಯಾಣ ಸಾಧಿಸುವುದೇ ವಚನಕಾರರ ಮುಖ್ಯ ಗುರಿ. ಅಲ್ಲದೆ ಭೂತ, ಪ್ರೇತ, ದೇವರು, ದೆವ್ವ, ಜಗದ್ಗುರು, ಪಂಚಾಂಗ, ಪುರೋಹಿತ ಯಾರ ನೆರವೂ ಇಲ್ಲದೆ ಸತ್ಯ ಅಹಿಂಸೆ ಪ್ರೀತಿ ದಯೆ ಸೇವೆ ಮೊದಲಾದ ನೈತಿಕತೆಯ ನೆಲೆಗಟ್ಟಿನ ಮೇಲೆ ನಾಗರಿಕ ಸಮಾಜವನ್ನು ಕಟ್ಟುವುದು ಸಾಧ್ಯವಿದೆ ಎಂಬುದನ್ನು ವಚನಕಾರರು ತೋರಿಸಿಕೊಟ್ಟಿದ್ದಾರೆ. ಹೀಗೆ ಬಸವಣ್ಣನವರು ಸಾಮಾಜಿಕ ಮತ್ತು ಧಾರ್ಮಿಕ ವಿಷವರ್ತುಲದಿಂದ ಮತ್ತು ಆರ್ಥಿಕ ಹೊರೆಯಿಂದ ಪಾರಾಗುವ, ಶೋಷಣೆಯಿಲ್ಲದ ನಾಗರಿಕ ಸಮಾಜವನ್ನು ಕಟ್ಟುವ ರೀತಿಯನ್ನು ಈ ಕೆಳಗಿನ ವಚನದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ :



ಚನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ
ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲ ಸಂಗಮ ದೇವ ಸಾಕ್ಷಿಯಾಗಿ.

ಇಲ್ಲಿ ಚನ್ನಯ್ಯನ ಮನೆಯ ಆಳಿನ ಮಗ ಮತ್ತು ಕಕ್ಕಯ್ಯನ ಮನೆಯ ಆಳಿನ ಮಗಳು ಈ ಇಬ್ಬರೂ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಮೀರಿ, ಪಂಚಾಂಗ ಪುರೋಹಿತರನ್ನು ಧಿಕ್ಕರಿಸಿ ಸತ್ಯ, ಪ್ರೇಮ ಮತ್ತು ನಾಗರಿಕತೆಯ ಶಿಸ್ತು ಎಂಬ ನೈತಿಕ ನೆಲೆಗಟ್ಟಿನ ಮೇಲೆ ನಿಂತು, ಸ್ವಚ್ಛಂದವಾಗಿ ಕೂಡಿಕೊಂಡ ವಧು ವರರು ತಮ್ಮ ದಾಂಪತ್ಯ ಜೀವನಕ್ಕೆ ಎಂದೆಂದಿಗೂ ಚ್ಯುತಿ ಬಾರದಂತೆ ವಿವಾಹ ಬಂಧನಕ್ಕೆ ಒಳಗಾದವರು. ಆರ್ಥಿಕ ಹೊರೆ ಇಲ್ಲದ, ಸಾಮಾಜಿಕ ಬಂಧನವಿಲ್ಲದ, ಶೋಷಣೆಯ ಮಾತು ಗೊತ್ತಿಲ್ಲದ ಇಂತಹ ಮಹಾನ್ ದಂಪತಿಗಳ ಉದರದಿಂದ ಜನಿಸಿದವನು ನಾನು ಎಂದು ಹೇಳಿ ಕೊಳ್ಳುತ್ತಾನೆ ಬಸವಣ್ಣ. ಹಕ್ಕಿ ಬಾಳಬನದಲ್ಲಿ ಸ್ವಚ್ಛಂದವಾಗಿ ಹಾರುತ್ತ, ಹಾಡುತ್ತ, ನಲಿಯುತ್ತ, ಕುಣಿಯುತ್ತ ಬಾಳ ಸಂಗಾತಿಯನ್ನು ಅರಸಿಕೊಂಡು ಜೊತೆಯಾಗಿ ಯಾರ ಹಂಗೂ ಇಲ್ಲದೆ, ತನ್ನದೇ ಆದ ಗೂಡನ್ನು ಕಟ್ಟಿ ವಂಶಾಭಿವೃದ್ಧಿಯನ್ನು ಮಾಡಿಕೊಳ್ಳುತ್ತ, ತನ್ನ ಪರಿಸರವನ್ನು ಕಾಪಾಡಿಕೊಳ್ಳುತ್ತ ಸಾರ್ಥಕ ಬದುಕಿನ ದಾರಿಯನ್ನು ತೋರಿಸುತ್ತದೆ ಅಲ್ಲವೆ ? ಇಂತಹ ಸ್ವತಂತ್ರ ಬದುಕಿನ ಮಾರ್ಗದರ್ಶಕ ಬಸವಣ್ಣ ಎಂತಹ ಸ್ವಾತಂತ್ರ್ಯಪ್ರಿಯನೆಂಬುದು ಮುಖ್ಯ.

ಈ ಸಂಸಾರದ ಜೀವರಾಶಿಗಳೆಲ್ಲ ಪ್ರಕೃತಿಯ ನಿಯಮ ಗಳಿಗನುಸಾರವಾಗಿ ಅತ್ಯಂತ ಸಹಜವಾಗಿ ವರ್ತಿಸು ತ್ತಿರುವಾಗ ಮನುಷ್ಯ ಮಾತ್ರ ಶೋಷಣೆ ಮಾಡುತ್ತ, ಶೋಷಣೆಗೆ ಒಳಗಾಗುತ್ತ, ಪ್ರಕೃತಿಯ ನಿಯಮಕ್ಕೆ ವಿರುದ್ಧವಾಗಿ, ಅಸಹಜವಾಗಿ ವರ್ತಿಸುತ್ತಿರುವುದೇಕೆ ? ಪ್ರಾಣಿಗಳಿಗಿಲ್ಲದ ಬುದ್ಧಿ ಮನುಷ್ಯನಿಗಿರುವಾಗ ಅವನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿ ನಡೆದುಕೊಳ್ಳುತ್ತಾನೆ. ಅದಕ್ಕೆ ಕಾರಣ ಇಲ್ಲದಿಲ್ಲ. ವಿದ್ಯೆಯಿಂದ ತನ್ನ ಬುದ್ಧಿಯಿಂದ ಪುರೋಹಿತವರ್ಗ ನರಕಗಳನ್ನು ಸೃಷ್ಟಿಸಿ ವಿದ್ಯೆಯಿಲ್ಲದ ಮೂಢ ಜನರನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತದೆ.

ಕೆ. ಡಿ. ಮೊತ್ತೂರೆ

# ಕಾಡು ಕುದುರೆ ಮತ್ತು ಹುಡುಗಿ

ಏಕಾಏಕಿ ಒಂದು ದಿನ
ಆ ಹುಡುಗಿ ಕೆಂಪಾದಳು
ಬಂಪಕೆಯ ಬಯಲಿನ
ಹರೆಯದ ನಾಳಿಗೆ ಕಂಪಾದಳು
ಕಾಮನ ಬಿಲ್ಲಿನ ಕಂಗಳಿಗೆ
ಬಣ್ಣದ ಗರಿಯಾದಳು
ಅಷ್ಟೇ ಅಲ್ಲ ಅವರಪ್ಪನ
ಕಣ್ಣಿನ ಬೆಂಕಿಗೆ ಗುರಿಯಾದಳು
ಆಗ ಶುರುವಾಯಿತು ನೋಡಿ
ದಿನಾ ಹಗಲು ರಾತ್ರಿ
ಭಯ ಸಂಶಯದ ವರಾತ
ಕಾವಲಿಗೆ ನಿಂತ ಅವರಪ್ಪ
ಥೇಟ್ ಶಿಲಾಯುಗದ ಕಿರಾತ
ಕಿಟಕಿ ಬಾಗಿಲುಗಳಿಗೆ ಪರದೆ
ಎಳೆದು ಮೊಳೆ ಜಡಿದ
ಹೊರಗೆ ಉಕ್ಕಿನ ತಂತಿಯ
ಬೇಲಿ ಬಿಗಿದ
ಕೆನೆಯುವ ಆ ಕಾಡುಕುದುರೆ
ಬರದಿರಲೆಂದು ಏನೇನು
ಮಾಡಬೇಕಿತ್ತೋ ಎಲ್ಲಾ ಮಾಡಿದ
ಆದರೆ ಬೇಲಿ ಇರುವುದೇ
ಹಾರಿ ಜಿಗಿಯುವುದಕ್ಕಲ್ಲವೆ ?

ಆ ಹುಡುಗಿ ಹಾಗೇ ಮಾಡಿದಳು
ಬೇಲಿಯಾಚೆ ಬಂದ ಕಾಡು
ಕುದುರೆಯೊಂದಿಗೆ ಹೇಳದೆ
ಕೇಳದೆ ಹಾರಿಹೋದಳು
ಆ ಬೇಲಿಮನೆಯ ಬದಿಯಲ್ಲೇ
ಬಯಲು ಮನೆಯ ತಂದೆಯಿದ್ದ

ಕಾಲ ಉಕ್ಕಿ ಹರಿದ ತನ್ನ ಮಗಳಿಗೆ
ನೀಡಿದ ಸಂಸ್ಕಾರದ ಲಗಾಮು
ಮತ್ತು ಸಂಯಮದ ಹಲ್ಲಣ
ಜೊತೆಗೆ ಒಂದು ಮಾತು
ಕುತ್ತಿಗೆಯೂ ನಿನ್ನದೇ
ಕತ್ತಿಯೂ ನಿನ್ನದೇ

ಊರಿಗೆ ಊರೇ ನಿಂತು
ಬಿಟ್ಟಿತು ತಲ್ಲಣಗೊಂಡು
ಈ ಹುಡುಗಿ ಮತ್ತದೇ
ಕಾಡುಕುದುರೆಯ ಹದ
ಮುರಿದು ಬೇಕಾದ ಹಾಗೆ
ಸವಾರಿ ಮಾಡುವ ಪರಿಯ ಕಂಡು.

ಆರ್. ಎಸ್. ಸಂಕನಾಳ
ಗಳತಗಾ ಗಾಯತ್ರೀನಂದನ
ಅಂಚೆ : ಗಳತಗಾ - ೫೯೧ ೨೦೯
ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ

ಪುರಾಣ ಪುಣ್ಯಕಥೆಗಳೆಂದು ಸುಳ್ಳು ಕಥೆಗಳನ್ನು ಹೆಣೆದು ಸಾವಿರಾರು ವರ್ಷಗಳಿಂದ ಸುಲಿಗೆ ಮಾಡುತ್ತಲೇ ಬಂದಿದೆ. ಮನುಷ್ಯನಿಗಿರುವ ಸಹಜವಾದ ಮತಿಯನ್ನು ಕಡೆಗಣಿಸಿ, ಇಲ್ಲದ ಮತವನ್ನು ಸೃಷ್ಟಿಸಿ ಈ ಮಾನವ ಕುಲವನ್ನು ನರಕಕ್ಕೆ ತಳ್ಳಿದೆ.

ಉರಿಲಿಂಗ ಪೆದ್ದಿಗಳ ಧರ್ಮಪತ್ನಿ ತನ್ನ ಕಾಯಕದಿಂದ ತನ್ನ ಕಾಯವನ್ನೆ ಕೈಲಾಸ ಮಾಡಿಕೊಂಡು ತನ್ನ ಅಂಗಾಂಗಗಳೇ ಶಿವನ ವಾಸಸ್ಥಳವೆಂದು ತನ್ನಲ್ಲಿಯೇ ಶಿವನನ್ನು ಕಂಡುಕೊಳ್ಳುತ್ತಾಳೆ.

*ಎನ್ನ ಅಂಗದಲ್ಲಿ ನಿನಗೆ ಮಜ್ಜನ*
*ಎನ್ನ ಲಲಾಟದಲ್ಲಿ ನಿನಗೆ ಗಂಧಾಕ್ಷತೆ*
*ಎನ್ನ ತುರುಬಿನಲ್ಲಿ ನಿನಗೆ ಕುಸುಮ ಪೂಜೆ*
*ಎನ್ನ ನೇತ್ರದಲ್ಲಿ ನಿನಗೆ ನಾನಾ ರೂಪು ವಿಚಿತ್ರ ವಿನೋದ*
*ಎನ್ನ ಶ್ರೋತ್ರದಲ್ಲಿ ನಿನಗೆ ಪಂಚವಾದ್ಯ ಕೇಳಿರೇ*
*ಎನ್ನ ನಾಸಿಕದಲ್ಲಿ ಸುಗಂಧ ಧೂಪ ಪರಿಮಳ*
*ಎನ್ನ ಜಿಹ್ವೆಯಲ್ಲಿ ನಿನಗೆ ಷಡ್ರಸಾನ್ನ ನೈವೇದ್ಯ*
*ಎನ್ನ ತ್ವಕ್ಕಿನಲ್ಲಿ ನಿನಗೆ ವಸ್ತ್ರಾಭರಣ ಅಲಂಕಾರ ಪೂಜೆ*
*ಎನ್ನ ಸತ್‌ಚಿದಾನಂದನೆಂಬ ಸಜ್ಜೆ ಗೃಹದಲ್ಲಿ ನೀನು*
*ಸ್ಪರ್ಶನಂಗೈದು*
*ನೆರೆದಿಪ್ಪೆಯಾಗಿ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.*

ಹೀಗೆ ನನ್ನೊಳಗೆ ನೀನು, ನಿನ್ನೊಳಗೆ ನಾನು ಎಂದು ಹೇಳಿ ನಾನು ಮತ್ತು ನೀನು ಅಂದರೆ ಜ್ಞಾನ ಮತ್ತು ಕಾಯಕ, ಇವು ಬೇರೆ ಬೇರೆ ಅಲ್ಲವೆಂದು ಉರಿಲಿಂಗ ಪೆದ್ದಿಗಳ ಧರ್ಮಪತ್ನಿ ಅಭಿಪ್ರಾಯಪಡುತ್ತಾಳೆ. ಇನ್ನೊಂದು ವಚನದಲ್ಲಿ ನೋಡೋಣ :

*ರಸವನರಿಯುವುದಕ್ಕೆ ಜಿಹ್ವೆಯಾಗಿ ಬಂದು*
*ಗಂಧವನರಿಯುವುದಕ್ಕೆ ನಾಸಿಕವಾಗಿ ಬಂದು*
*ರೂಪವನರಿಯುವುದಕ್ಕೆ ನೇತ್ರವಾಗಿ ಬಂದು*
*ಶಬ್ದವನರಿಯುವುದಕ್ಕೆ ಶ್ರೋತ್ರವಾಗಿ ಬಂದು*
*ಸ್ಪರ್ಶವನರಿಯುವುದಕ್ಕೆ ತ್ವಕ್ಕಾಗಿ ಬಂದು*
*ಇಂತೆನ್ನ ಘಟದ ಮಧ್ಯದಲ್ಲಿ ನಿಂದು*
*ಪಂಚವಕ್ತ್ರನಾದೆಯಲ್ಲ*
*ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವೇ*

– ಎಂದು ಶಿವಲೆಂಕ ಮಂಚಣ್ಣನವರು ಈ ಪ್ರಪಂಚದ ಸಹಜ ಜೀವನ ನಡೆಸುವುದಕ್ಕಾಗಿಯೇ ಪಂಚೇಂದ್ರಿಯ ಗಳನ್ನು ಹೊತ್ತುಕೊಂಡು ಬಂದು ನೀನು ಅಂದರೆ ಜ್ಞಾನ, ನೀನೇ ಪಂಚೇಂದ್ರಿಯಗಳಲ್ಲಿ ಬೆರೆತು ಪಂಚವಕ್ತ್ರನಾದೆ. ಅಂದರೆ ಶಿವನಾದೆ. ಈಗ ಅದೇ ಶಿವ ನಾನಾದೆಯಲ್ಲವೇ, ಎಂದು ಹೇಳುತ್ತಾರೆ.

ಈ ಪ್ರಪಂಚದ ಬಗ್ಗೆ ಈ ಲೋಕದ ಬಗ್ಗೆ ವಚನಕಾರರ ಅಭಿಪ್ರಾಯ ಹೇಗಿದೆ ನೋಡೋಣ :

*ದೇವಲೋಕ ಮರ್ತ್ಯಲೋಕ ಬೇರಿಲ್ಲಕಾಣಿಭೋ*
*ಸತ್ಯ ನುಡಿಯುದೇ ದೇವಲೋಕ*
*ಮಿಥ್ಯ ನುಡಿಯುದೇ ಮರ್ತ್ಯಲೋಕ*
*ಆಚಾರವೇ ಸ್ವರ್ಗ ಅನಾಚಾರವೇ ನರಕ*
*ಕೂಡಲ ಸಂಗಮ ದೇವ ನೀವೇ ಪ್ರಮಾಣ.*

ಇಲ್ಲಿ ವಿಚಾರವಂತರಿಗೂ ಚಿಂತನಕಾರರಿಗೂ ವೈಜ್ಞಾನಿಕ ಬುದ್ಧಿ ಇರುವವರಿಗೂ ಸಹಜವಾಗಿ ಅರ್ಥವಾಗುವ ವಚನವಿದು. ದೇವಲೋಕ ಮರ್ತ್ಯಲೋಕ ಬೇರೆ ಬೇರೆ ಅಲ್ಲ. ಎಲ್ಲವೂ ಇದೇ ಲೋಕದಲ್ಲಿ ನಡೆಯುವ ಹುನ್ನಾರಗಳು. ಸ್ವರ್ಗ ನರಕಗಳು ಜನರ ಪ್ರತಿಭಟನೆಯನ್ನು ಪ್ರತಿಬಂಧಿಸುವ ಸಲುವಾಗಿ ಸೃಷ್ಟಿಸಿದ ಶಬ್ದಗಳು. ಇವು ಖಡ್ಗಕ್ಕಿಂತ ಹರಿತವಾದ ಆಯುಧಗಳು. ಅವರನ್ನು ಮಾನಸಿಕವಾಗಿ ಹೆದರಿಸಿ ಬೆದರಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವ ಸುಲಭದ ಉಪಾಯಗಳು. ಅವು ಮೌಲಿಕ ಜೀವನದ ಮೌಲ್ಯಗಳಲ್ಲ. ಈ ಲೋಕ ಕರ್ತಾರನ ಕಮ್ಮಟವೆಂದರೆ ಕೆಲಸ ಮಾಡುವವನ ಕಾರ್ಯಗಾರವಲ್ಲದೇ ಮತ್ತೇನೂ ಅಲ್ಲ. ಅವನ ಸನ್ನಡತೆಯೇ ಸ್ವರ್ಗ, ಅವನ ದುರ್ನಡತೆಯೇ ನರಕ. ಇದಕ್ಕೆ ನಾನು ನೀನು ಎಲ್ಲರೂ ಸಾಕ್ಷಿ. ಹೀಗೆ ವಚನಕಾರರು ತಮ್ಮ ಜೀವನ ಸಾಧನೆಯಲ್ಲಿ ಬದುಕಿನಲ್ಲಿ ದೇವರು, ಧರ್ಮ, ಮುಂತಾದ ಅದ್ಭುತ ಕಲ್ಪನೆಗಳಿಗೆ ಆಸ್ಪದಕೊಡದೆ, ನಿಜ ವೈಚಾರಿಕ ಬದುಕನ್ನು, ಆಚರಣೆಯನ್ನು, ಸಹಜತೆಯನ್ನು, ವೈಚಾರಿಕ ಚಿಂತನೆಯನ್ನು ಆಧಾರವಾಗಿಟ್ಟುಕೊಂಡು ಬದುಕಲು ಶೋಷಣಾರಹಿತ ಸಮಾಜವನ್ನು ಕಟ್ಟಲು ಹೋರಾಡಿದರೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಕೆ. ಡಿ. ಮುತ್ತೂರ
ಮಲ್ಲಮ್ಮ ನಗರ, ಮುಧೋಳ - ೫೮೭ ೩೧೩

# ಅಮರಚಿಂತರ ಕಾವ್ಯ

## ಒಂದು ಅವಲೋಕನ

ಪಾರಸಿ ಕವಿಯೊಬ್ಬ ಕಾಲಾಂತರದಲ್ಲಿ ಮರೆತುಹೋದರೂ, ಅನೇಕ ವರ್ಷಗಳ ನಂತರ ಆತನ ಕಾವ್ಯವನ್ನು ಹಾಡುವ ಬೇರೆಯವರ ಬಾಯಲ್ಲಿ ಕೇಳಿದ ಅರಸ ಅದಕ್ಕೆ ಮನಸೋತು ಎಲ್ಲೇ ಇದ್ದರೂ ಕವಿಯನ್ನು ಹುಡುಕಿಕೊಂಡು ತರುವಂತೆ ಆಜ್ಞೆ ಮಾಡುತ್ತಾನೆ. ಸೈನಿಕರು ಆತನ ಪತ್ತೆಗಾಗಿ ಹಳ್ಳಿ ಹಳ್ಳಿ ಜಾಲಾಡುತ್ತ ಹೊರಡುತ್ತಾರೆ. 'ಆ ಹಳ್ಳಿಯಲ್ಲಿ ವಾಸಿಸುತ್ತಿದ್ದ ಈ ಹಳ್ಳಿಯಲ್ಲಿ ಹೋಗಿ ನೆಲೆಸಿದ್ದ' ಎಂದು ಹೇಳಿದ ವದಂತಿಗಳ ಬೆನ್ನು ಹತ್ತಿ, ಕವಿಯನ್ನು ಅರಸುತ್ತಾ ಹೋಗುವಲ್ಲಿ ಮತ್ತೆ ನಾಕಾರು ವರ್ಷಗಳೇ ಗತಿಸುತ್ತವೆ. ಕಡೆಗೊಂದು ದಿನ ಕವಿ ಇಂಥ ಹಳ್ಳಿಯಲ್ಲಿ ನೆಲೆಸಿದ್ದಾನೆಂದು ಕರಾರುವಾಕ್ಕಾದ ಸುಳಿವು ಸಿಕ್ಕು, ಸೈನಿಕರು ಹರ್ಷಚಿತ್ತರಾಗಿ ಆ ಹಳ್ಳಿಯತ್ತ ಧಾವಿಸುತ್ತಾರೆ. ಅಗಸೆ ಬಾಗಿಲು ಪ್ರವೇಶಿಸುವ ಹೊತ್ತಿಗೆ ಎದುರಾದ ಶವಯಾತ್ರೆಗೆ ಅವಕಾಶ ಮಾಡಿಕೊಡುವಂತೆ ಪಕ್ಕಕ್ಕೆ ಸರಿದು ನಿಂತು, ನಂತರ ರಸ್ತೆ ಬದಿ ನಿಂತಿದ್ದವರಲ್ಲಿ ಕವಿಯ ವಿಳಾಸ ಕೇಳುತ್ತಾರೆ. 'ಅರೇ ಈಗ ತಾನೇ ಹೋಯಿತಲ್ಲ ಅವರದ್ದೇ ಅಂತಿಮ ಯಾತ್ರೆ' ಅಂದಾಗ ಸೈನಿಕರು ಹತಾಶರಾಗುತ್ತಾರೆ. ಮರಳಿ ಬಂದು ದೊರೆಗೆ ವಿಷಯ ತಿಳಿಸಿದಾಗ, 'ಬದುಕಿದ್ದಾಗ ಕವಿಗೆ ಏನೂ ಮಾಡಲಾಗಲಿಲ್ಲವಲ್ಲ' ಎಂದು ಅರಸನೂ ಕೈ ಕೈ ಹಿಸುಕಿಕೊಳ್ಳುತ್ತಾನೆ. ಈ ಪ್ರಸಂಗವನ್ನು ಈಗ ಇಲ್ಲಿ ನೆನಪಿಸಿಕೊಳ್ಳುವುದಕ್ಕೆ ಒಂದು ಅರ್ಥವಿದೆ.

೨೦೦೪ನೇ ಅಕ್ಟೋಬರ್ ೩೧. ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿಗೆ ನಾಡಿನ ಗಣ್ಯರನ್ನು ಆಯ್ಕೆ ಮಾಡಿದ ಪಟ್ಟಿಯನ್ನು ಹಿಂದಿನ ದಿನವಷ್ಟೇ ಪ್ರಕಟಿಸಿತ್ತು. ರಾಯಚೂರು ಜಿಲ್ಲೆಯನ್ನು ಪ್ರತಿನಿಧಿಸಿದಂತೆ ಕವಿ ಜಂಬಣ್ಣ ಅಮರಚಿಂತ, ಕೊಪ್ಪಳ ಜಿಲ್ಲೆಯನ್ನು ಪ್ರತಿನಿಧಿಸಿದಂತೆ ಕವಿ ಗವಿಸಿದ್ಧ ಬಳ್ಳಾರಿ ಅವರೂ ಸೇರ್ಪಡೆಯಾಗಿದ್ದರು. ನಾನೂ ಒಂದು ಕಾಲದಲ್ಲಿ ರಾಯಚೂರು ಜಿಲ್ಲೆಗೆ ಸೇರಿದವನೆಂಬ ಅಭಿಮಾನದಿಂದ, ಆ ಇಬ್ಬರೂ ಕವಿಗಳಿಗೆ ಅಭಿನಂದನಾ ತಂತಿ ಕಳಿಸಿದ್ದೆ. ನಾಕು ದಿನಗಳ ನಂತರ ರಾಯಚೂರಿನಿಂದ 'ಆ ವಿಳಾಸದವರು ಅಲ್ಲಿಲ್ಲ' ಎಂಬ ಷರಾ ಹೊತ್ತ ತಂತಿ ನನಗೇ ವಾಪಸ್ಸಾಗಿತ್ತು. ಕರ್ನಾಟಕ ಸರ್ಕಾರ ಗುರುತಿಸಿ ಘೋಷಿಸಿದ ಪ್ರತಿಷ್ಠಿತ 'ರಾಜ್ಯೋತ್ಸವ ಪ್ರಶಸ್ತಿ' ಪಡೆದ ಕವಿ ತನ್ನ ಊರಿನಲ್ಲಿಯೇ ಅಷ್ಟೊಂದು ಅಪರಿಚಿತನಾಗಿರುತ್ತಾನೆಯೆ ? ಇದನ್ನು ಕವಿಯ ಬಗೆಗೆ ಇರುವ ಅವಜ್ಞೆ ಎಂದುಕೊಳ್ಳಬೇಕೆ ? ನನಗಿನ್ನೂ ಅದು ಬಿಡಿಸಲಾಗದ ಒಗಟಾಗೇ ಉಳಿದಿದೆ ಇವತ್ತಿಗೂ. ಇರಲಿ.

ಆಧುನಿಕ ಕಾವ್ಯದ ಮಟ್ಟಿಗೆ ರಾಯಚೂರು ಜಿಲ್ಲೆಯ ಮಹತ್ವದ ಕವಿಯೆಂದರೆ, ಸಿದ್ಧಯ್ಯ ಪುರಾಣಿಕರು. ಅವರ ನಂತರದಲ್ಲಿ ಶಾಂತರಸ, ಚೆನ್ನಣ್ಣ ವಾಲೀಕಾರ, ಅಂತೆಯೇ ಜಂಬಣ್ಣ ಅಮರಚಿಂತ ಮುಖ್ಯರಾಗುತ್ತಾರೆ.

ಕಾವ್ಯ ಕಸುಬನ್ನು ಗಂಭೀರವಾಗಿ ತೆಗೆದುಕೊಂಡ ಜಂಬಣ್ಣ ಅಮರಚಿಂತರ ಕೃತಿಗಳನ್ನು ಹೀಗೆ ಪಟ್ಟಿ ಮಾಡಬಹುದು :

೧. ಮುಂಜಾವಿನ ಕೊರಳು (೧೯೭೬)
೨. ಅಧೋ ಜಗತ್ತಿನ ಅಕಾವ್ಯ (೧೯೮೨)
೩. ಮಣ್ಣಲ್ಲಿ ಬಿರಿದ ಅಕ್ಷರ (೧೯೯೧)
೪. ಅಮರಚಿಂತರ ಕಾವ್ಯ (೧೯೯೩)
೫. ಕುರುಮಯ್ಯ ಮತ್ತು ಅಂಕುಶದೊಡ್ಡಿ (೧೯೯೫)
೬. ಹರಿಯುವ ನದಿಗೆ ಮೈಯೆಲ್ಲ ಕಾಲು (೨೦೦೩)
೭. ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ (೨೦೦೫)
೮. ಪದಗಳು ನಡೆದಾಡುತಿವೆ ಪಾದಗಳಾಗಿ (೨೦೦೮)

ಅನೇಕರು ಬರೆಯುವ ಹುಮ್ಮಸ್ಸಿನಲ್ಲಿ ಹೊತ್ತಿಗೆಯ ಮೇಲೆ ಹೊತ್ತಿಗೆ ಬರೆಬರೆದು ಪ್ರಕಟಿಸಿ ತಮ್ಮ ಪುಸ್ತಕಗಳ ಸಂಖ್ಯೆಯನ್ನು ಬೆಳೆಸಿಕೊಳ್ಳುವುದರಲ್ಲಿಯೇ ಬೀಗುತ್ತಿರುತ್ತಾರೆ. ತಾವು ಮಾತ್ರ ಬೆಳೆಯದೇ ಇದ್ದಲ್ಲೇ ಇರುತ್ತಾರೆ. ಅಪರೂಪದ ಕೆಲವರು ಮಾತ್ರ ತುಸುವೇ ಬರೆದರೂ ಎತ್ತರದ ಸ್ಥಾನ ತಲುಪಿರುತ್ತಾರೆ. ಎರಡನೇ ಸಾಲಿಗೆ ಕವಿ ಅಮರಚಿಂತ ಕೂಡ ಸೇರುತ್ತಾರೆ. ಆರು ಕವನ ಸಂಗ್ರಹಗಳನ್ನು, ಒಂದು ಕಾದಂಬರಿಯನ್ನು ಈ ತನಕ ಪ್ರಕಟಿಸಿದ್ದರೂ, ಇತ್ತೀಚೆಗೆ ಕವಿ ಗಜಲಿನತ್ತ ಹೊರಳಿದ್ದರು ಕೂಡ. 'ಮುಂಜಾವಿನ ಕೊರಳು'ನಿಂದ 'ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ'ವರೆಗೆ ಆರು ಕವನ ಸಂಗ್ರಹಗಳಲ್ಲಿ ಒಬ್ಬ 'ಅಸಲಿ ಕವಿ'ಯಾಗಿ ಕನ್ನಡ ಕಾವ್ಯಕ್ಷೇತ್ರದಲ್ಲಿ ತಮ್ಮದೇ ಆದ ನೆಲೆ ಕಂಡುಕೊಂಡಿದ್ದಾರೆ.

ಕನ್ನಡ ಕಾವ್ಯ ಸಂದರ್ಭದಲ್ಲಿ ಅಮರಚಿಂತರು ದಲಿತ-ಬಂಡಾಯ ಘಟ್ಟದ ಮಹತ್ವದ ಕವಿಯಾಗಿ ತೋರುತ್ತಾರೆ. ಆರೋಗ್ಯ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಅಮರಚಿಂತರು, ಎಲ್. ಹನುಮಂತಯ್ಯ, ಮೂಡ್ನಾಕೂಡು ಚಿನ್ನಸ್ವಾಮಿ, ಮುಳ್ಳೂರು ನಾಗರಾಜ, ಮುನಿವೆಂಕಟಪ್ಪ, ಸತ್ಯಾನಂದ ಪಾತ್ರೋಟ, ಸರಜೂ ಕಾಟ್ಕರ್ – ಮೊದಲಾದವರ ಸಾಲಿನಲ್ಲಿ ನಿಲ್ಲುವ 'ನಾನ್ -ಅಕಾಡೆಮಿಕ್ ವಲಯದ' ಕವಿ. ಶೈಕ್ಷಣಿಕ ವಲಯದಲ್ಲಿರುವ ದಲಿತ ಲೇಖಕರನ್ನೂ ಅವರ ಕೃತಿಗಳನ್ನೂ ಗುರುತಿಸಿದಷ್ಟು ಈ ನಾನ್ – ಅಕಾಡೆಮಿಕ್ ವಲಯದ ಕವಿಗಳನ್ನು ವಿಮರ್ಶೆಯಲ್ಲಿ ನಿರೀಕ್ಷಿಸಿದ ಪ್ರಮಾಣದಲ್ಲಿ ಗುರುತಿಸದೇ ಹೋದದ್ದು ನೋವಿನ ಸಂಗತಿ.

ಅಮರಚಿಂತರು ರಾಯಚೂರು ನೆಲದ ಮಹತ್ವದ ಕವಿಯಾಗಿ ಹೊರಹೊಮ್ಮಿದಂತೆಯೇ ಅದೇ ನೆಲದ ಮಹತ್ವದ ಕತೆಗಾರನಾಗಿ – ಸಶಕ್ತ ವಿಮರ್ಶಕನಾಗಿ ಬೆಳೆದ ಅಮರೇಶ ನುಗಡೋಣಿಯವರು 'ಅಮರಚಿಂತ ಕಾವ್ಯ'ಕ್ಕೆ ಬರೆದ ಬೆನ್ನುಡಿ ಇಡಿಯಾಗಿ ಅಮರಚಿಂತರ ವ್ಯಕ್ತಿತ್ವ ಹಾಗೂ ಅವರ ಕಾವ್ಯದ ವಿಶ್ಲೇಷಣೆ ಮಾಡಿದಂತೆ ಅತ್ಯಂತ ಅರ್ಥವತ್ತಾಗಿದೆ. ಅದನ್ನು ಇಲ್ಲಿ ಪುನಃ ದಾಖಲಿಸದೆ ಗತ್ಯಂತರವಿಲ್ಲ. ''ಈ ಕವಿಗೆ ಆಂತರಿಕ ಒತ್ತಡವಿದೆ. ಒತ್ತಡದ ಕಾರಣ ಬದುಕನ್ನು ಪ್ರೀತಿಯ ಮೂಲಕ ಪರಿಸರದ ಜತೆ ತೊಡಗಿಸಿಕೊಳ್ಳುವ ಆಸೆ. ಮನುಷ್ಯ-ಮನುಷ್ಯರ ನಡುವೆ ಬಿರುಕಿದೆ. ಇದನ್ನು ಸರಿಪಡಿಸುವದಕ್ಕಾಗಿ, ಸಮಾನತೆಯನ್ನು ಒಪ್ಪಿಕೊಳ್ಳುವ ಮೌಲ್ಯಗಳ ಪ್ರತಿಪಾದನೆಯನ್ನು ಸ್ಪಷ್ಟವಾದ ಧೋರಣೆಯೊಂದಿಗೆ, ಸೂಕ್ಷ್ಮ ಆಶಯದ ಮೂಲಕ, ಸಮಾಜನಿಷ್ಠ ಒಲವುಗಳನ್ನು ಹೊತ್ತು ಸಮಷ್ಟಿಯ ಸೃಷ್ಟಿಗೆ ಹಾತೊರೆಯುತ್ತ ಕ್ರಿಯಾಶೀಲವಾಗುವುದು ಕವಿಯ ಬಹುದೊಡ್ಡ

ಈರಪ್ಪ ಎಂ. ಕಂಬಳಿ

ಹೊಸ ತಲೆಮಾರಿನವರ ಕಾವ್ಯದ 'ತೀಟೆ' ಇದಲ್ಲ, ಇವರದಲ್ಲ. ಜಂಬಣ್ಣ ಕಾವ್ಯವನ್ನು ಲಯಬದ್ಧವಾಗಿ ಉಸಿರಾಡುತ್ತಾರೆ. ಅದರಲ್ಲಿ ಹುಡುಗಾಟವಿಲ್ಲ 'ಹುಡುಕಾಟ' ಇದೆ. ಅವರ ಪಾಲಿಗೆ ಅದು 'ಅನಿವಾರ್ಯ ಕರ್ಮ' ಕೂಡ ಆಗಿದೆ. 'ಕಾವ್ಯ ಸಂವಹನ ಮಾಧ್ಯಮ ಆಗಬೇಕು' ಅನ್ನುವ ಮಾತಿಗೆ ತಕ್ಕುದಾಗಿ ಜಂಬಣ್ಣ ಕಾವ್ಯ ಮಾಧ್ಯಮವನ್ನೇ ಗಟ್ಟಿಯಾಗಿ ತಬ್ಬಿಕೊಂಡಿದ್ದಾರೆ. ಹಾಗಾಗಲು ಈ ಕವಿಗೆ ಆಂತರಿಕ ನೋವಿದೆ. ಒತ್ತಡವಿದೆ. ಅವನ್ನು ಗಾಢವಾಗಿ ಅನುಭವಿಸುವ ಮಾನವಾಂತಃಕರಣವಿದೆ. ಹೀಗಾಗಿ ಅವರ ಕಾವ್ಯದ ಶಕ್ತಿಯೆಂದರೆ, ವೇದನಾಭರಿತ ಮಾತುಗಳನ್ನು ರೂಪಕಗಳಲ್ಲಿ ಹೇಳುವುದೇ ಆಗಿದೆ.

ಹಂಬಲವಾಗಿದೆ. ...ಬದುಕಿನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಜೀವಿಯು ಒಡಲ ಕುದಿತದಿಂದ ಬರುವ ಮಾತು ಮೌನವಾಗಿ ಅದಕ್ಕೆ ತಿವಿಯುವಂತೆ ಕಾವ್ಯ ಹುಟ್ಟಬೇಕಾಗುತ್ತದೆ. ಹೀಗೆ ಹುಟ್ಟಿದ ಕಾವ್ಯ ಯಾವ ಹಣೆಪಟ್ಟಿಯ ಸಿದ್ಧಾಂತವಾಗದೆ ಜೀವಿಸಲು ಹಂಬಲಿಸುವ ಜೀವಿಗಳ ಕೈದೀವಿಗೆಯಾಗಿ ನಿಲ್ಲಬಲ್ಲದು. ಅಮರಚಿಂತರ ಕಾವ್ಯ ಇಂಥ ಮಾದರಿಯದು. ಇವರ ಕಾವ್ಯದ ಧೋರಣೆಯಲ್ಲಿ ಪರ್ಯಾಯ ಸಂಸ್ಕೃತಿಯನ್ನು ಬಯಸಿ, ನಿರ್ಮಾಣ ಮಾಡುವ ಸ್ಪಷ್ಟ ಲಕ್ಷಣಗಳನ್ನು ಕಾಣುತ್ತೇವೆ. ಇಲ್ಲಿಯ ಹಲವು ಕವಿತೆಗಳು ದಟ್ಟವಾದ ನೋವನ್ನು ತುಂಬಿಕೊಂಡಿವೆ. ...ಒಂದು ಅನುಭವದ ಜತೆ ಭಾಷೆ ಹೇಗೆ ಆಟವಾಡಬಲ್ಲದು ಎಂಬ ಬೆರಗು ಈ ಸಂಕಲನದಲ್ಲಿದೆ.'' – ಇದು ಅಮರಚಿಂತರ ಕಾವ್ಯದ ಒಳಹೊಕ್ಕು ನೋಡಿದ ಅನುಭವದ ನುಡಿಯಾಗಿದೆ. ಕವಿ ಅಪಾರ ನೋವಿನಲ್ಲಿ ಮುಳುಗಿದವನಾಗಿ ಆಂತರಿಕ ಒತ್ತಡ ಅನುಭವಿಸುತ್ತಿರುವುದನ್ನು ಸಮಾಜಮುಖಿಯಾಗಿ ಅಭಿವ್ಯಕ್ತಿಸುವ ಕ್ರಮವೇ ಅನನ್ಯವಾದುದು.

ಬಿಸಿಲಸೀಮೆಯ ಹೆಮ್ಮೆಯ ಕವಿ ಜಂಬಣ್ಣ ಅಮರಚಿಂತರ ಕವಿತೆಗಳನ್ನು ಓದುತ್ತ ಹೋದಂತೆ ಅದರೊಳಗೆ ಅಡಗಿದ್ದ ಮನುಷ್ಯ ನಮಗೆ ಆಪ್ತವಾಗುತ್ತ ಹೋಗುವ ಕಾರಣಕ್ಕಾಗಿ, ಅಪ್ಪಟ ಮನುಷ್ಯನೊಬ್ಬನ ಪ್ರಾಮಾಣಿಕ ಅಭಿವ್ಯಕ್ತಿಯಾಗಿ ಅವರ ಕವಿತೆಗಳು ಕಾಡುತ್ತವೆ.

'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯೊಂದನ್ನು ಹೊರತುಪಡಿಸಿದರೆ, ಮಿಕ್ಕೆಲ್ಲವೂ ಕಾವ್ಯ ಕೃತಿಗಳು. ಜಂಬಣ್ಣ ಕವಿಯಾಗಿ ಗಮನ ಸೆಳೆದಂತೆಯೇ 'ಹರಿಯುವ ನದಿಗೆ ಮೈಯೆಲ್ಲಾ ಕಾಲು' ಪ್ರಕಟಿಸಿದ ನಂತರ ನೂರಾರು ಗಜಲುಗಳ ಸಂಗ್ರಹ 'ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ' ಪ್ರಕಟಿಸುವ ಮೂಲಕ ಗಜಲಿನತ್ತ ಹೊರಳಿದ್ದಾರೆ. ''ಸಾಹಿತ್ಯ ಯಾವುದೇ ಪ್ರಕಾರದಲ್ಲಿ ಹರಿದು ಬರಲಿ, ಜೀವನ ದ್ರವ್ಯ ತುಂಬಿಕೊಂಡ ಸಾಹಿತ್ಯ ಚಿರಂತನ; ನಿತ್ಯನೂತನ'' ಎಂದು ಸ್ವತಃ ಬಗೆದ ಜಂಬಣ್ಣ ಅಮರಚಿಂತರು ಹೈದರಾಬಾದು ಕರ್ನಾಟಕ ನೆಲದ ಮಹತ್ವದ ಕವಿಯಾಗಿ ಕಾಡುತ್ತಾರೆ. ಹಾಗೆಯೇ ಅವರ ಕಾವ್ಯ ಅಸಲೀತನದಿಂದ ಗಮನ ಸೆಳೆಯುತ್ತದೆ ಕೂಡ.

ಅಮರಚಿಂತರು ಎಪ್ಪತ್ತರ ದಶಕದಲ್ಲಿ ತಮ್ಮನ್ನು ತೀವ್ರವಾಗಿ ಕಾವ್ಯ ಕೃಷಿಗೆ ತೊಡಗಿಸಿಕೊಂಡವರು. ಆ ದಶಕದಲ್ಲಿ ಆದ ರಾಜಕೀಯ ಸ್ಥಿತ್ಯಂತರ ಒಂದು ಕಡೆಗಾದರೆ, ಸಾಹಿತ್ಯ ಪ್ರಪಂಚದಲ್ಲಿಯೂ ನವ್ಯಕಾವ್ಯ ನೆಲಕಚ್ಚಿ ಬಂಡಾಯ ಕಾವ್ಯಕ್ಕೆ ಕಾವೇರುತ್ತಿದ್ದ ಕಾಲಘಟ್ಟವದು. ಅದೇ ಹೊತ್ತಿಗೆ ಲಂಕೇಶರು 'ಅಕ್ಷರ ಹೊಸ ಕಾವ್ಯ' ಸಂಪಾದಿಸಿದಾಗ, ಅಚ್ಚರಿಯೆಂದರೆ ಅದರಲ್ಲಿ ಹೈದರಾಬಾದ್ ಕರ್ನಾಟಕದ ಒಬ್ಬ ಕವಿಯೂ ಸೇರ್ಪಡೆಯಾಗಿರಲಿಲ್ಲ. ಅದನ್ನು ಪ್ರತಿಭಟಿಸಿದಂತೆ ಶಾಂತರಸರು 'ಬೆನ್ನ ಹಿಂದಿನ ಬೆಳಕು' ಪ್ರಕಟಿಸಿ ನಾಡಿನ ಗಮನ ಸೆಳೆದಿದ್ದರು. ಅದೇ ರೀತಿ, 'ಅಕ್ಷರ ಹೊಸ ಕಾವ್ಯ'ದಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳ ಕವಿಗಳಿಗೆ ಸರಿಯಾದ ಪ್ರಾತಿನಿಧ್ಯ ದಕ್ಕಲಿಲ್ಲವೆಂಬ ಕಾರಣಕ್ಕೆ ಬುದ್ದಣ್ಣ ಹಿಂಗಮಿರೆ 'ಹೊಸ ಜನಾಂಗದ ಕವಿತೆಗಳು' ಸಂಪಾದಿಸಿದ್ದನ್ನು ಇಲ್ಲಿ ನೆನೆಯಬೇಕು. ಈ ನೆಲದ (ಬಿಸಿಲ ಸೀಮೆಯ) ಕವಿಯಾಗಿ ಜಂಬಣ್ಣ ೧೯೬೯ರಲ್ಲಿಯೇ ತಮ್ಮ 'ಮುಂಜಾವಿನ ಕೊರಳು' ಪ್ರಕಟಿಸಿದ್ದರು. ನವ್ಯ ಕಾಲದ ವಿಮರ್ಶಕರಿಗೆ ಜಂಬಣ್ಣರ ಕೊರಳಿನ ದನಿ ಕೇಳಿಸಲೇ ಇಲ್ಲ ಅಥವಾ ಕೇಳಿಸಿದ್ದರೂ ಜಾಣಕಿವುಡು ತೋರಿದ್ದಿರಬೇಕು. ಅದನ್ನೇ ಡಾ॥ ರಹಮತ್ ತರೀಕೆರೆ ''ಕನ್ನಡದ ಎಷ್ಟೋ ಮುಂಜಾವಿನ ಕೊರಳುಗಳ ದನಿ ಹಿಚುಕಿದ ಕೀರ್ತಿ ನವ್ಯಕ್ಕೆ ಸಲ್ಲುತ್ತದೆ'' ಎಂದು ಆಕ್ರೋಶ ವ್ಯಕ್ತಪಡಿಸುತ್ತಾರೆ (ಅಮರಚಿಂತ ಕಾವ್ಯ - ಮುನ್ನುಡಿಯಲ್ಲಿ).

ಬಂಡಾಯ ಸಾಹಿತ್ಯ ಸಂಘಟನೆಯು 'ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎನ್ನುವ ಘೋಷಣೆಯೊಂದಿಗೆ ತನ್ನದೇ ಆದ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಬೀಡುಬಿಟ್ಟಾಗ ಕಾವ್ಯವೂ ಹೊರಳುದಾರಿ ಕಂಡುಕೊಂಡಿತು. ರಮಜಾನ್ ದರ್ಗಾ 'ಕಾವ್ಯ ಬಂತು ಬೀದಿಗೆ', ಸಿದ್ಧಲಿಂಗಯ್ಯನವರು 'ಹೊಲೆ ಮಾದಿಗರ ಹಾಡು' ಹೊರತರುವ ಮೂಲಕ ಬಂಡಾಯ ಕಾವ್ಯ ದಾಂಗುಡಿಯಿಟ್ಟು, ದಟ್ಟೈಸಿತ್ತು. ಹದಿಮೂರು ವರ್ಷಗಳ ದೀರ್ಘ ಮೌನದ ನಂತರ ಅಮರಚಿಂತರು ಯಾವ ಹಣೆಪಟ್ಟಿಯನ್ನೂ ಕಟ್ಟಿಕೊಳ್ಳದೆ ೧೯೮೨ರಲ್ಲಿ 'ಅಧೋ ಜಗತ್ತಿನ ಅಕಾವ್ಯ' ಪ್ರಕಟಿಸಿದಾಗ ಕೆಂಡದುಂಡೆಯಂತೆ ಉರಿಯುತ್ತಿದ್ದ ಅವರ 'ಕಾವ್ಯ ಶಕ್ತಿ' ನಿಗಿನಿಗಿ ಕಿಚ್ಚಿನಂತೆ ಕಣ್ಣು ಕುಕ್ಕಿತ್ತು. ಅವರ ಪ್ರಕಾರ 'ಕವಿತೆ' ಎಂದರೆ :

*ಜಾಡಮಾಲಿಯ ಪೊರಕೆಯ ಹಾಗೆ*
*ಬಟ್ಟೆಯೊಗೆಯುವ ಅಗಸನ ಹಾಗೆ*
*ಕುಂಬಾರ ಗುಂಡಪ್ಪನ ತಿಗುರಿಯ ಹಾಗೆ*
*ಹೊಲೇರ ಮೂಕಪ್ಪನ ಡಪ್ಪಿಯ ಹಾಗೆ*
*ಕೊರವರ ಕುರಿಮ್ಯಾನ ಬಿಜಲಿಯ ಹಾಗೆ –*

– ಇದು ಅಸಲೀ ಬಂಡಾಯ ಕಾವ್ಯಕ್ಕೆ ಬರೆದ ಪರಿಭಾಷೆ.

ಹನ್ನೆರಡನೆ ಶತಮಾನದ ವಚನಕಾರರನ್ನು ನೆನಪಿಸಿದಂತೆ, ಶೂದ್ರಾತಿಶೂದ್ರ ವರ್ಗಕ್ಕೆ ಹೊಸದಾಗಿ ಬಾಯಿ ಬಂದಂತೆ, ಇಲ್ಲಿ ದಾಖಲಿಸುವ ಕ್ರಮವೂ ಅನನ್ಯವಾದುದಾಗಿದೆ. ಸಾಮಾಜಿಕ ನ್ಯಾಯಕ್ಕಾಗಿ ಎತ್ತುವ ದನಿಯೂ ಅರ್ಥಪೂರ್ಣವಾದುದಾಗಿದೆ. ಈ ಕಾರಣಗಳಿಗಾಗಿ ಜಂಬಣ್ಣ ನಮಗೆ ಮಹತ್ವದ ಕವಿಯಾಗುತ್ತಾರೆ. ಹೊಸ ತಲೆಮಾರಿನವರ ಕಾವ್ಯದ 'ತೀಟೆ' ಇದಲ್ಲ, ಇವರದಲ್ಲ. ಜಂಬಣ್ಣ ಕಾವ್ಯವನ್ನು ಲಯಬದ್ಧವಾಗಿ ಉಸಿರಾಡುತ್ತಾರೆ. ಅದರಲ್ಲಿ ಹುಡುಗಾಟವಿಲ್ಲ 'ಹುಡುಕಾಟ' ಇದೆ. ಅವರ ಪಾಲಿಗೆ ಅದು 'ಅನಿವಾರ್ಯ ಕರ್ಮ' ಕೂಡ ಆಗಿದೆ. 'ಕಾವ್ಯ ಸಂವಹನ ಮಾಧ್ಯಮ ಆಗಬೇಕು' ಅನ್ನುವ ಮಾತಿಗೆ ತಕ್ಕುದಾಗಿ ಜಂಬಣ್ಣ ಕಾವ್ಯ ಮಾಧ್ಯಮವನ್ನೇ ಗಟ್ಟಿಯಾಗಿ ತಬ್ಬಿಕೊಂಡಿದ್ದಾರೆ. ಹಾಗಾಗಲು ಈ ಕವಿಗೆ ಆಂತರಿಕ ನೋವಿದೆ, ಒತ್ತಡವಿದೆ; ಅವನ್ನು ಗಾಢವಾಗಿ ಅನುಭವಿಸುವ ಮಾನವಾಂತಃಕರಣವಿದೆ. ಹೀಗಾಗಿ, ಅವರ ಕಾವ್ಯದ ಶಕ್ತಿಯೆಂದರೆ, ವೇದನಾಭರಿತ ಮಾತುಗಳನ್ನು ರೂಪಕಗಳಲ್ಲಿ ಹೇಳುವುದೇ ಆಗಿದೆ.

ನೊಂದವರ ನೋವುಗಳನ್ನು ತನ್ನಲ್ಲಿ ಮೈದುಂಬಿಸಿಕೊಂಡು ತಳಮಳಿಸುವ ಈ ಕಾವ್ಯ ''ವಿಶ್ವ ಹೃದಯದ ಗಾಯಗಳಲ್ಲಿ ನಾನಿರುವೆನೆಂದು ತನ್ನ ನೆಲೆಯನ್ನು ಗುರುತಿಸಿಕೊಳ್ಳುತ್ತದೆ'' (ಡಾ॥ ರಹಮತ್ ತರೀಕೆರೆ). ಅಮರಚಿಂತರ ಕಾವ್ಯದ ಅಂತರಾತ್ಮವೆಂದರೇನೇ ವೇದನಾಭರಿತ ಮಾತುಗಳನ್ನು ರೂಪಕಗಳಲ್ಲಿ ಅಭಿವ್ಯಕ್ತಿಸುವುದಾಗಿದೆ. ಹಾಗೆ ಮಾಡುವಾಗ ಇತಿಹಾಸ - ಪರಂಪರೆಗಳನ್ನು ಗ್ರಹಿಸುವ ಮತ್ತು ವರ್ತಮಾನದ ಕಣ್ಣಲ್ಲಿ ಅವನ್ನು ಅರ್ಥೈಸುವ ಪರಿಯೇ ಅನನ್ಯವಾದುದಾಗಿದೆ.

*ನೀವು ಮಹಾತ್ಮರಲ್ಲ, ನಾವು ಹುತಾತ್ಮರಲ್ಲ*
*ನಾವು ಮನುಷ್ಯರು, ಮನುಷ್ಯರಂತೆ ಮಾತಾಡೋಣ*
*ಈಗ ಧರ್ಮದ ಮಾತು ಬೇಡ, ಕರ್ಮದ ಮಾತು ಬೇಡ*
*ಪ್ರೇಮದ ಮರ್ಮವರಿತ ಮನುಷ್ಯರಂತೆ ಮಾತಾಡೋಣ -*

– ಎಂದು ''ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ''ಯಾಗಿ ಕರೆ ಕೊಡುವ ಕವಿಯ ಆಶಯ ಇಲ್ಲಿ ಮಹತ್ತಾದುದಾಗಿದೆ. ಇಂದು ಬಹುಮುಖ್ಯವಾಗಿ ಮನುಷ್ಯರಾಗಬೇಕಿದೆ; ಅಪ್ಪಟ ಮನುಷ್ಯರಾಗಿ ಪರಸ್ಪರ ಪ್ರೇಮ ಹಂಚಿಕೊಂಡು ಬದುಕಬೇಕಾದ ತುರ್ತು ಇರುವುದನ್ನು ಕವಿ ಸ್ಪಷ್ಟಪಡಿಸುತ್ತಾನೆ. ಅದನ್ನೇ 'ಅಮರಚಿಂತ ಕಾವ್ಯ'ಕ್ಕೆ ಮುನ್ನುಡಿ ಬರೆಯುತ್ತ ಡಾ॥ ರಹಮತ್ ತರೀಕೆರೆ ''ಮುಖ್ಯವಾಗಿ ಜಂಬಣ್ಣ ಅಮರಚಿಂತ ಮಾನವತಾವಾದಿ ಕವಿ. ಅವರ ಕಾವ್ಯದ ಹೃದಯವಂತಿಕೆಗೆ ವಿಚಾರಶೀಲತೆಯಿರುವುದರಿಂದ, ಅದು ನೆಲದ ಮೇಲೆ ನಿಂತ ಕಾವ್ಯ. ಅಂಥ ಅತ್ಯುತ್ತಮ ಕವನಗಳನ್ನು ಬರೆಯಬಲ್ಲ ಕವಿ ನಮ್ಮ ಸಾಂಸ್ಕೃತಿಕ ಚರ್ಚೆಯಲ್ಲಿ ಮುಖ್ಯರಾಗದೆ ಹೋಗಲು ಹೇಗೆ ಸಾಧ್ಯ'', ಎಂದು ಧ್ವನಿ ಎತ್ತುತ್ತಾರೆ.

ದಿವಂಗತ ಎಸ್. ಜಿ. ಸ್ವಾಮಿ 'ಸಂಯುಕ್ತ ಕರ್ನಾಟಕ'ದಲ್ಲಿ ಜಂಬಣ್ಣ ಅಮರಚಿಂತರನ್ನು 'ಜನತೆಯ ಕವಿ' ಎಂದು ಕರೆದು ಬಣ್ಣಿಸಿದ ನುಡಿಗಳನ್ನು ನೋಡಿರಿ : ''ಯಾವುದೇ ಪಂಥ ಪಂಗಡಗಳ ಟ್ರೇಡ್‌ಮಾರ್ಕ್‌ಗಳಿಗೆ ಒಳಗಾಗದೆ ತಮ್ಮದೇ ಮಾರ್ಗದಲ್ಲಿ ಸಾಗಿರುವ ಜನಕವಿ ಜಂಬಣ್ಣ ಅಮರಚಿಂತ ಸಂಕೋಚ ಸ್ವಭಾವದ, ಪ್ರಚಾರ ಬಯಸದ, ಆತ್ಮೀಯರಲ್ಲಿ ಕರಗುವ ಮಿತಭಾಷಿ. ೧೯೬೯ರಲ್ಲಿ ಪ್ರಕಟಿಸಿದ 'ಮುಂಜಾವಿನ ಕೊರಳು' ಎಂಬ ಮೊದಲ ಕವನ ಸಂಗ್ರಹದಲ್ಲಿ ನವ್ಯದ ಮಾದರಿಯಿದ್ದರೂ, ಬಹು ಬೇಗನೇ ಮೈಕೊಡವಿ ನವ್ಯದಿಂದ ಹೊರಬಂದವರಾಗಿ, ಜನರ ನೋವಿಗೆ ಮಿಡಿವ ಪ್ರಾಣಮಿತ್ರರಾಗಿ, 'ಅಧೋ ಜಗತ್ತಿನ ಅಕಾವ್ಯ' ಪ್ರಕಟಿಸುವ ಮೂಲಕ ಕಾವ್ಯರಚನೆಯಲ್ಲಿ ತಮ್ಮದೇ ಆದ ಗಟ್ಟಿ ಬೆಲೆ ಕಂಡುಕೊಂಡರು.''

## ಆತಂಕ

ವಾಸ್ತವದ ಝಳ ತಟ್ಟೀತು
ಕನಸುಗಳ ಕಮರಿಸೀತು
ಕಾಣುತಿದೆ ಸವಿಗನಸು
ಈ ಮನಸಿನ್ನೂ ಹಸಗೂಸು !

* * *

ಸಪ್ತಸಾಗರದಾಚೆಯಿಂದ
ಮುತ್ತನೊಂದು ತರುವೆನೆಂದ
ನನ್ನ ನಲ್ಲ – ಮಾತಿನಮಲ್ಲ

**ಕುಸುಮ ನಕೋಸಾ ಕರಾಳೆ**
ಉಪನ್ಯಾಸಕಿ, 'ನಕೋಸ', ೧ನೇ ಮುಖ್ಯರಸ್ತೆ
ಶ್ರೀ ನಗರ, ಧಾರವಾಡ - ೫೮೦ ೦೦೩

ಹೇಳು ಗೆಳೆಯಾ, ವ್ಯಾಕರಣ ಪಂಡಿತನೇ –
ಜಟಿಲಗೊಂಡ ಸಮಾಜ ವ್ಯಾಕರಣ ಬಿಡಿಸುವುದು
ಹೇಗೆ ?
ಚದುರಿದ ಶಬ್ದಗಳನ್ನು ಸಂಚಯಿಸಿ,
ವಾಕ್ಯ ಅರ್ಥ ತುಂಬುವುದು ಹೇಗೆ ?
ವಿವಿಧ ವರ್ಣಗಳಲ್ಲಿ ವಿಭಜನೆಗೊಂಡ
ಮೂಲವರ್ಣವನ್ನು ಕಾಣುವುದು ಹೇಗೆ ?
ಕ್ಷರವಾಗುತ್ತಿರುವ ಬದುಕನ್ನು ಅಕ್ಷರವಾಗಿಸುವುದು
ಹೇಗೆ ?
ಅಕಾವ್ಯ ಅಧೋಜಗತ್ತನ್ನು ಕಾವ್ಯವಾಗಿಸುವುದು ಹೇಗೆ ?
(ಅಧೋಜಗತ್ತಿನ ಅಕಾವ್ಯ)

'ಮಾನವತೆಗೆ ಮತ್ತೊಂದು ಹೆಸರಾದ ಕವಿತೆ'ಯ ಬೆನ್ನಿಗೆ ಇರುವ ಪರಂಪರೆಯನ್ನು ಟೀಕಿಸುತ್ತಲೇ ಕವಿ ಅಧೋಜಗತ್ತನ್ನು ಕಾವ್ಯದಲ್ಲಿ ತರುವ ಬಗ್ಗೆ, ಅಕಾವ್ಯ ಅಧೋಜಗತ್ತುಗಳನ್ನು ಅರಗಿಸಿಕೊಳ್ಳಬೇಕಾದ ಸವಾಲನ್ನು ಸಮಕಾಲೀನ ಸಮಾಜದ ಮುಂದೆ ಎಸೆಯುವ ಪರಿ ಅತ್ಯಂತ ಮಾರ್ಮಿಕವಾದುದಾಗಿದೆ.

ಯಾರಿವರು ಯಾರಿವರು ?
ಬೆಳಕು ಹೊತ್ತು ಸಾಗಿದವರು
ಪಂಡಿತ ಕವಿಗಳು ಮರೆತ
ಜಾನಪದ ಛಂದಗಳು
ಕಣ್ಣಗಂತು ಕಾಣರು
ಪೆಟ್ರೋಮಾಕ್ಸ್ ಹೊತ್ತವರು ಬೆಳಕಿನಡಿಯ ಕತ್ತಲಲ್ಲಿ
ಕತ್ತಲಾಗಿ ನಿಂತವರು
ಕತ್ತಲೆಯ ಹುದಲಲ್ಲಿ
ಹೂತು ಹೋಗುತ್ತಿರುವವರು
(ಪೆಟ್ರೋಮಾಕ್ಸ್ ಹೊತ್ತ ಕೊರವರು)

– ಇದು ಅಮರಚಿಂತರು ಚಿತ್ರಿಸುವ ಅಧೋಜಗತ್ತಿನ ಚಿತ್ರಕಾವ್ಯ. ಶತ ಶತಮಾನಗಳಿಂದ ಅಕ್ಷರ ವಂಚಿತರಾಗಿ ಒಂದಲ್ಲ ಒಂದು ಕಾರಣಕ್ಕೆ ತುಳಿತಕ್ಕೊಳಗಾದವರ ನೋವಿನ ದನಿಯಾಗಿ ಚಿತ್ರಿತವಾದ ಕಾವ್ಯ ಇಲ್ಲಿ ಸಾರ್ಥಕತೆ ಪಡೆದುಕೊಳ್ಳುವ ಬಗೆಯೇ ಅದ್ಭುತವಾಗಿದೆ. ''ಗ್ರೀಕ್ ಪುರಾಣದ ಪ್ರಮಿಥ್ಯೂಸ್ ಸ್ವರ್ಗಲೋಕದಿಂದ ಬೆಳಕನ್ನು ಕದ್ದುತಂದಂತೆ, ಜಂಬಣ್ಣ ಅಧೋ ಲೋಕದಿಂದ ಪೆಟ್ರೋಮಾಕ್ಸ್ ಹೊತ್ತು ತಂದವರು... ಇದು ಮಣ್ಣಿನಲ್ಲಿ ಬಿರಿದ ಕಾವ್ಯ.'' (ಎಸ್. ಶಿವಾನಂದ).

ನಾನು
ಸದಾ ಬೇಟೆಯ ಜೊತೆಗಿದ್ದೇನೆ
ಬೇಟೆಗಾರನ ಜೊತೆಗಲ್ಲ
ವಿಶ್ವ ಹೃದಯದ ಗಾಯಗಳಲ್ಲಿ ನಾನಿರುವೆ
ರೋಗಗ್ರಸ್ತ ವಿಶ್ವವನು ನೋಡುತ್ತ
(ನಾನು ಬೇಟೆಯ ಜೊತೆಗಿದ್ದೇನೆ)

ಎನ್ನುವಲ್ಲಿ, ಅಮರಚಿಂತರು ಕಾವ್ಯದ ಜೊತೆ ನಡೆಸುವ ಅನುಸಂಧಾನವೆಂದರೇನೇ ವೇದನಾಭರಿತ ಅನುಭವವನ್ನು ರೂಪಕಗಳ ಮುಖಾಂತರ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವುದಾಗಿದೆ. ಹಾಗೆ ಮಾಡುವಾಗ ಇತಿಹಾಸ ಪರಂಪರೆಗಳನ್ನು ಗ್ರಹಿಸುವ ಮತ್ತು ಅವನ್ನು ವರ್ತಮಾನದ ಕಣ್ಣಲ್ಲಿ ಅರ್ಥೈಸುವ ಪರಿಯೇ ಇಲ್ಲಿ ಅನನ್ಯವಾಗಿದೆ, ಅದ್ಭುತವಾಗಿದೆ. ಅದಕ್ಕೆ ಪೂರಕವಾಗಿ ಮತ್ತೊಂದು ಕವಿತೆಯ ಸಾಲುಗಳನ್ನು ಇಲ್ಲಿ ನಿದರ್ಶನಕ್ಕಾಗಿ ನೋಡಬಹುದು :

ಯಾರು ಕಟ್ಟಿದರಯ್ಯಾ ? ಯಾರು ಕಟ್ಟಿದರು ?
ರಕ್ತಸಿಕ್ತವಾದ ಏಳುಸುತ್ತಿನ ಕೋಟೆ
ರಟ್ಟೆಯ ಸತುವ ಸವೆಸಿ ಬಿರುಕನು ಮೆತ್ತಿ
ಕಂದಕಗಳ ತೋಡಿ; ಅದಕ್ಕೆ ಕಣ್ಣೀರ ತುಂಬಿದರು
ನಮ್ಮವರು ನಮಗಾಗಿಯೇ
ನಿರ್ಮಿಸಿದ ಅದೃಶ್ಯ ಗೋಡೆಗಳು
ಹೇಳಯ್ಯ ಇತಿಹಾಸಕಾರನೆ ? (ಕೋಟೆ)
ವಾಹ್ ! ಎಂಥ ಪ್ರಶ್ನೆ ?
ಏನು ಹೇಳಲಿ ?
ಗಾಂಧಿ ಮುಖಪುಟದ ಗ್ರಂಥದಲ್ಲಿ
ಗೋಡ್ಸೆಗಳ ಚರಿತ್ರೆಗಳು ಅಚ್ಚಾಗುತ್ತವೆ.
(ಭೂಮಿ ಕಂಡ ದುಃಸ್ವಪ್ನ)

ಎಂದು ಹೇಳುವಲ್ಲಿ, ''ಸಮಕಾಲೀನ ಬದುಕಿನ ವೈರುಧ್ಯಗಳನ್ನು ಹೊಸತಾದ ಬಗೆಯಲ್ಲಿ ಹೇಳಿ ಮನಸ್ಸನ್ನು ಮುಟ್ಟುವ ಕಾವ್ಯವಿದು'' ಎನ್ನುವ ಡಾ|| ರಹಮತ್ ತರೀಕೆರೆಯವರು ಮಾತನ್ನು ಇಲ್ಲಿ ಪುನರುಲ್ಲೇಖಿಸುವುದು ಸೂಕ್ತ.

ಆಲಿಸು ಅಸರಂತ. ಹರಿಯುವ ನದಿಯ ಆವಾಜು
ಪರಿಶೀಲಿಸು ಅಲೆಗಳಲ್ಲಿ ಹರಡಿದ ನದಿಯ ರಿವಾಜು
(ಜೀವನಾಡಿ)

ಅಮರಚಿಂತರ 'ಕಾವ್ಯಭಾಷೆ' ಕುರಿತಂತೆಯೂ ತುಸು ಅವಲೋಕಿಸಿದಾಗ, ಈ ಮೇಲಿನ ಸಾಲುಗಳನ್ನು ಪ್ರಾತಿನಿಧಿಕವಾಗಿ ನೀಡಬಹುದಾಗಿದೆ. ನಿಜಾಮಶಾಹಿ ಆಡಳಿತದಲ್ಲಿ ಒಂದು ಕಾಲಕ್ಕೆ ಉರ್ದು ಆಡಳಿತ ಭಾಷೆಯಾಗಿದ್ದ ಹೈದರಾಬಾದ್ ಕರ್ನಾಟಕದ ರಾಯಚೂರು ಕನ್ನಡದಲ್ಲಿ ಉರ್ದು ಪದಗಳು ಧಾರಾಳವಾಗಿ ಬೆರೆತಿರುವುದಕ್ಕೆ ಅಮರಚಿಂತರ ಕಾವ್ಯವೂ ಹೊರತಾಗಿಲ್ಲ. ಹಳೇ ಮೈಸೂರು ಕಡೆಯ ಶಿಷ್ಟ ಕನ್ನಡದಲ್ಲಿ ಬಳಕೆಯಲ್ಲಿರುವ 'ಭೂಮ್ಯಾಕಾಶ ದಷ್ಟು ಅಂತರ' ಅನ್ನುವುದು ಅಮರಚಿಂತರ ಕಾವ್ಯದಲ್ಲಿ 'ಜಮೀನು ಆಸ್ಮಾನ್ ಫರಕು' ಆಗಿದೆ. ಧಗಾಬಿದ್ದ ಅಧೋಜಗತ್ತಿನ ಅಕಾವ್ಯವನ್ನು ಸೃಷ್ಟಿಸುವಲ್ಲಿಯೂ ಆ ಎಲ್ಲ ಭಾಷಾ ಚೌಕಟ್ಟುಗಳನ್ನು ಮೀರಿಯೂ ಕವಿ ಶಿಷ್ಟತೆಗೂ ಒಳಗಾಗುವ ಪರಿ ನೋಡಬಹುದು :

ನವಿಲು ಮರೆತಿದೆ ತನ್ನ ನಿಸರ್ಗ ನೃತ್ಯ – ಕ್ಯಾನ್ಸರ್ ಬಂದಿದೆ
ಕೋಗಿಲೆ ಕಂಠಕ್ಕೆ; ಭೂಮಿ : ಬೀಮಾರಿ – ಭಿಕಾರಿ ಮುದುಕನ
ಸುಕ್ಕುಗಟ್ಟಿದ ಚರ್ಮವಾಗಿದೆ, ಹಸಿರು ಹೆಸರಿಗಿಲ್ಲದಾಗಿದೆ
(ಭೂಮಿ ಕಂಡ ದುಃಸ್ವಪ್ನ : ಒಂದು ಗಪದ್ಯ)

ಅಮರ ಚಿಂತರ ಕಾವ್ಯಕ್ಕೆ ಮುನ್ನುಡಿ ಬರೆಯುತ್ತ ''ಅವರ ಕಾವ್ಯದ ಶಕ್ತಿಯೆಂದರೆ, ವೇದನಾಭರಿತ ಮಾತುಗಳನ್ನು ರೂಪಕಗಳಲ್ಲಿ ಹೇಳುವವದೇ ಆಗಿದೆ'' ಎನ್ನುತ್ತಾರೆ ಅದೇ ಡಾ|| ರಹಮತ್ ತರೀಕೆರೆ. ಪರಂಪರೆಯನ್ನು, ಚರಿತ್ರೆಯನ್ನು ವರ್ತಮಾನದ ಕಣ್ಣಲ್ಲಿ ಗ್ರಹಿಸಿ, ಸಮಕಾಲೀನ ನೆಲೆಯಲ್ಲಿ, ಪ್ರಕೃತಿಯ ಹಿನ್ನೆಲೆಯಲ್ಲಿ ಅಭಿವ್ಯಕ್ತಿಸುವ ಕ್ರಮ ಇಲ್ಲಿ ಅದ್ಭುತವಾಗಿ ಬಳಕೆಯಾಗಿದೆ. ಆಗ,

ರಕ್ತಸಿಕ್ತ ಖಡ್ಗ ನಿಮ್ಮ ಒರೆಯಲ್ಲಿ
ಹಂತಕರು ಯಾರೆಂದು
ಮತ್ತೆ ಕೇಳುವಿರಿ

ಬಿತ್ತುವ ಬೀಜ ನಿಮ್ಮ ಉಗ್ರಾಣದಲ್ಲಿ
ಮತ್ತೆ ಕೇಳುವಿರಿ
ಬೆಳೆಯಾಕ ಬರಲಿಲ್ಲೆಂದು

ಗೋರಿಗೊಂಡಿದೆ ಕೋಳಿ ನಿಮ್ಮ ಹೊಟ್ಟೆಯಲ್ಲಿ
ಕೋಳಿ ಯಾಕ ಕೂಗದೆಂದು
ಮತ್ತೆ ಕೇಳುವಿರಿ

ನಿರ್ಮಿಸಿ ಇಲ್ಲಿ ಈ ಕಂದರ, ಅಂತರ
ಹೇಳುವಿರಿ ಮತ್ತೆ –
ಗ್ರಹ, ನಕ್ಷತ್ರಗಳ ದಾರಿ ಸವೆಸಿದೆವೆಂದು
(ಕೆಲವು ಸವಾಲು ಸಾಲು)

ಹಾಗೆ ಇತಿಹಾಸವನ್ನು ಸಮಕಾಲೀನ ಕಣ್ಣಿನಲ್ಲಿ ಮಿದ್ದಿ ಮುಂದಿಡುವಾಗ ಕೋಟೆ-ಕೊತ್ತಳಗಳು, ಗುರಿ ಮುಟ್ಟುವ ಬಾಣ, ಕಂದಕ-ಬಂದೂಕ, ಮರಳುಗಾಡು, ಒಂಟೆ, ಕಾರವಾನಗಳ ಜೊತೆಗೆ ಉರಿಯುವ ಸೂರ್ಯ, ಹರಿಯುವ ನೀರು, ಮುಳುಗಿ ಏಳುವ ನಾವೆ, ಕತ್ತಲೆಯ ಹುದುಲುಗಳು ಪದೇ ಪದೇ ಹೊಸ ಹೊಸ ರೂಪ ತೊಟ್ಟು ಸಾಲಾಗಿ ಹಾಜರಾಗುತ್ತವೆ.

ಸುವರ್ಣಾಕ್ಷರದಲಿ ಬರೆದ ಇತಿಹಾಸವಂತೆ
ಇದೊಂದು ಕಂತೆ;
ಸುಳ್ಳು ಬೊಂಕುಗಳ ತೇಪೆ ಹಾಕಿ
ಹೊಲಿದಂಥ ಬೊಂತೆ (ಕೋಟೆ)

ಚರಿತ್ರೆ ಎನ್ನುವುದು ನಮ್ಮ ಪಾಲಿಗೆ ಹಳೇ ಚಿಂದಿ ಬಟ್ಟೆಗಳನ್ನು ಪೇರಿಸಿ ಹೊಲಿದ ಕವುದಿಯಂತೆ ತಿರುಚಿ ಬರೆದದ್ದೆಂದು ಕವಿ ಇಲ್ಲಿ ದಾಖಲಿಸುವ ರೂಪಕಗಳೇ ಅದ್ಭುತವಾಗಿದೆ, ಅನನ್ಯವಾಗಿದೆ. ಜೊತೆಗೆ, ರಾಯಚೂರು ಆಡುಮಾತಿನಲ್ಲಿ ಬಳಕೆಯಾಗುವ ದೂಸ್ರ, ಹಕೀಕತ್ತು, ಬೇಖಬರ್, ಬಿಜಲಿ, ಬುರಖಾ, ಮರ್ಜಿ, ಸಡಕು, ಒಣ ದುಖಾನು, ಖತಲ್, ಧಗಾ, ಕುಶಾಮತ್ತು, ಬಿಮಾರಿ, ಭಿಕಾರಿ, ತೂಫಾನು, ಅಸರಂತ, ಅತ್ತರು, ಆವಾಜು, ರಿವಾಜು – ಇತ್ಯಾದಿ ಇತ್ಯಾದಿ ಸ್ಥಳೀಯ ಪದ ಪ್ರಯೋಗಗಳ ದೊಡ್ಡ ಪಟ್ಟಿಯೇ ಎದುರಾಗುತ್ತದೆ. – ದೇಶೀ ಭಾಷಾ ಪ್ರಯೋಗದ ಪ್ರತ್ಯೇಕ ಅಧ್ಯಯನಕ್ಕೆ ಅಗುಮಾಡುವ ತೆರದಲ್ಲಿ – ಇವರ ಶೈಲಿಯನ್ನು ಪರಾಂಬರಿಸಬೇಕಾಗಿದೆ :

**ಗಾಂಧಿ**

ಹುಟ್ಟುಗುರುಡರ
ಓಣಿಯಲ್ಲಿ
ಚಾಳೀಸು ಮಾರಿದವ
ಎನ್ನುವಲ್ಲಿನ ದೇಶದ ಚಾರಿತ್ರಿಕ ದುರಂತ;

**ರೊಟ್ಟಿ**

ವಿಸ್ತಾರದಲ್ಲಿ
ಭೂಮಿಗೂ ಮಿಗಿಲು
ಇದರ ಎತ್ತರ
ಎವರೆಸ್ಟಿಗೂ ದಿಗಿಲು

ಎನ್ನುವಲ್ಲಿನ ಹಸಿವಿನ ಭೀಕರತೆಯನ್ನು ರೊಟ್ಟಿಯ ರೂಪಕದಲ್ಲಿ ಹಿಡಿದಿರುವ ಪರಿ ಹೃದಯ ಹಿಂಡುತ್ತದೆ. ಇಂಥ ಕಾಡುವ ಗುಣ ಹೊಂದಿರುವ ಕಾವ್ಯ ನೀಡಿದ ಅಮರಚಿಂತರನ್ನು ಅಭಿನಂದಿಸಬೇಕು.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ
ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ ಎಫ್. ಬ್ಲಾಕ್, ಬೆಂಗಳೂರು - ೫೬೦ ೦೦೯



## ಅಂತರಂಗ ಮತ್ತು ಬಹಿರಂಗ (ಲೇಖನಗಳ ಸಂಗ್ರಹ)

*ಗೋಪಾಲ ಬಿ. ಶೆಟ್ಟಿ*

**ಪುಟ : ೧೬೨** ಬೆಲೆ : ರೂ. ೧೦೦

**ಸೂತನ ಪಬ್ಲಿಕೇಷನ್ಸ್**, 'ಆರಾಧನಾ', ಇಂದ್ರಾಳಿ ೩ನೇ ಅಡ್ಡರಸ್ತೆ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

ಇದೊಂದು ವೈಚಾರಿಕ ಲೇಖನಗಳ ಸಂಗ್ರಹ. ಪ್ರಚಲಿತ ರಾಜಕೀಯ ವಿದ್ಯಮಾನಗಳು, ದೇವರು, ಧರ್ಮ, ರಾಷ್ಟ್ರಭಕ್ತಿ – ಇತ್ಯಾದಿ ಹೆಸರಿನಲ್ಲಿ ಫ್ಯಾಸಿಸ್ಟ್ ಶಕ್ತಿಗಳು ಎಸಗುತ್ತಿರುವ ಜೀವವಿರೋಧಿ ಕೃತ್ಯಗಳನ್ನು ವೈಚಾರಿಕ ನೆಲೆಯಲ್ಲಿ ವಿಶ್ಲೇಷಿಸುವ ಲೇಖನಗಳು ಇಲ್ಲಿವೆ. ವಿಚಾರವಾದಿಯಾಗಿ ಗೋಪಾಲ ಬಿ. ಶೆಟ್ಟಿಯವರ ವೈಚಾರಿಕ ಒಳನೋಟದ ಪ್ರಗತಿಪರ ಚಿಂತನೆಯ ಲಹರಿಯನ್ನು ಇಲ್ಲಿನ ಲೇಖನಗಳುದ್ದಕ್ಕೂ ಕಾಣಬಹುದು. 'ಡಾ॥ ಅಂಬೇಡ್ಕರ್ ಮತ್ತು ಬೌದ್ಧಧರ್ಮ', 'ಬ್ರಾಹ್ಮಣ ಧರ್ಮದಿಂದ ಬೌದ್ಧಧರ್ಮದ ದಮನ' – ಲೇಖನಗಳು ವಸ್ತುನಿಷ್ಠ, ಮಾಹಿತಿ ಆಧಾರಿತ, ತರ್ಕಬದ್ಧ ಆಲೋಚನಾ ರೀತಿಯಿಂದಾಗಿ ನಮ್ಮನ್ನು ಚಿಂತನೆಗೆ ಹಚ್ಚುತ್ತವೆ. ಸಮಕಾಲೀನ ರಾಜಕೀಯ, ಸಾಂಸ್ಕೃತಿಕ ವಿಚಾರಗಳನ್ನು ವಸ್ತುನಿಷ್ಠವಾಗಿ ನೋಡುವ ಇಲ್ಲಿನ ಬಹುಪಾಲು ಲೇಖನಗಳು ಪ್ರಗತಿಪರವಾದದ್ದಷ್ಟೇ ಅಲ್ಲದೆ, ನಾವೆಲ್ಲರೂ ತಿಳಿಯಲೇಬೇಕಾದ ಅನೇಕ ಮಹತ್ತ್ವದ ವಿಚಾರಗಳನ್ನು ತಿಳಿಸುತ್ತವೆ.

## ಬಯಲ ಬೆಳಕು (ಮೂಡ್ನಾಕೂಡು ಚಿನ್ನಸ್ವಾಮಿ ಅವರ ಸಾಹಿತ್ಯಾನುಸಂಧಾನ)



*ಸಂ.: ಡಾ॥ ಅಪ್ಪಗೆರೆ ಸೋಮಶೇಖರ*

**ಪುಟ : xvi + ೩೦೦** ಬೆಲೆ : ರೂ. ೧೯೦

**ನಂದಿ ಬುಕ್‌ಹೌಸ್**, ನಂ. ಎಫ್೩, ೧೮ನೇ ಕ್ರಾಸ್, ರಾಮಾನುಜ ರಸ್ತೆ, ಕೆ. ಆರ್. ಮೊಹಲ್ಲಾ, ಮೈಸೂರು - ೪

ಕನ್ನಡದಲ್ಲಿ ದಲಿತತ್ತ್ವದಿಂದ ಬುದ್ಧತ್ತ್ವದೆಡೆಗೆ ಚಿಂತನೆಯ ಬಳ್ಳಿ ಹಬ್ಬಿಸಿ, ಕಥೆ, ನಾಟಕ, ಕವಿತೆ, ವ್ಯಕ್ತಿಚಿತ್ರ, ಅನುವಾದ, ಸಂಪಾದನೆ ಹಾಗೂ ವೈಚಾರಿಕ ಬರವಣಿಗೆ-ಕೃತಿಗಳನ್ನು ನೀಡಿರುವ ಮೂಡ್ನಾಕೂಡು ಚಿನ್ನಸ್ವಾಮಿಯವರ ಸಾಹಿತ್ಯಾನುಸಂಧಾನದ ಕೃತಿಯಿದು. ಮೂಡ್ನಾಕೂಡು ಚಿನ್ನಸ್ವಾಮಿಯವರ ಸಮಗ್ರ ಸಾಹಿತ್ಯದಲ್ಲಿನ ಮೌಲಿಕ ನೆಲೆಗಳನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ. ಅವರ ಬದುಕು-ಬರಹವನ್ನು ಆಮೂಲಾಗ್ರವಾಗಿ ಕಟ್ಟಿಕೊಡುವ ಪ್ರಯತ್ನ ಇಲ್ಲಿದೆ. ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಅವರ ಸಾಹಿತ್ಯ ಕುರಿತ ಲೇಖನಗಳು, ಅವರ ವ್ಯಕ್ತಿತ್ವ ಕುರಿತು ಲೇಖನಗಳು, ಸಂದರ್ಶನದ ಭಾಗ, ಹೆಜ್ಜೆಗುರುತು, ಇಂಗ್ಲಿಷ್ ಬರಹಗಳು – ಹೀಗೆ ಕೃತಿಯಲ್ಲಿ ಮೂಡ್ನಾಕೂಡು ಚಿನ್ನಸ್ವಾಮಿಯವರ ಬಹಮುಖೀ ಸೃಜನಶೀಲತೆಯನ್ನು ಅವರ ವ್ಯಕ್ತಿತ್ವದೊಡನೆ ಸಮರ್ಥವಾಗಿ ಸೆರೆಹಿಡಿದ ಸಮರ್ಥ ಲೇಖನಗಳಿಂದ ಈ ಕೃತಿ ರೂಪು ಪಡೆದಿದೆ.

## ಬಿಸಿಲು-ಬೆಳದಿಂಗಳು (ಅಂಕಣ ಬರಹಗಳು)



*ಶ್ರೀ ತರಳಬಾಳು ಜಗದ್ಗುರು ಡಾ॥ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು*

**ಪುಟ : ೧೨೧ + xviii** ಬೆಲೆ : ರೂ. ೩೦

**ಸಾಹಿತ್ಯಸಿರಿ**, ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ - ೫೭೭ ೫೪೧, ಚಿತ್ರದುರ್ಗ ಜಿಲ್ಲೆ

'ಬಿಸಿಲು-ಬೆಳದಿಂಗಳು' ಅಂಕಣ ಬರಹಗಳ ಸಂಗ್ರಹ. ಪ್ರಬಂಧದ ಮಾದರಿಯಲ್ಲಿರುವ ಇಲ್ಲಿನ ಲೇಖನಗಳು ವೈವಿಧ್ಯಮಯ ವಸ್ತು-ವಿಷಯಗಳಿಂದ ಕೂಡಿವೆ. 'ಕೀರ್ತಿಶನಿ', 'ಸ್ವಾತಂತ್ರ್ಯ ಹೋರಾಟಗಾರರು v/s ಟಿಕೆಟ್ಟು ಹೋರಾಟಗಾರರು', 'ಹಳ್ಳಿಗರ ಉಸಿರು ಬಸವಣ್ಣ', 'ಧರ್ಮ ಸಮನ್ವಯ' – ಹೀಗೆ ಇಲ್ಲಿನ ಬಹುಪಾಲು ಲೇಖನಗಳಲ್ಲಿ ಪ್ರಗತಿಪರ ಚಿಂತನೆಯ ಜತೆಗೆ ಹಾಸ್ಯಲೇಪನವಿದ್ದು ವಾಸ್ತವಿಕ ಬದುಕಿನ ಸಾಮಾಜಿಕ ಚಿತ್ರಣವನ್ನು , ಬಿರುಕನ್ನು ಎತ್ತಿ ತೋರಿಸಿ, ಆಲೋಚಿಸುವಂತೆ ಮಾಡುತ್ತವೆ. ಬಹುಪಾಲು ಲೇಖನಗಳು ಸಾಮಾಜಿಕ ಒಡನಾಟದ ಮೂಲಕ, ಅನುಭವದಿಂದ ಗಳಿಸಿದ ತಿಳುವಳಿಕೆಯ ಚಿಂತನೆಗಳಾಗಿದ್ದು, ಸರಳವಾಗಿ ಓದಿಸಿಕೊಂಡು ಹೋಗುತ್ತವೆ

## ಲಿಂಗತ್ವ ಸಮನ್ಯಾಯದೆಡೆಗೆ



*ಡಾ॥ ಸಬಿಹಾ ಭೂಮಿಗೌಡ*

**ಪುಟ : ೧೨೮ + XII** ಬೆಲೆ : ರೂ. ೭೦

**ಕರ್ನಾಟಕ ಸಂಘ (ರಿ), ಮಂಡ್ಯ**, ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಗುರುಭವನದ ಹಿಂಭಾಗ, ಆರ್. ಪಿ. ರಸ್ತೆ, ಮಂಡ್ಯ - ೫೭೧ ೪೦೧

ಕ್ಷೇತ್ರಕಾರ್ಯದ ಮೂಲಕ ಮಾಹಿತಿ, ಅಂಕಿ-ಅಂಶಗಳನ್ನು ಕಲೆಹಾಕಿ ರೂಪಿಸಿರುವ ಕೃತಿಯಿದು. 'ಲಿಂಗ' ಭಿನ್ನತೆ ಎಂಬುದು ಸಹಜ. ಆದರೆ 'ಲಿಂಗತ್ವ' – ಎಂಬುದು ಒಂದು ಸಾಮಾಜಿಕ ರಚನೆಯಾಗಿದೆ – ಎಂಬ ತಾತ್ತ್ವಿಕತೆಯ ಮೂಲಕ ಅಧ್ಯಯನ ಕೈಕೊಂಡು ಹಲವಾರು ಮಹತ್ತ್ವದ ವಿಚಾರಗಳನ್ನು ಲೇಖಕಿ ಹೊರಹಾಕಿದ್ದಾರೆ. ಸ್ತ್ರೀತ್ವ ಮತ್ತು ಪುರುಷತ್ವ ಹೇರಿಕೆ, ಅದನ್ನಾಧರಿಸಿ ಜವಾಬ್ದಾರಿಯ ಹಂಚಿಕೆ, ಮಕ್ಕಳ ಲಾಲನೆ-ಪಾಲನೆಯ ಜವಾಬ್ದಾರಿ – ಹೀಗೆ ಅನೇಕ ಅಂಶಗಳ ಕುರಿತಾದ ಸಾಮಾಜಿಕ ಸ್ವರೂಪವನ್ನು ಇಲ್ಲಿ ವಿವರಿಸಲಾಗಿದೆ. ಲಿಂಗತ್ವದ ಅಸಮಾನತೆಯನ್ನು ತಿಳಿಸುತ್ತಲೇ, ಸ್ತ್ರೀಯರ ಮೇಲಿನ ದೌರ್ಜನ್ಯಕ್ಕೆ, ಇದೇ ತಿಳುವಳಿಕೆ ಕಾರಣವೆಂದು ತರ್ಕಿಸಲಾಗಿದೆ.



## ಶರಣ ಸಂಸ್ಕೃತಿ ಸಂವಾದ

*ಡಾ॥ ಎಚ್. ಟಿ. ಪೋತೆ*

**ಪುಟ : xii + ೯೬** ಬೆಲೆ : ರೂ. ೫೦

**ಸಪ್ನ ಬುಕ್ ಹೌಸ್ ಪ್ರೈವೇಟ್ ಲಿಮಿಟೆಡ್**, ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು - ೫೬೦ ೦೦೯

ಪ್ರಗತಿಪರ ಚಿಂತಕರಾದ ಪೋತೆಯವರು ಜಾನಪದ ಹಾಗೂ ದಲಿತ, ಬಂಡಾಯ ಕ್ಷೇತ್ರದಲ್ಲಿ ಸಾಹಿತ್ಯರಚನೆ ಮಾಡುತ್ತಿದ್ದಾರೆ. ಸಂಶೋಧನೆ, ವಿಚಾರ, ವಿಮರ್ಶೆ, ಅನುವಾದ ಮುಂತಾದ ಪ್ರಕಾರಗಳಲ್ಲಿ ತೊಡಗಿಕೊಂಡು ಕನ್ನಡ ಓದುಗರಿಗೆ ಅನೇಕ ಮೌಲಿಕ ಕೃತಿಗಳನ್ನು ನೀಡಿದ್ದಾರೆ. ಈ ಕೃತಿಯು ಬಸವಾದಿ ಶರಣರ ಕಾಯಕ ಸಂಸ್ಕೃತಿಯ ಸಾಮಾಜಿಕ-ಧಾರ್ಮಿಕ ಹಿನ್ನೆಲೆಯ ಹನ್ನೆರಡು ಲೇಖನ ಗಳನ್ನು ಒಳಗೊಂಡಿದೆ. ಶೋಷಿತರು ಮತ್ತು ಕೆಳವರ್ಗದವರಾದ ದಲಿತ ವಚನಕಾರರ ಸಾಮಾಜಿಕ, ಸಾಂಸ್ಕೃತಿಕ ಮಹತ್ತ್ವವನ್ನು ಅವರ ವಚನಗಳ ಸಾಹಿತ್ಯಕ ಮೌಲ್ಯದೊಂದಿಗೆ ಚರ್ಚಿಸಿ, ಕಾಯಕದ, ಜಂಗಮತ್ವದ ಹಿರಿಮೆಯನ್ನು ಲೇಖಕರು ಎತ್ತಿಹಿಡಿದಿದ್ದಾರೆ. 'ಬಸವಣ್ಣ ನಿರ್ಮಿಸಿದ ಸಮಾಜ', 'ಬುದ್ಧ-ಬಸವರ ಸಾಮಾಜಿಕ ಚಿಂತನೆ', 'ಜಾತಿಪದ್ಧತಿಯ ಕರಾಳ ಮುಖಗಳು', 'ಕೆಳವರ್ಗದ ವಚನಕಾರರು - ಕಾಯಕ ಸಂಸ್ಕೃತಿ' – ಇವುಗಳ ಲಾವರಣದ ಮೂಲಕ ಶರಣ ಸಂಸ್ಕೃತಿಯನ್ನು ಸೂಕ್ಷ್ಮವಾಗಿ, ಸಮಗ್ರವಾಗಿ ವಿಶ್ಲೇಷಿಸಲಾಗಿದೆ. ಬಸವಣ್ಣನ ವಿಚಾರಗಳನ್ನು ಬುದ್ಧ, ಪೆರಿಯಾರ್ ರಾಮಸ್ವಾಮಿ, ಛತ್ರಪತಿ ಶಾಹು ಮಹಾರಾಜರ ವಿಚಾರಗಳೊಡನೆ ತೌಲನಿಕವಾಗಿ ಚರ್ಚಿಸಿ, ಅವು ಇಂದಿಗೂ ಹೇಗೆ ಪ್ರಸ್ತುತವಾಗಿವೆ ಎಂಬುದನ್ನು ಲೇಖಕರು ವಿಶ್ಲೇಷಿಸಿದ್ದಾರೆ.

## ಪೂರ್ವೇತಿಹಾಸ



*ಪ್ರೊ॥ ಇರ್ಫಾನ್ ಹಬೀಬ್; ಕನ್ನಡಕ್ಕೆ : ಪ್ರದೀಪ್ ಬೆಳಗಲ್*

**ಪುಟ : ೧೧೨** ಬೆಲೆ : ರೂ. ೮೦

**ಚಿಂತನ ಪುಸ್ತಕ**, ನಂ. ೧೮೬೩, ೩೮ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

ಇದೊಂದು ಇತಿಹಾಸದ ಕೃತಿ. ಇದರಲ್ಲಿ ಪ್ರಾಗೈತಿಹಾಸಿಕ ಕಾಲದ ಮನುಷ್ಯ ಸಂಸ್ಕೃತಿಗಳ ಇತಿಹಾಸವನ್ನು ನಿರೂಪಿಸಲಾಗಿದೆ. ಪ್ರಾಗೈತಿಹಾಸಿಕ ಬುನಾದಿಯ ಮೇಲೆ ಪ್ರಾಕ್ತನಾಧಾರಗಳ ಮೂಲಕ ಇತಿಹಾಸವನ್ನು ಒಂದು ಕಥನವನ್ನಾಗಿಸಿರುವುದು ಈ ಕೃತಿಯ ವಿಶಿಷ್ಟತೆ. ಕೋಮುವಾದಿ ನಿರೂಪಣೆಗಳನ್ನು ಸರಿಸಿ, ವೈಜ್ಞಾನಿಕ ಇತಿಹಾಸವನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಸೆಕ್ಯುಲರ್ ನಿಲುವಿನಿಂದ ರೂಪುತಳೆದ ಈ ಕೃತಿಯಲ್ಲಿ ಅನೇಕ ಮಹತ್ತ್ವದ ಮಾಹಿತಿಗಳು ಮತ್ತು ವಿಚಾರಗಳು ಗೋಚರಿಸುತ್ತವೆ. 'ಭಾರತದ ಭೂ ಸ್ವರೂಪ ಹಾಗೂ ನೈಸರ್ಗಿಕ ವಾತಾವರಣ', 'ಮಾನವ ಸಂತತಿಯ ಉಗಮ, ಆದಿ ಮಾನವ ಹಾಗೂ ಆಧುನಿಕ ಮಾನವ (ಹೋಮೋ ಸೇಪಿಯನ್ಸ್ ) ಸಂತತಿಗಳ ಕುರಿತ ಆಧಾರಗಳನ್ನು ಆಧರಿಸಿದ ಅಧ್ಯಯನ' – ಹೀಗೆ ಭಾರತದ ಪೂರ್ವೇತಿಹಾಸ ಈ ಕೃತಿಯಲ್ಲಿ ಹೊಸ ಬಗೆಯಲ್ಲಿ ರಚನೆಗೊಂಡಿದೆ.

– ಡಾ॥ ಸುಜಾತ ಲಕ್ಷ್ಮೀಪುರ
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೨೯

ಇತ್ತೀಚೆಗೆ ದೇಶದಲ್ಲಿ ಸಂಚಲನ ಮೂಡಿಸಿದ್ದ ಉತ್ತರ ಪ್ರದೇಶದ ನೋಯಿಡಾದ ಆರುಶಿ-ಹೇಮರಾಜ್ ಕೊಲೆ ಪ್ರಕರಣ ಸರ್ವೋಚ್ಚ ನ್ಯಾಯಾಲಯದ ಅಂತಿಮ ತೀರ್ಪಿನ ನಂತರದಲ್ಲಿ ನೇಪಥ್ಯಕ್ಕೆ ಸರಿದಿದ್ದರೂ, ಈ ಕೊಲೆ ಪ್ರಕರಣವನ್ನು ತಮ್ಮದೇ ಆದ ರೀತಿಯಲ್ಲಿ ರಂಜನೀಯವಾಗಿ ಚಿತ್ರಿಸಿ ವ್ಯಾಖ್ಯಾನ ನೀಡಲೆತ್ನಿಸಿದ ದೃಶ್ಯ ಮಾಧ್ಯಮಗಳ ಸಾಮಾಜಿಕ ಹೊಣೆಗಾರಿಕೆಯ ಬಗ್ಗೆ ವ್ಯಾಪಕವಾದ ಚರ್ಚೆ ಪ್ರಾರಂಭವಾಗಿದೆ. ನಿಜಜೀವನದಲ್ಲಿ ನಡೆಯುವ ಕೆಲವು ಆಕಸ್ಮಿಕ-ಉದ್ದೇಶಪೂರಿತ ಘಟನೆಗಳು ಮತ್ತು ನಾಗರಿಕ ಸಮಾಜದಲ್ಲಿ ನಡೆಯುವ ಪಾತಕ ಕೃತ್ಯಗಳು ಒಂದು ರೀತಿಯಲ್ಲಿ ವಾರ್ತಾ ಮತ್ತು ಮನರಂಜನಾ ಟಿವಿ ವಾಹಿನಿಗಳ ಜನಪ್ರಿಯತೆಯನ್ನು, ಮಾರುಕಟ್ಟೆಯನ್ನು, ಗ್ರಾಹಕರ ಸಂಖ್ಯೆಯನ್ನು ಹೆಚ್ಚಿಸುವ ಸಾಧನಗಳಾಗಿ ಪರಿಣಮಿಸುತ್ತಿವೆ. ಇತ್ತೀಚೆಗೆ ದೇಶದ ಸರ್ವೋಚ್ಚ ನ್ಯಾಯಾಲಯವೂ ಸಹ ಮಾಧ್ಯಮಗಳಿಗೆ ಪ್ರಕರಣಗಳನ್ನು ಸಂಯಮದಿಂದ ಪ್ರಸ್ತುತಪಡಿಸಲು ಎಚ್ಚರಿಕೆ ನೀಡಿದೆ.

# ಮಾಧ್ಯಮ ಮತ್ತು ಸಾಮಾಜಿಕ ಹೊಣೆಗಾರಿಕೆ

ಜಿ. ಬಾಲಾಜಿ

**ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಾಧ್ಯಮಗಳಿಗೆ ಸಾಮಾಜಿಕ ಹೊಣೆಗಾರಿಕೆ ಅಗತ್ಯವಾಗಿ ಇರಬೇಕಾಗುತ್ತದೆ. ಸಮಾಜವನ್ನು ಕಾಡುತ್ತಿರುವ ಮೂಢನಂಬಿಕೆಗಳು, ಮತೀಯವಾದ, ಜಾತಿವಾದ, ಕೋಮುವಾದ ಇಂತಹ ಗಂಭೀರ ಸಮಸ್ಯೆಗಳ ಬಗ್ಗೆ ಸಾರ್ವಜನಿಕ ರಂಗದಲ್ಲಿ ಒಂದು ಚರ್ಚೆಯನ್ನು ಏರ್ಪಡಿಸುವ ನಿಟ್ಟಿನಲ್ಲಿ ಪತ್ರಿಕಾ ಮಾಧ್ಯಮದಷ್ಟೇ ಜವಾಬ್ದಾರಿ ದೃಶ್ಯ ಮಾಧ್ಯಮಗಳಿಗೂ ಇರುತ್ತದೆ. ನಮ್ಮ ದೇಶದ ಶೇ. ೪೦ಕ್ಕೂ ಹೆಚ್ಚು ಜನತೆ ಶಿಕ್ಷಣದಿಂದ ವಂಚಿತರಾಗಿದ್ದು, ಭೌತಿಕವಾಗಿ ಹಿಂದುಳಿದಿರುವುದರಿಂದ ಈ ಜನರಲ್ಲಿ ಆಧುನಿಕ ಚಿಂತನೆಗಳನ್ನು ಮೂಡಿಸುವ ಮೂಲಕ ಅಭಿವೃದ್ಧಿಯತ್ತ ಕೊಂಡೊಯ್ಯುವುದು ಮಾಧ್ಯಮಗಳ ನೈತಿಕ ಹೊಣೆಗಾರಿಕೆಯಾಗಿರುತ್ತದೆ**

ಈ ಹಿಂದೆಯೂ ಜೆಸ್ಸಿಕಾ ಲಾಲ್ ಹತ್ಯೆ ಮುಂತಾದ ಪ್ರಕರಣಗಳಲ್ಲಿ ಮಾಧ್ಯಮಗಳು ಇದೇ ರೀತಿಯ ಟೀಕೆಗೊಳಗಾಗಿದ್ದವು. ಪ್ರಜಾತಂತ್ರವ್ಯವಸ್ಥೆಯ ನಾಲ್ಕನೆಯ ಸ್ತಂಭವೆಂದು ಪರಿಗಣಿಸಲ್ಪಡುವ ಮಾಧ್ಯಮಗಳ ಪಾತ್ರ ವ್ಯಾಪಕ ಟೀಕೆಗೊಳಗಾದದ್ದು ಈ ಪ್ರಕರಣದಿಂದಲೇ. ಮಾಧ್ಯಮಗಳ ಪ್ರಭಾವದಿಂದ ಜೆಸ್ಸಿಕಾ ಲಾಲ್ ಪ್ರಕರಣದಲ್ಲಿ ನೊಂದವರಿಗೆ ಶೀಘ್ರ ನ್ಯಾಯ ದೊರಕಿತಾದರೂ, ಮಾಧ್ಯಮಗಳ ಅತಿ ರಂಜನೀಯ ವರದಿಗಳು ಜನಮನ್ನಣೆ ಗಳಿಸಲಿಲ್ಲ. ಆರುಶಿ-ಹೇಮರಾಜ್ ಹತ್ಯಾ ಪ್ರಕರಣದಲ್ಲೂ ಸಹ ಇದೇ ರೀತಿ ವರ್ತಿಸಿದ ಮಾಧ್ಯಮಗಳು ಪ್ರಕರಣ ನ್ಯಾಯಾಲಯದಲ್ಲಿರುವಾಗಲೇ ತಮ್ಮದೇ ಆದ ತನಿಖೆಗಳನ್ನು ನಡೆಸಿ, ಆರುಶಿಯ ತಂದೆ ತಳ್ವಾರ್ ಅವರನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿದ್ದು ವ್ಯಾಪಕ ಟೀಕೆಗೊಳಗಾಗಿದೆ. ಮಾಧ್ಯಮಗಳ ಅಧ್ಯಯನ ಕೇಂದ್ರದ ಒಂದು ಸಮೀಕ್ಷೆಯ ಪ್ರಕಾರ ಮೇ ೧೬ರಿಂದ ಜೂನ್ ೭ರವರೆಗೆ, ಆರು ಪ್ರಮುಖ ಟಿ.ವಿ ಚಾನೆಲ್‌ಗಳು ೯೨ ಗಂಟೆಗಳ ಆದ್ಯತಾ ಅವಧಿಯಲ್ಲಿ (ಸಂಜೆ ೭ರಿಂದ ರಾತ್ರಿ ೧೧ರವರೆಗೆ) ೪೦ ಗಂಟೆಗಳ ಕಾಲ ಅಂದರೆ ಶೇ. ೪೨ರಷ್ಟು ವೇಳೆಯಲ್ಲಿ ಈ ಪ್ರಕರಣವನ್ನೇ ಬಿಂಬಿಸಿವೆ. ಈ ಪ್ರಕರಣದ ಬಗ್ಗೆ ಆರು ಚಾನೆಲ್‌ಗಳು ೨೩ ದಿನಗಳಲ್ಲಿ ೨೩೪ ವರದಿಗಳನ್ನೂ, ೬೨ ವಿಶೇಷ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡಿದ್ದವು.

ಈ ಪಾತಕಕೃತ್ಯಗಳನ್ನು ರಂಜನೀಯವಾಗಿಸಲು ಮಾಧ್ಯಮಗಳು ಹಲವಾರು ಮಾರ್ಗಗಳನ್ನು ಅನುಸರಿಸುತ್ತವೆ. ಉದಾಹರಣೆಗೆ, 'ಟೈಮ್ಸ್ ನೌ' ಚಾನೆಲ್‌ನಲ್ಲಿ ಆರುಶಿ ಪ್ರಕರಣದಲ್ಲಿ ಆರುಶಿಯ ಮೊಬೈಲ್ ಫೋನಿಗೆ ಯಾವ ಸಮಯದಲ್ಲಿ, ಯಾರು ಮಾತನಾಡುತ್ತಾರೆ ಎಂದು ತೋರಿಸುವುದು, ಎನ್.ಡಿ.ಟಿ.ವಿ.ಯಲ್ಲಿ ಮೃತಪಟ್ಟ ಹುಡುಗಿ ಬದುಕಿದ್ದಾಗ ಏನೇನು ಮಾಡುತ್ತಿದ್ದಳು ಎಂದು ಪದೇ ಪದೇ ತೋರಿಸುವುದು, ಇಂಡಿಯಾ ಟಿವಿಯಲ್ಲಿ ಎಲ್ಲ ಪ್ರಕರಣಗಳನ್ನು ಸೆರೆ ಹಿಡಿಯುವ ಮೊಬೈಲ್ ಟವರನ್ನೇ ತೋರಿಸಿ ಎಲ್ಲವನ್ನೂ ಬಲ್ಲ ಟವರ್ ಎಂದು ಬಣ್ಣಿಸುವುದು, ಆಜ್ ತಕ್ ಟಿವಿಯಲ್ಲಿ, ತಳ್ವಾರ್‌ರವರ ಮನೆಯನ್ನೇ ಹೋಲುವ ಮತ್ತೊಂದು ಮನೆಯಲ್ಲಿ ಇಡೀ ಪ್ರಕರಣವನ್ನು ಕೃತಕವಾಗಿ ಚಿತ್ರೀಕರಿಸಿ, ತಳ್ವಾರರನ್ನು ಅಪರಾಧಿ ಎಂದು ಸಾಬೀತು ಮಾಡಲು ಯತ್ನಿಸುವುದು, ಹೆಡ್‌ಲೈನ್ಸ್ ಟುಡೇ ಚಾನಲ್‌ನಲ್ಲಿ ಇತ್ಯರ್ಥಗೊಳ್ಳದ ಕೊಲೆಪ್ರಕರಣಗಳ ಇತಿಹಾಸವನ್ನೇ ಬಿತ್ತರಿಸುವುದು ಹೀಗೆ ತಮ್ಮದೇ ಆದ ರೀತಿಯಲ್ಲಿ ಪಾತಕಿ ಪ್ರಕರಣಗಳನ್ನು ವೈಭವೀಕರಿಸುತ್ತ ನೋಡುಗರನ್ನು ಸೆಳೆಯಲು ಮಾಧ್ಯಮಗಳು ಯತ್ನಿಸಿದ್ದು ಆರುಶಿ ಪ್ರಕರಣದಲ್ಲಿ ಸಾಬೀತಾಗಿತ್ತು. ವೈದ್ಯ ದಂಪತಿಗಳಾದ ರಾಜೇಶ್ ಮತ್ತು ನೂಪುರ್ ತಳ್ವಾರ್ ನಿರಪರಾಧಿಗಳೆಂದು ಸಿ.ಬಿ.ಐ. ತೀರ್ಪು ನೀಡಿರುವುದು ಮಾಧ್ಯಮಗಳಿಗೆ ಮುಖಭಂಗವಾಗಿರುವುದೇ ಅಲ್ಲದೆ, ಮಾಧ್ಯಮಗಳ ಹೊಣೆಗಾರಿಕೆಯ ಬಗ್ಗೆ ಗಂಭೀರ ಚರ್ಚೆಗೂ ಆಸ್ಪದ ನೀಡಿದೆ. ಇನ್ನೊಂದೆಡೆ ಮಾಧ್ಯಮಗಳಿಗೆ ಆತ್ಮಾವಲೋಕನಕ್ಕೂ ಅವಕಾಶ ನೀಡಿದೆ.

## ಮಾಧ್ಯಮ ಮತ್ತು ಮಾರುಕಟ್ಟೆ

ಅಪರಾಧ ಪ್ರಕರಣಗಳು ಮತ್ತು ಪಾತಕ ಕೃತ್ಯಗಳು ಹಲವಾರು ಸಂದರ್ಭಗಳಲ್ಲಿ ಮಾಧ್ಯಮಗಳ ಮಾರುಕಟ್ಟೆ ವಿಸ್ತರಣೆಯ ಸರಕುಗಳಾಗಿಬಿಡುತ್ತವೆ. ಕೆಲವು ದಿನಪತ್ರಿಕೆಗಳು ತಮ್ಮ ಪ್ರಾರಂಭಿಕ ಹಂತಗಳಲ್ಲಿ ಗ್ರಾಹಕರನ್ನು ಸೆಳೆಯಲು ಈ ತಂತ್ರಗಳನ್ನು ಅನುಸರಿಸುವುದು ಸಾಮಾನ್ಯ ಸಂಗತಿ. ಕೆಲವು ಪ್ರತಿಷ್ಠಿತ ಪತ್ರಿಕೆಗಳ ಸಂಪಾದಕರು ತಮ್ಮ ಈ ತಂತ್ರಗಾರಿಕೆಯನ್ನು



ಸಮರ್ಥಿಸಿಕೊಳ್ಳಲು ಜನಸಾಮಾನ್ಯರ ಅಭಿರುಚಿಗಳನ್ನೇ ಬಂಡವಾಳವನ್ನಾಗಿ ಪರಿಗಣಿಸುತ್ತಾರೆ. ''ಸಾಮಾನ್ಯ ಜನತೆಯಲ್ಲಿ ಹೆಚ್ಚಿನವರು ರಾಜಕೀಯ ಸುದ್ದಿಗಳನ್ನು ಓದುವುದಿಲ್ಲ. ಅವರಿಗೆ ಅಪರಾಧಗಳ ಸುದ್ದಿಗಳೇ ರೋಚಕವಾಗಿರುತ್ತವೆ. ಅವರ ಅಭಿರುಚಿಗೆ ಪೂರಕವಾಗಿ ನಾವು ಸುದ್ದಿ ನೀಡದಿದ್ದಲ್ಲಿ ನಮ್ಮ ಪತ್ರಿಕೆಯನ್ನು ಓದುವವರೇ ಇರುವುದಿಲ್ಲ'' ಎಂದು ಅನೇಕ ಸಂಪಾದಕರು ಹೇಳುವುದುಂಟು.

''ಪಾತಕೀ ಕೃತ್ಯಗಳನ್ನು ತಿಳಿದುಕೊಳ್ಳಲು ಮಾರುಕಟ್ಟೆಯಲ್ಲಿ ಗ್ರಾಹಕರ ಬೇಡಿಕೆಯು ಹೆಚ್ಚಾಗಿರುವುದರಿಂದಲೇ ಈ ಸುದ್ದಿಗಳು ದೃಶ್ಯ ಮತ್ತು ಪತ್ರಿಕಾ ಮಾಧ್ಯಮಗಳಲ್ಲಿ ಹೆಚ್ಚಾಗುತ್ತಿವೆ'' ಎಂದು ಕೆಲವು ತಜ್ಞರು ಪ್ರತಿಪಾದಿಸುತ್ತಾರೆ. ದಿನನಿತ್ಯ ಟಿವಿ ವಾರ್ತೆಗಳನ್ನು ನೋಡುವವರಲ್ಲಿ ಬಹುತೇಕ ಗ್ರಾಹಕರು ಗಂಭೀರ ಸುದ್ದಿಗಳಿಗಿಂತಲೂ ತಮ್ಮ ಪ್ರದೇಶಗಳಲ್ಲಿ ನಡೆದಿರುವ ಅಪರಾಧಗಳನ್ನು, ಪಾತಕಿ ಕೃತ್ಯಗಳನ್ನು ಹೆಚ್ಚಾಗಿ ನೋಡಬಯಸುತ್ತಾರೆ ಎಂದು ಕೆಲವು ಸಮೀಕ್ಷಕರು ಹೇಳುವುದುಂಟು. ಹಾಗಾಗಿಯೇ ಎಲ್ಲಾ ಭಾಷೆಗಳ ವಾರ್ತಾ ವಾಹಿನಿಗಳಲ್ಲೂ, ಸುದ್ದಿಗಿಂತಲೂ ಅಪರಾಧಗಳ ವೈಭವೀಕರಣ ಹೆಚ್ಚಾಗಿರುವುದನ್ನು ಕಾಣಬಹುದು. ಇತ್ತೀಚೆಗೆ ವಾರ್ತೆಗಳ ಸಮಯದಲ್ಲಿ ರಿಯಾಲಿಟಿ ಶೋಗಳು ಸಿನಿಮಾ ಸುದ್ದಿಗಳೇ ಪ್ರಮುಖವಾಗಿರುವುದನ್ನೂ ಈ ವಿದ್ಯಮಾನದ ಪರಿಣಾಮವೆಂದು ಹೇಳಲಾಗುತ್ತದೆ. ತಮ್ಮ ಮಾರುಕಟ್ಟೆಯನ್ನು ಹೆಚ್ಚಿಸಿಕೊಳ್ಳಲು ಖಾಸಗಿ ವಾಹಿನಿಗಳು ವಾರ್ತಾ ಕಾರ್ಯಕ್ರಮದಲ್ಲಿ ರಾಜಕೀಯ ಸುದ್ದಿಯನ್ನು ಗಣನೀಯವಾಗಿ ಕಡಿಮೆ ಮಾಡಿರುವುದನ್ನೂ ಗಮನಿಸಬಹುದು. ಹಿಂದಿ ವಾರ್ತಾವಾಹಿನಿಗಳಲ್ಲಿ ರಾಜಕೀಯ ಸುದ್ದಿಗಳ ಪ್ರಮಾಣ ೨೦೦೫ರಲ್ಲಿ ಶೇ. ೨೩ರಷ್ಟಿದ್ದುದು ೨೦೦೭ರಲ್ಲಿ ಶೇ. ೧೦ರಷ್ಟಾಗಿತ್ತು. ಇದೇ ಅವಧಿಯಲ್ಲಿ ಕ್ರೀಡೆ, ಮನರಂಜನೆ ಮತ್ತು ಅಪರಾಧಗಳ ಸುದ್ದಿಗಳು ಶೇ. ೨೮ರಿಂದ ಶೇ. ೫೩ರಷ್ಟಾಗಿತ್ತು. ಕೃಷಿ, ಉದ್ಯೋಗ, ಶಿಕ್ಷಣ, ಪರಿಸರ, ಆರೋಗ್ಯ ಇತ್ಯಾದಿ ಸುದ್ದಿಗಳಿಗೆ ಈ ವಾಹಿನಿಗಳಲ್ಲಿ ಸಿಗುವ ಅವಕಾಶ ನಗಣ್ಯ.

ಇಲ್ಲಿ ಮಾರುಕಟ್ಟೆ ಎಂದರೆ ಅದು ಯಾವ ಜನಸಮುದಾಯವನ್ನು ಒಳಗೊಂಡಿರುತ್ತದೆ ಎಂಬ ಪ್ರಶ್ನೆಯೂ ಮುಖ್ಯವಾಗುತ್ತದೆ. ಟಿವಿ ವಾಹಿನಿಗಳು ತಮ್ಮ ಗ್ರಾಹಕ ಪರಿವಾರವನ್ನು ಗುರುತಿಸಲು ಕೈಗೊಳ್ಳುವ ಸಮೀಕ್ಷೆಗಳು ಎಷ್ಟರ ಮಟ್ಟಿಗೆ ವೈಜ್ಞಾನಿಕವಾಗಿರುತ್ತವೆ, ಸಹಜವಾಗಿರುತ್ತವೆ ಎಂದು ಹೇಳಲಾಗುವುದಿಲ್ಲ. ಎಸ್.ಎಂ.ಎಸ್.ಗಳ ಮೂಲಕ, ಅಂತರ್ಜಾಲದ ಮೂಲಕ ನಡೆಯುವ ಸಮೀಕ್ಷೆಗಳು ಈ ಟಿ.ಆರ್.ಪಿ. ಪ್ರಮಾಣವನ್ನು ನಿರ್ಧರಿಸುತ್ತವೆ. ಇಲ್ಲಿ ಮಧ್ಯಮ ವರ್ಗದ ಜನತೆಯ ಆಶೋತ್ತರಗಳು ವ್ಯಕ್ತವಾಗುತ್ತದೆಯೇ ಹೊರತು ಸಾಮಾನ್ಯ ಜನತೆಯ ಅಭಿಪ್ರಾಯಗಳಿಗೆ ಅವಕಾಶ ಇರುವುದಿಲ್ಲ. ಭಾರತದಲ್ಲಿ ೨೦ಕೋಟಿಗೂ ಹೆಚ್ಚು ಮೊಬೈಲ್ ಗ್ರಾಹಕರಿದ್ದಾರೆಂದು ಹೇಳುವುದಾದರೂ ಎಸ್.ಎಂ.ಎಸ್ ಬಗ್ಗೆ ಅರಿವಿರುವವರ ಸಂಖ್ಯೆ ಗೌಣವೆಂದೇ ಹೇಳಬಹುದು. ಈ ದೃಷ್ಟಿಯಿಂದ ನೋಡಿದಾಗ ಟಿವಿ ವಾಹಿನಿಗಳ ಸಮೀಕ್ಷೆ ಮತ್ತು ಪ್ರತಿಪಾದನೆಗಳು ಎಷ್ಟರಮಟ್ಟಿಗೆ ಸಮಂಜಸ ಎಂಬ ಅನುಮಾನ ಮೂಡುತ್ತದೆ. ಎನ್.ಡಿ.ಟಿ.ವಿ. ವಾಹಿನಿಯಲ್ಲಿ ನಡೆಯುವ ಬಿಗ್ ಫೈಟ್ ಅಥವಾ ಇಂಡಿಯಾ ಡಿಬೇಟ್ ಮುಂತಾದ ಚರ್ಚಾ ಕಾರ್ಯಕ್ರಮಗಳಲ್ಲಿ ಕೆಲವು ಬುದ್ಧಿಜೀವಿಗಳು ಮತ್ತು ಚುನಾಯಿತ ಜನತೆ ಮಾತ್ರ ಪಾಲ್ಗೊಂಡರೂ ಅಲ್ಲಿ ನಡೆಯುವ ವಾದ ವಿವಾದ ಮತ್ತು ಮೂಡಿಬರುವ ಅಭಿಪ್ರಾಯಗಳನ್ನು ಇಡೀ ದೇಶದ ಅಭಿಪ್ರಾಯವೆಂದೇ ಬಿಂಬಿಸಲಾಗುತ್ತದೆ. ಮೀಸಲಾತಿ ವಿವಾದದ ಸಮಯದಲ್ಲಿ ಈ ವಿದ್ಯಮಾನ ಸಾಮಾನ್ಯವಾಗಿತ್ತು.

**ವಾಸ್ತವತೆಯ ಪಕ್ಷಿನೋಟ**

ಜನರು ಏನನ್ನು ಬಯಸುತ್ತಾರೋ ಅದನ್ನೇ ನಾವು ನೀಡುತ್ತೇವೆ ಎಂಬ ಮಾರುಕಟ್ಟೆ ಸಿದ್ಧಾಂತವನ್ನು ಸಮರ್ಥಿಸಿಕೊಳ್ಳುವ ಖಾಸಗಿ ಟಿವಿ ವಾಹಿನಿಗಳು ತಮ್ಮ ಗ್ರಾಹಕರಿಗೆ ಏನನ್ನು ತೋರಿಸುತ್ತಿವೆ ಎಂದು ನೋಡಿದಾಗ ಸಿನಿಮಾ ಸುದ್ದಿ, ಸಂಗೀತ, ಫ್ಯಾಷನ್ ಷೋಗಳು, ಜ್ಯೋತಿಷ್ಯ ಮತ್ತು ಕ್ರಿಕೆಟ್ ಇವುಗಳನ್ನು ಪ್ರಮುಖವಾಗಿ ಗುರುತಿಸಬಹುದು. ಬಹುಶಃ ಜ್ಯೋತಿಷ್ಯ ಕಾರ್ಯಕ್ರಮವಿಲ್ಲದ ಟಿವಿ ವಾಹಿನಿಯೇ ಇಲ್ಲವೆಂದು ಹೇಳಬಹುದು. ಯಾವುದೇ ವಾಹಿನಿಯನ್ನು ನೋಡಿದರೂ ಸಾಮಾನ್ಯವಾಗಿ ಒಂದೇ ರೀತಿಯ ಕಾರ್ಯಕ್ರಮಗಳು ಬಿತ್ತರವಾಗುತ್ತಿರುತ್ತವೆ. ಉದಾಹರಣೆಗೆ, ರಿಯಾಲಿಟಿ ಷೋಗಳು, ಸಂಗೀತ ಕಾರ್ಯಕ್ರಮಗಳು, ಡ್ಯಾನ್ಸ್ ಮತ್ತು ಹಾಸ್ಯ ಕಾರ್ಯಕ್ರಮಗಳು ಎಲ್ಲ

ವಾಹಿನಿಗಳಲ್ಲಿ ವಿವಿಧ ಶೀರ್ಷಿಕೆಗಳಲ್ಲಿ ಪ್ರಸಾರಗೊಳ್ಳುತ್ತವೆ. ಹಿಂದಿ ರಾಷ್ಟ್ರೀಯ ವಾಹಿನಿಯಲ್ಲಿ ಪ್ರಾರಂಭಗೊಳ್ಳುವ ಪ್ರತಿಯೊಂದು ಮನರಂಜನಾ ಕಾರ್ಯಕ್ರಮವನ್ನೂ ಪ್ರಾದೇಶಿಕ ಭಾಷೆಗಳಿಗೆ ರೀಮೇಕ್ ಮಾಡಲಾಗುತ್ತದೆ. ವಾಕ್ ದಿ ಟಾಕ್ – ವಾಕ್ಪಥವಾಗುತ್ತದೆ, ಇಂಡಿಯನ್ ಐಡಲ್ - ವಾಯ್ಸ್ ಆಫ್ ಕರ್ನಾಟಕ ಆಗುತ್ತದೆ, ನಾಚ್ ಬಲಿಯೇ – ಡ್ಯಾನ್ಸ್ ರಾಜ ಡ್ಯಾನ್ಸ್ ಅಥವಾ ಕುಣಿಯೋಣು ಬಾರ ಆಗುತ್ತದೆ. ಇದು ಎಲ್ಲ ಪ್ರಾದೇಶಿಕ ಭಾಷೆಗಳಿಗೂ ಅನ್ವಯಿಸುತ್ತದೆ. ಪ್ರಾದೇಶಿಕ ಸೊಗಡು ಇರುವುದನ್ನು ಬಿಟ್ಟರೆ ಈ ಕಾರ್ಯಕ್ರಮಗಳಲ್ಲಿ ಯಾವುದೇ ರೀತಿಯ ಸ್ವಂತಿಕೆ ಅಥವಾ ಸೃಜನಶೀಲತೆ ಇರುವುದಿಲ್ಲ. ಸಂಗೀತ ಸಂಜೆ ಕಾರ್ಯಕ್ರಮಗಳಲ್ಲಿ ನಿರ್ಣಯಗಾರರಾಗಿ ಪಾಲ್ಗೊಳ್ಳುವ ಅನೇಕ ಹಿರಿಯ ಕಲಾವಿದರು ತಮ್ಮ ಹಾವಭಾವಗಳಲ್ಲೂ ಹಿಂದಿ ಕಾರ್ಯಕ್ರಮಗಳನ್ನು ಅನುಕರಿಸುವುದು ಕೆಲವೊಮ್ಮೆ ಹಾಸ್ಯಾಸ್ಪದವಾಗಿರುತ್ತದೆ.

ಇನ್ನು ಕೌಟುಂಬಿಕ ಮನರಂಜನೆಗಾಗಿಯೇ ತಯಾರಿಸಲಾಗುವ ಧಾರಾವಾಹಿಗಳು ಬಹುತೇಕ ಒಂದೇ ಕಥಾಹಂದರವನ್ನು ಹೊಂದಿದ್ದು ಸನ್ನಿವೇಶಗಳು ಮಾತ್ರ ವಿಭಿನ್ನವಾಗಿರುತ್ತವೆ. ಕಲಾವಿದರೂ ಸಹ ಹಲವು ಧಾರಾವಾಹಿಗಳಲ್ಲಿ ವಿವಿಧ ಪಾತ್ರಗಳಲ್ಲಿ ನಟಿಸುವ ಮೂಲಕ ಒಂದೇ ಬಗೆಯ ಹಾವಭಾವಗಳನ್ನು ಪ್ರದರ್ಶಿಸುತ್ತಾರೆ. ಒಂದು ಕುಟುಂಬ, ಗಂಡ ಹೆಂಡಿರ ಜಗಳ, ಗಂಡನ ಅನೈತಿಕ ಸಂಬಂಧ, ಅತ್ತೆ ಸೊಸೆಯರ ಜಗಳ, ಅತ್ತಿಗೆ ನಾದಿನಿಯರ ವಿರಸ, ಹಾದಿ ತಪ್ಪುವ ಮಕ್ಕಳು, ಅಪರಾಧ, ಕೊಲೆ ಹೀಗೆ ಜಡಗಟ್ಟಿದ ಕಥೆಗಳನ್ನೇ ಆದ್ಯತಾ ವೇಳೆಯಲ್ಲಿ ಚಿತ್ರಿಸಲಾಗುತ್ತದೆ. ಕೆಲವೇ ಕೆಲವು ಧಾರಾವಾಹಿಗಳು ಮಾತ್ರ ಈ ಅಪವಾದಕ್ಕೆ ಹೊರತಾಗಿವೆ. ತ್ರಿವೇಣಿಯವರ ತ್ರಿವಳಿ ಕಾದಂಬರಿಯನ್ನಾಧರಿಸಿದ ಉತ್ತಮ ಧಾರಾವಾಹಿ ಯಾರೂ ನೋಡದಿರುವ ಸಮಯದಲ್ಲಿ ಪ್ರಸಾರವಾಗಿ, ಅರ್ಧದಲ್ಲಿ ಮುಕ್ತಾಯವಾಗುತ್ತದೆ. ಸಿನಿಮಾರಂಗದಲ್ಲಿ ಪ್ರಚಲಿತವಾಗಿರುವ "ಕನ್ನಡದಲ್ಲಿ ಕಥೆಗಳೇ ಇಲ್ಲವೇ" ಎಂಬ ಪ್ರಶ್ನೆ ಇಲ್ಲಿಯೂ ಉದ್ಭವಿಸುತ್ತದೆ. ಚಲನಚಿತ್ರಗಳ ಪ್ರಸಾರದಲ್ಲೂ ಸಹ ಮಾರುಕಟ್ಟೆ ಸಿದ್ಧಾಂತಕ್ಕೇ ಕಟ್ಟುಬಿದ್ದಿರುವ ವಾಹಿನಿಗಳು ಉತ್ತಮವಾದ ಹಳೆಯ ಚಿತ್ರಗಳನ್ನು ಯಾರೂ ನೋಡದ ಸಮಯದಲ್ಲಿ ಪ್ರಸಾರ ಮಾಡುತ್ತವೆ. ಶನಿವಾರ-ಭಾನುವಾರಗಳಂದು ಬಹುತೇಕ ಹೊಸ ಚಿತ್ರಗಳನ್ನೇ ಬಿತ್ತರಿಸುತ್ತವೆ. ಯುವ ಜನಾಂಗಕ್ಕೆ ಉತ್ತಮ ಅಭಿರುಚಿಯ ಚಿತ್ರಗಳನ್ನು ನೋಡುವ ಅವಕಾಶವೇ ದೊರೆಯದಿರಲು ಮಾಧ್ಯಮಗಳೂ ಕಾರಣವೆಂದು ಹೇಳಬಹುದು.

ಇನ್ನು ಪಾತಕ ಕೃತ್ಯಗಳನ್ನು ಪ್ರಸಾರ ಮಾಡುವಲ್ಲಿ ತೀವ್ರ ಸ್ಪರ್ಧಾತ್ಮಕ ಮಾರುಕಟ್ಟೆ ಸೃಷ್ಟಿಯಾಗಿದ್ದು, ಅತೀತ ಶಕ್ತಿಗಳ ಪವಾಡಗಳನ್ನು ಬಿತ್ತರಿಸುವಲ್ಲಿ ಎಲ್ಲಾ ವಾಹಿನಿಗಳೂ ಪೈಪೋಟಿಗಿಳಿದಿವೆ. ಯಾವುದಾದರೂ ಅಪರಾಧದ ಸುದ್ದಿ ಬಿತ್ತರಗೊಂಡರೂ ಸಹ ಅಪರಾಧವನ್ನು ಸಾಮಾಜಿಕ ವಿಶ್ಲೇಷಣೆಗೊಳಪಡಿಸದೆ, ಅಪರಾಧಿಗಳ ಹಿನ್ನೆಲೆಯನ್ನೇ ಶೋಧಿಸುವುದೂ ದೃಶ್ಯ ಮಾಧ್ಯಮಗಳ ಪರಿಪಾಠವಾಗಿದೆ. ನ್ಯಾಯಾಲಯದಲ್ಲಿ ತೀರ್ಮಾನ ವಾಗುವ ಮುನ್ನವೇ ಆಪಾದಿತರನ್ನು ಅಪರಾಧಿಗಳಂತೆ ಬಿಂಬಿಸಿ ಅವರ ಚಾರಿತ್ರ್ಯವಧೆ ಮಾಡಲಾಗುತ್ತದೆ. ಹನೀಫ್ ಪ್ರಕರಣ ಒಂದು ಉತ್ತಮ ನಿದರ್ಶನ. ಅತ್ಯಾಚಾರ ಮತ್ತು ಹಲ್ಲೆಯ ಪ್ರಕರಣಗಳಲ್ಲೂ ಅತ್ಯಾಚಾರಕ್ಕೊಳಗಾದ ಮಹಿಳೆ ಅಥವಾ ಯುವವತಿಯನ್ನು ದಿನವಿಡೀ ತೋರಿಸುವ ಮೂಲಕ ಅವರ ಭವಿಷ್ಯವನ್ನೇ ಹಾಳುಗೆಡವಲಾಗುತ್ತದೆ. ಕಳೆದ ವರ್ಷ ಪ್ರತಿಷ್ಠಿತ ಬಹುರಾಷ್ಟ್ರೀಯ ಕಂಪನಿಯಲ್ಲಿದ್ದ ಓರ್ವ ವಿದೇಶಿ ಯುವಕ ಕನ್ನಡಿಗರಿಗೆ ಅವಹೇಳನ ಮಾಡುವಂತಹ ಕವನ ಬರೆದಿರುವುದು ಒಂದು ಟಿವಿ ಚಾನೆಲ್‌ನಲ್ಲಿ ದಿನವಿಡೀ ಪ್ರಸಾರವಾಯಿತು. ಕನ್ನಡಾಭಿಮಾನಿಗಳ ಪ್ರತಿಭಟನೆಗೆ ಮಣಿದು ಆತನನ್ನು ಅಮಾನತುಗೊಳಿಸಿದ್ದೂ ಆಯಿತು. ಕೆಲವು ವೀರಾಭಿಮಾನಿಗಳು ಆತನಿಗೆ ಗೂಸಾ ನೀಡಿದ್ದನ್ನು ದಿನವಿಡೀ ತೋರಿಸಲಾಯಿತು. ವಿಪರ್ಯಾಸವೆಂದರೆ ಆತ ಏನು ಬರೆದಿದ್ದ ಎಂದು ಟಿವಿಯಲ್ಲಾಗಲೀ, ಪತ್ರಿಕೆಗಳಲ್ಲಾಗಲೀ ಪ್ರಕಟವಾಗಲೇ ಇಲ್ಲ. ಇದು ಬೇಜವಾಬ್ದಾರಿತನವಲ್ಲವೇ ? ಈ ರೀತಿಯ ಅನೇಕ ಪ್ರಸಂಗಗಳು ಟಿವಿ ಚಾನೆಲ್‌ಗಳಲ್ಲಿ ವ್ಯಕ್ತವಾಗುತ್ತಲೇ ಇವೆ. ಜನರ ಅಭಿರುಚಿಗೆ ತಕ್ಕಂತೆ ತಮ್ಮ ಕಾರ್ಯಕ್ರಮಗಳನ್ನು ರೂಪಿಸುವುದಾಗಿ ಹೇಳುವ ಖಾಸಗಿ ವಾಹಿನಿಗಳು ಯಾವ ಜನರನ್ನು ಪ್ರತಿನಿಧಿಸುತ್ತವೆ ಎಂದು ಹೇಳುವ ಅವಶ್ಯಕತೆ ಇಲ್ಲ.

**ಒಂದು ಸಂಹಿತೆಯ ಅವಶ್ಯಕತೆ**

ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಾಧ್ಯಮಗಳಿಗೆ ಸಾಮಾಜಿಕ ಹೊಣೆಗಾರಿಕೆ ಅಗತ್ಯವಾಗಿ ಇರಬೇಕಾಗುತ್ತದೆ. ಸಮಾಜವನ್ನು ಕಾಡುತ್ತಿರುವ ಮೂಢನಂಬಿಕೆಗಳು, ಮತೀಯತೆ, ಜಾತಿವಾದ, ಕೋಮುವಾದ ಇಂತಹ ಗಂಭೀರ ಸಮಸ್ಯೆಗಳ ಬಗ್ಗೆ ಸಾರ್ವಜನಿಕ ರಂಗದಲ್ಲಿ ಒಂದು ಚರ್ಚೆಯನ್ನು ಏರ್ಪಡಿಸುವ ನಿಟ್ಟಿನಲ್ಲಿ ಪತ್ರಿಕಾ



ಮಾಧ್ಯಮದಷ್ಟೇ ಜವಾಬ್ದಾರಿ ದೃಶ್ಯ ಮಾಧ್ಯಮಗಳಿಗೂ ಇರುತ್ತದೆ. ನಮ್ಮ ದೇಶದ ಶೇ. ೪೦ಕ್ಕೂ ಹೆಚ್ಚು ಜನತೆ ಶಿಕ್ಷಣದಿಂದ ವಂಚಿತರಾಗಿದ್ದು, ಭೌತಿಕವಾಗಿ ಹಿಂದುಳಿದಿರುವು ದರಿಂದ ಈ ಜನರಲ್ಲಿ ಆಧುನಿಕ ಚಿಂತನೆಗಳನ್ನು ಮೂಡಿಸುವ ಮೂಲಕ ಅಭಿವೃದ್ಧಿಯತ್ತ ಕೊಂಡೊಯ್ಯುವುದು ಮಾಧ್ಯಮಗಳ ನೈತಿಕ ಹೊಣೆಗಾರಿಕೆಯಾಗಿರುತ್ತದೆ. ಒಂದು ಊಳಿಗಮಾನ್ಯ ವ್ಯವಸ್ಥೆಯಿಂದ ಆಧುನಿಕ ಸಮಾಜದೆಡೆಗೆ ಪಯಣಿಸುತ್ತಿರುವ ಭಾರತೀಯ ಸಮಾಜ ತನ್ನ ಮನ್ವಂತರದ ಹಾದಿಯಲ್ಲಿ ಅನೇಕ ಗೊಂದಲಗಳನ್ನೂ ಕ್ರಾಂತಿಕಾರಿ ಬದಲಾವಣೆಗಳನ್ನೂ ಬಿಕ್ಕಟ್ಟುಗಳನ್ನೂ ಎದುರಿಸುತ್ತಿದೆ. ಈ ಸನ್ನಿವೇಶವನ್ನು ಯಶಸ್ವಿಯಾಗಿ ನಿಭಾಯಿಸಿ ಮುನ್ನಡೆಯಲು ಸಮಾಜಕ್ಕೆ ಒಂದು ನಿರ್ದಿಷ್ಟ ಮಾರ್ಗದರ್ಶಿ ಸೂತ್ರಗಳ ಅವಶ್ಯಕತೆ ಇರುತ್ತದೆ. ಮಾಧ್ಯಮಗಳು ಈ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಬಹುದಾಗಿದೆ.

ಭಾರತದಲ್ಲಿ ಶೇ.೭೦ರಷ್ಟು ಜನತೆ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಈ ಜನತೆ ಇಂದು ಎದುರಿಸುತ್ತಿರುವ ಸಮಸ್ಯೆಗಳು ಬೆಟ್ಟದಷ್ಟಿವೆ. ಕಳೆದ ಹದಿನೈದು ವರ್ಷಗಳಲ್ಲಿ ಲಕ್ಷಾಂತರ ರೈತರು ಆತ್ಮಹತ್ಯೆಗೆ ಶರಣಾಗಿದ್ದರೆ ಇನ್ನೂ ಹೆಚ್ಚಿನ ಸಂಖ್ಯೆಯ ಗ್ರಾಮೀಣ ಜನತೆ ಪಟ್ಟಣಗಳಿಗೆ, ನಗರಗಳಿಗೆ ವಲಸೆ ಹೋಗಿರುವುದುಂಟು. ಹೆಚ್ಚು ಹೆಚ್ಚು ಕೃಷಿ ಭೂಮಿಯನ್ನು ಕಾರ್ಪೊರೇಟ್ ಉದ್ಯಮಿಗಳಿಗೆ ಉದಾರವಾಗಿ ನೀಡುತ್ತಿರುವಂತೆಲ್ಲಾ ಆಧುನಿಕತೆಯ ಹೆಸರಿನಲ್ಲಿ ವಾಣಿಜ್ಯೀಕರಣಗೊಳ್ಳುತ್ತಿರುವ ಗ್ರಾಮೀಣ ಸಮಾಜ ಇಂದು ತೀವ್ರ ಬಿಕ್ಕಟ್ಟನ್ನು ಎದುರಿಸುತ್ತಿದ್ದು ಸಮಾಜದಲ್ಲಿ ಮಾನವೀಯ ಮೌಲ್ಯಗಳೇ ಕಣ್ಮರೆ ಯಾಗುತ್ತಿವೆ. ಆರ್ಥಿಕ ಉದಾರೀಕರಣ ನೀತಿಗಳ ಪರಿಣಾಮವಾಗಿ ಕೋಟ್ಯಂತರ ಯುವಕರು ಲಂಪಟರಾಗುತ್ತಿದ್ದು ಸಮಾಜಘಾತುಕ ಶಕ್ತಿಗಳ ಷಡ್ಯಂತ್ರಗಳಿಗೆ ಬಲಿಯಾಗು ತ್ತಿದ್ದಾರೆ. ಭಯೋತ್ಪಾದನೆ, ಕೋಮುವಾದ, ಜಾತಿ ಸಂಘರ್ಷಗಳು ಈ ಯುವಶಕ್ತಿಯನ್ನು ಬಳಸಿಕೊಳ್ಳುತ್ತಿವೆ. ಹೆಚ್ಚು ಡಾಲರ್ ಕೋಟ್ಯಧಿಪತಿಗಳನ್ನು ಹೊಂದಿರುವ ದೇಶಗಳಲ್ಲಿ ನಾಲ್ಕನೆ ಸ್ಥಾನವನ್ನು ಪಡೆದಿರುವ ಭಾರತ, ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ೧೨೬ನೆಯ ಸ್ಥಾನದಲ್ಲಿರುವುದು ವಿಡಂಬನೆಯಾದರೂ ಸತ್ಯ. ೧೯೯೫ರಿಂದ ೨೦೦೧ರ ಅವಧಿಯಲ್ಲಿ ಹಸಿವಿನಿಂದ ಬಳಲುತ್ತಿರುವವರ ಸಂಖ್ಯೆಗೆ ಭಾರತದ ಕೊಡುಗೆ ಜಾಗತಿಕ ಸರಾಸರಿ ಗಿಂತಲೂ ಹೆಚ್ಚಾಗಿದೆ. ಜನತೆಯ ಮೇಲಿನ ಸಾಲದ ಹೊರೆ ದಿನೇ ದಿನೇ ಹೆಚ್ಚಾಗುತ್ತಿದೆ. ಸಾಮಾನ್ಯ ಜನತೆಯ ಆಹಾರ ಸೇವನೆಯ ಪ್ರಮಾಣ ಗಣನೀಯವಾಗಿ ಇಳಿಮುಖವಾಗಿದೆ.

ಇಷ್ಟೆಲ್ಲಾ ಸಮಸ್ಯೆಗಳು ಜನಸಾಮಾನ್ಯರ ಗಣನೆಗೆ ಬರುತ್ತಿರುವುದು ಬೆರಳೆಣಿಕೆ ಯಷ್ಟಿರುವ ಪತ್ರಿಕಾ ಮಾಧ್ಯಮದ ವರದಿಗಾರರಿಂದ ಮತ್ತು ಕೆಲವು ಸಂಘಟನೆಗಳಿಂದಷ್ಟೆ. ಜನಸಾಮಾನ್ಯರ ಈ ಸಮಸ್ಯೆಗಳನ್ನು ಬಿತ್ತರಿಸುವಲ್ಲಿ ದೃಶ್ಯ ಮಾಧ್ಯಮಗಳು ಸೋತಿರುವುದು ಸ್ಪಷ್ಟ. ಕಳೆದ ವರ್ಷ ಮುಂಬೈನಲ್ಲಿ ನಡೆದ ಲಕ್ಮೆ ಇಂಡಿಯಾ ಫ್ಯಾಷನ್ ಪ್ರದರ್ಶನವನ್ನು ವರದಿಮಾಡಲು ಐದು ನೂರಕ್ಕೂ ಹೆಚ್ಚು ಪತ್ರಕರ್ತರು ಹಾಜರಿದ್ದರು. ಫ್ಯಾಷನ್ ಪೆರೇಡಿನಲ್ಲಿ ಭಾಗವಹಿಸಿದ್ದ ರೂಪದರ್ಶಿಗಳು ಧರಿಸಿದ್ದ ಕಾಟನ್ ಉಡುಪುಗಳು ಝಗಝಗನೆ ಮಿರುಗುತ್ತಿದ್ದವು. ಆದರೆ ಈ ಉಡುಪುಗಳಿಗಾಗಿ ಹತ್ತಿಯನ್ನು ಬೆಳೆದು. ಕೈ

ಸುಟ್ಟುಕೊಂಡು, ಸಾಲದ ಹೊರೆ ತಡೆಯಲಾಗದೆ ಆತ್ಮಹತ್ಯೆಗೆ ಶರಣಾಗಿದ್ದ ವಿದರ್ಭ ಕ್ಷೇತ್ರದ ಸಾವಿರಾರು ರೈತರ ಸಂಕಷ್ಟಗಳನ್ನು ವರದಿ ಮಾಡಲು ಕೇವಲ ಆರು ಪತ್ರಕರ್ತರು ಮಾತ್ರ ಆಸಕ್ತಿ ವಹಿಸಿದ್ದರು. ಇದು ದೃಶ್ಯಮಾಧ್ಯಮದ ಸಾಮಾಜಿಕ ಬದ್ಧತೆಗೆ ಉದಾಹರಣೆಯಷ್ಟೇ.

''ನೀವು ಜನತೆಗೆ ಅನ್ನ ನೀಡಲಾಗದಿದ್ದರೆ ಅವರ ಮನ ತಣಿಸಲು ಸರ್ಕಸ್‌ಗಳನ್ನು ಆಡಿಸಿ'' ಎಂದು ರೋಮನ್ ದೊರೆಗಳು ಹೇಳುತ್ತಿದ್ದರಂತೆ. ಭಾರತದ ಆಳುವ ವರ್ಗಗಳೂ ಇದೇ ನೀತಿಯನ್ನು ಅನುಸರಿಸುತ್ತಿವೆ. ಪ್ರಭುತ್ವದ ಈ ನೀತಿಗಳಿಗೆ ಮಾಧ್ಯಮಗಳು ಸಾಕಷ್ಟು ಬೆಂಬಲ ನೀಡುತ್ತಿವೆ. ಹಾಗಾಗಿಯೇ ದೇಶ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳಿಗೆ ಮಾಧ್ಯಮಗಳಲ್ಲಿ ಕೇವಲ ಶೇ. ೫ರಿಂದ ಶೇ. ೧೦ರಷ್ಟು ಪ್ರಸಾರ ಸಿಗುತ್ತದೆ. ಬದಲಾಗಿ ಜನರ ಮನ ತಣಿಸಲು ವರ್ಷವಿಡೀ ಕ್ರಿಕೆಟ್ ಪಂದ್ಯಾವಳಿಗಳನ್ನು ಪ್ರಸಾರ ಮಾಡಲಾಗುತ್ತದೆ. ೨೦-೨೦ ಕ್ರಿಕೆಟ್ ವಿಶ್ವಕಪ್‌ನಲ್ಲಿ ಭಾರತದ ದಿಗ್ವಿಜಯ, ಒಲಿಂಪಿಕ್ಸ್‌ನಲ್ಲಿ ಗಳಿಸಿದ ಮೂರು ಪದಕ, ವಿಶ್ವ ಸುಂದರಿಯ ಸ್ಪರ್ಧೆಯಲ್ಲಿ ಭಾರತದ ಯುವತಿಯ ಗೆಲುವು, ಇಂತಹ ರೋಚಕ ವಿಷಯಗಳೇ ಮಾಧ್ಯಮಗಳಲ್ಲಿ ವಿಜೃಂಭಿಸುತ್ತಿರುತ್ತವೆ. ಆತ್ಮಹತ್ಯೆಗೆ ಶರಣಾದ ರೈತರ ಸಂಖ್ಯೆ ಎರಡು ಲಕ್ಷ ಮುಟ್ಟುವ ವಿಷಯಕ್ಕಿಂತಲೂ, ತೆಂಡೂಲ್ಕರ್ ಗಳಿಸಿದ ೪೦ನೆಯ ಶತಕ ಮಾಧ್ಯಮಗಳಲ್ಲಿ ಹೆಚ್ಚು ಪ್ರಾಮುಖ್ಯತೆ ಗಳಿಸುತ್ತದೆ. ಸಾಮಾನ್ಯ ಜನತೆ ತಾವು ಎದುರಿಸುತ್ತಿರುವ ಸಮಸ್ಯೆಗಳನ್ನು ಮರೆಮಾಚುವಂತೆ ಮಾಡುವಲ್ಲಿ ಈ ಸುದ್ದಿಗಳು ಸಹಾಯಕವಾಗುತ್ತವೆ.

ಪ್ರಭುತ್ವಕ್ಕೆ ಈ ನೀತಿಗಳು ಅವಶ್ಯವೇ ಇರಬಹುದು. ಏಕೆಂದರೆ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಕಾಪಾಡುವ ಹೊಣೆಗಾರಿಕೆ ಪ್ರಭುತ್ವಕ್ಕೆ ಇರುತ್ತದೆ. ವ್ಯವಸ್ಥೆಗೆ ವಿರುದ್ಧವಾದ ಯಾವುದೇ ಅಭಿಪ್ರಾಯವನ್ನು ದಮನಮಾಡುವುದೂ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಸ್ಥಾಪಿತ ನೀತಿಯಾಗಿಬಿಟ್ಟಿದೆ. ಆದರೆ ಪ್ರಜಾತಂತ್ರ ವ್ಯವಸ್ಥೆಯ ನಾಲ್ಕನೆಯ ಆಧಾರ ಸ್ತಂಭವೆಂದು ಪರಿಗಣಿಸಲಾಗುವ ಮಾಧ್ಯಮಗಳು ಪ್ರಭುತ್ವದ ಈ ನೀತಿಗಳಿಗೆ ಪೂರಕವಾಗಿರಬೇಕೇ, ಎಂಬ ಮೂರ್ತ ಪ್ರಶ್ನೆಗೆ ಪ್ರಜ್ಞಾವಂತ ನಾಗರಿಕ ಸಮಾಜ ಉತ್ತರ ಕಂಡುಕೊಳ್ಳಬೇಕಾಗಿದೆ. ದೇಶದಲ್ಲಿ ಮಾಧ್ಯಮಗಳಿರುವುದೇ ಮನರಂಜನೆಗಾಗಿ, ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಬದುಕುಳಿಯಲು ಇದು ಅಗತ್ಯ, ಜನರ ದೈನಂದಿನ ಸಾಮಾಜಿಕ ಬಿಕ್ಕಟ್ಟುಗಳನ್ನು ಬಿತ್ತರಿಸುವುದು ಮಾಧ್ಯಮಗಳ ಹೊಣೆಗಾರಿಕೆಯಲ್ಲ, ಜನರಲ್ಲಿ ಯಾವುದೇ ನಿರ್ದಿಷ್ಟ ಅಭಿಪ್ರಾಯ ಮೂಡಿಸುವ ನಿಟ್ಟಿನಲ್ಲಿ ಮಾಧ್ಯಮಗಳು ಕಾರ್ಯ ನಿರ್ವಹಿಸಲಾಗುವುದಿಲ್ಲ ಹೀಗೆ ಹಲವಾರು ಪ್ರತಿಪಾದನೆಗಳು ಮಾಧ್ಯಮಗಳಿಂದ ವ್ಯಕ್ತವಾಗಬಹುದು. ಆದರೆ ಪ್ರಜಾತಾಂತ್ರಿಕ ಸಮಾಜದ ಅಭ್ಯುದಯದ ಹಾದಿಯಲ್ಲಿ, ಜನಸಾಮಾನ್ಯರಲ್ಲಿ ಒಂದು ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವಲ್ಲಿ ಮಾಧ್ಯಮಗಳ ಪಾತ್ರ ಮಹತ್ವದ್ದಾಗಿದ್ದು, ಈ ಸಾಮಾಜಿಕ ಹೊಣೆಗಾರಿಕೆಯನ್ನು ಮಾಧ್ಯಮಗಳು ಹೊರದಿದ್ದರೆ, ಭವಿಷ್ಯದಲ್ಲಿ ಮಾಧ್ಯಮಗಳು ಅಪರಾಧಿ ಸ್ಥಾನದಲ್ಲಿ ನಿಲ್ಲಬೇಕಾಗಬಹುದು. ಈ ನಿಟ್ಟಿನಲ್ಲಿ ಸಾಮಾಜಿಕ ಕಳಕಳಿ, ಬದ್ಧತೆಯುಳ್ಳ ಒಂದು ನೀತಿ ಸಂಹಿತೆಯನ್ನು ಮಾಧ್ಯಮಗಳು ಅಳವಡಿಸಿಕೊಳ್ಳುವುದು ಅತ್ಯಗತ್ಯ.

ನಾ. ದಿವಾಕರ
ಸಂಖ್ಯೆ [illegible], 'ಚಿರಂತನ'
[illegible] ಅಗ್ರಹಾರ, [illegible] ಹಂತ, ಶ್ರೀರಾಂಪುರ
ಮೈಸೂರು - [illegible]

# ಒಂದಾನೊಂದು ದಿನ!




ಒಂದು ಸುಡು ಬಿಸಿಲ ಮಧ್ಯಾಹ್ನ
ನನ್ನ ನೆರಳು ನಾನೇ
ನೋಡುತ್ತ ನಿಂತಿದ್ದೆ

ಅಂದು ಸಂತೆಯ ದಿನ
ಆದರೂ ಒಬ್ಬರ ಸುಳಿವಿಲ್ಲ

ನಿದ್ದೆ ಬಂದಂತಾಗಿ ಆಕಳಿಸಿದೆ
ನಾಯಿಯೊಂದು ಬಂದು
ಕಾಲೆತ್ತಿ ಉಚ್ಚೆ ಹೊಯ್ದು ಹೋಯಿತು
ನನ್ನ ನೆರಳು ಸ್ವಲ್ಪ
ಸರಿದಂತೆನಿಸಿತ್ತು

ನಿರ್ದಯಿ ಸೂರ್ಯ
ನನ್ನೊಳಗಿನಿಂದ
ಕೆಳಗೆ ಉದುರಿ ಬಿದ್ದಿದ್ದ
ಅರೆ ಒಣಗಿದ ಎಲೆಗಳ ಮೇಲೆ
ಆಕ್ರಮಣಕ್ಕೆ ಪ್ರಯತ್ನಿಸುತ್ತಿದ್ದ

ಗಾಳಿ ಉಸಿರುಗಟ್ಟಿದಂತೆ
ಆಗೊಮ್ಮೆ ಈಗೊಮ್ಮೆ ಬಿಕ್ಕುತ್ತಿತ್ತು

ನನ್ನ ನೆರಳು
ದೂರ
ನನ್ನ ಬಿಟ್ಟು ಜಾರಿದಂತಿತ್ತು

ಆಗ
ಅಷ್ಟೇನು ಸುಂದರವಲ್ಲದ
ಒಬ್ಬ ಹುಡುಗ ಒಂದು ಹುಡುಗಿ
ನಾನಂದುಕೊಂಡಂತೆ ನನ್ನತ್ತಲೇ ಬಂದು
ನನಗೆ ಒತ್ತಿಕೊಂಡು ಕುಳಿತರು
ತುಂಬಾ ಹೊತ್ತು ಮಾತನಾಡಿದರು
ನಡು ನಡುವೆ ಅತ್ತರು
ಎದ್ದು ಹೋಗುವಾಗ ನಕ್ಕರು

ಕದ್ದು ಕದ್ದು ನೋಡುತ್ತಿದ್ದ ಸೂರ್ಯ
ಸೀದಾ ಬಂದವನೆ ಕೇಳಿದ
ಏನು ಮಾಡಿದೆ ?
ಸಾಯಲೆಂದು ಬಂದವರು
ಬದುಕಲೆಂದು ಹಿಂದಿರುಗಿದರು !

ಏನು ಹೇಳಲಿ ?
ಹಸಿರೆಲೆಯನ್ನೊಮ್ಮೆ
ಬಿದ್ದ ಒಣ ಎಲೆಯನ್ನೊಮ್ಮೆ
ಪ್ರೀತಿಯಿಂದ
ದಿಟ್ಟಿಸಿ ನೋಡಿ ನಕ್ಕೆ

ಗಾಳಿ ತೆಳ್ಳಗೆ ಬೀಸಲು ಶುರುವಿಟ್ಟಿತ್ತು
ನನ್ನ ನೆರಳು
ನಾಳಿನ ಬೆಳಗಿಗಾಗಿ ಕಾಯುತ್ತ
ನನ್ನೊಳಗೇ ಸೇರಿಬಿಟ್ಟಿತು !

ವಿ. ಹರಿನಾಥ ಬಾಬು
ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧, ಬಳ್ಳಾರಿ ಜಿಲ್ಲೆ

# ಅಸ್ಪೃಶ್ಯರು

## ಸ್ತ್ರೀ ಸಂಕಥನ ನೋಟ






ಲೇಖಕರು
ವೈದೇಹಿ

ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

*(೧೯೯೨ರಲ್ಲಿ ಪ್ರಕಟವಾದ ಈ ಕೃತಿ ಸದ್ಯಕ್ಕೆ ಪ್ರಕಾಶಕರಲ್ಲಿ ಲಭ್ಯವಿಲ್ಲ)*

■

**ಎಂ. ಎಸ್. ವೇದಾ**

ಕನ್ನಡದ ಮಹತ್ತ್ವದ ಲೇಖಕಿ ವೈದೇಹಿ. ವೈದೇಹಿಯವರು ರಚಿಸಿರುವ ಕಾದಂಬರಿ 'ಅಸ್ಪೃಶ್ಯರು'. ವೈದೇಹಿಯವರಿಗೆ ಒಲಿದಿರುವ ಕಥನಶೈಲಿ ಇಲ್ಲಿ ದೀರ್ಘರೂಪು ತಳೆದಿದೆ.

'ಅಸ್ಪೃಶ್ಯತೆ' ನಮ್ಮ ಸಮಾಜವನ್ನು ತಲೆತಲಾಂತರದಿಂದ ಕಾಡುತ್ತಾ ಬಂದಿರುವ ಒಂದು ಕ್ರೂರ ವಾಸ್ತವವಾಗಿದೆ. ಮನುಷ್ಯರನ್ನು ಮನುಷ್ಯರನ್ನಾಗಿ ನೋಡದೆ, ಜಾತಿ, ವರ್ಗ, ವರ್ಣ ಇತ್ಯಾದಿಗಳ ಆಧಾರದ ಮೇಲೆ ಮುಟ್ಟಿಸಿಕೊಳ್ಳುವ, ಮುಟ್ಟಿಸಿಕೊಳ್ಳದಿರುವ – ಎಂದು ಎರಡಾಗಿ ನೋಡುವ, ಅನುಸರಿಸುವ, ಸಮಾಜದ ಸಂಪ್ರದಾಯ, ಆಚರಣೆಯೇ ಆಗಿಬಿಟ್ಟಿರುವ ಘೋರ ಅಮಾನವೀಯತೆ ಇದರ ಹಿಂದಿದೆ. ಹಾಗಾಗಿಯೇ ಅಂತಹ ಸಮಾಜದೊಳಗೇ ಹುಟ್ಟಿಬಂದ ಸಮಾಜ ಸುಧಾರಕರು ಅದನ್ನು ವಿರೋಧಿಸುವ ಕಾರ್ಯವನ್ನು ನಡೆಸಿಕೊಂಡೇ ಬಂದಿದ್ದಾರೆ. ಬಸವಣ್ಣ, ಬುದ್ಧರಿಂದ ಹಿಡಿದು ಗಾಂಧೀಜಿ, ಅಂಬೇಡ್ಕರ್‌ವರೆಗೂ ಇದರ ವಿರುದ್ಧದ ಹೋರಾಟ ನಡೆದುಕೊಂಡೇ ಬಂದಿದೆ. ಆಧುನಿಕ ಸಮಾಜ, ನವನಾಗರಿಕತೆ, ಕಂಪ್ಯೂಟರ್ ಯುಗ, ನ್ಯಾನೊ ತಂತ್ರಜ್ಞಾನ – ಎಂದೆಲ್ಲಾ ವಿಶೇಷಣ ಗಳೊಂದಿಗೆ ಗುರುತಿಸಲ್ಪಡುತ್ತಿರುವ ಈ ದಿನಗಳಲ್ಲಿಯೂ 'ಅಸ್ಪೃಶ್ಯತೆ'ಯ ಆಚರಣೆ ಇಲ್ಲವೇ ಇಲ್ಲ ಎಂದು ಹೇಳಲಾಗದ ಸ್ಥಿತಿ ಇಂದಿಗೂ ನಮ್ಮ ಸಮಾಜದಲ್ಲಿ ಇದ್ದೇ ಇದೆ.

ಇಂತಹ ಒಂದು ಸಮಸ್ಯೆ ಪ್ರತಿಯೋರ್ವ ಸಂವೇದನಾಶೀಲ ಬರಹಗಾರರನ್ನು ಕಾಡಿರುವುದಕ್ಕೆ, ಕೃತಿ ರಚಿಸಿರುವುದಕ್ಕೆ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಬೇಕಾದಷ್ಟು ಉದಾಹರಣೆ ಗಳಿವೆ. ಅಂತಹ ಕೃತಿಗಳ ನಡುವೆ ವೈದೇಹಿಯವರ 'ಅಸ್ಪೃಶ್ಯರು' ಕಾದಂಬರಿ ವಿಭಿನ್ನವಾಗಿ ನಿಲ್ಲುವ ಬಗೆಯನ್ನು ಗಮನಿಸಬಹುದು. ಸಮಾಜೋದ್ಧಾರ, ಹರಿಜನೋದ್ಧಾರ, ಪ್ರತಿಭಟನೆ, ಕ್ರಾಂತಿ – ಈ ಬಗೆಯ ಯಾವ ಪದಗಳೂ ಸಹ ಈ ಕಾದಂಬರಿಯ ವಿಶ್ಲೇಷಣೆಯಲ್ಲಿ ಬರಲು ಸಾಧ್ಯವಿಲ್ಲ. ಸಾಮಾಜಿಕ ಸಮಸ್ಯೆಯೊಂದನ್ನು ಲೇಖಕಿಯೊಬ್ಬಳು ತನ್ನ ಪರಿಸರದ ಸುತ್ತಮುತ್ತಲೇ ಸಹಜವಾಗಿ ಗುರುತಿಸಿಕೊಳ್ಳುತ್ತಾ ಹೋಗುವ ಪರಿ ಕಾದಂಬರಿಯನ್ನು ವಿಭಿನ್ನ ನೆಲೆಗಟ್ಟಿನಲ್ಲಿ ಕೊಂಡೊಯ್ಯುತ್ತದೆ. ಸ್ಪೃಶ್ಯ, ಅಸ್ಪೃಶ್ಯ ಎಂಬುದರ ವ್ಯಾಖ್ಯಾನ ಇಲ್ಲಿ ವಿಸ್ತಾರಗೊಳ್ಳುತ್ತಾ ಹೋಗಿದೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ, ಮೇಲಿನ ಶ್ರೇಣಿಯಿಂದ ಕೆಳಗಿನ ಶ್ರೇಣಿಯ ತನಕ ಪ್ರತಿಯೊಬ್ಬರೂ ತಮ್ಮ ಕೆಳಗಿನವರನ್ನು ಮುಟ್ಟದ, ಮುಟ್ಟಿಸಿ ಕೊಳ್ಳಲಾರದ ಮನಃಸ್ಥಿತಿ ಮತ್ತು ಆಚರಣೆಗಳಲ್ಲಿಯೇ ಇದ್ದಾರೆ. ಅದು ಎಷ್ಟು ತೀವ್ರವಾಗಿದೆ ಯೆಂದರೆ ಅವರಾರಿಗೂ ಅದು ಅಸಹಜ ಅನ್ನಿಸುವುದೇ ಇಲ್ಲ. ತಾವು ತಾವು ಇರುವ ಸ್ತರದಲ್ಲಿಯೇ ತಮ್ಮ ತಮ್ಮ ಮಟ್ಟಿಗೆ ಆನಂದದ ಜೀವನ ನಡೆಸುತ್ತಿರುವಂತೆಯೇ ಅವರ ವರ್ತನೆಯ ವಿವರಗಳು ಬರುತ್ತವೆ. ಕಡೆಯ ಪಕ್ಷ ತಾವು ತುಳಿತಕ್ಕೆ ಒಳಗಾಗುತ್ತಿದ್ದೇವೆ, ಅಸ್ಪೃಶ್ಯತೆಯ ಮೂಲಕ, ತಮ್ಮ ಅಭಿಮಾನಕ್ಕೆ ಯಾರೋ ಅಡ್ಡಗಾಲು ಹಾಕುತ್ತಿದ್ದಾರೆ ಎಂಬಷ್ಟು ಅರಿವೂ ಇಲ್ಲಿನ ಲೋಕಕ್ಕೆ ಇಲ್ಲದಂತೆಯೇ ಕಂಡುಬರುತ್ತದೆ. ರುಕ್ಕು, ಕೂಸ, ಮಂಜ, ಸೀತು, ನರಪಟೆ – ಹೀಗೆ ಈ ಲೋಕದವರನ್ನು ಪಟ್ಟಿಮಾಡಬಹುದು. ಗೌರಮ್ಮನಿಂದ ದೂರ ನಿಂತುಕೊಳ್ಳಬೇಕಾದ ರುಕ್ಕು, ಕೂಸ ಕುಡಿದ ಕಾಫಿಯ ಲೋಟವನ್ನು ತೊಳೆಯಲು ನಿರಾಕರಿಸುತ್ತಾಳೆ. ಗೌರಮ್ಮನ ಮನೆಯವರಿಂದ ಅಸ್ಪೃಶ್ಯತೆಗೆ ಒಳಗಾಗುತ್ತಿರುವ ಸೀತು ತನ್ನ ವಿಷಯಕ್ಕೆ ಸಂಬಂಧಿಸಿದಂತೆ "ನನ್ನನ್ನು ಮುಟ್ಟಿದರೇನಾಯಿತು ? ನಾನೇನು ಮನುಷ್ಯಳಲ್ಲವ ?" ಎಂದು ಪ್ರಶ್ನಿಸುವ ವಿವೇಕ ತೋರಿಸಿದರೂ "ಊಂಚು ಜಾತಿಯವರನ್ನು ಮೊದಲು ಕರೆಯುತ್ತಾರೆ. ಕಡೆಕಡೆಗೆ ಕೀಳುಜಾತಿಯವರನ್ನು. ಕೊರಗರು-ಕೂಸಾಳುಗಳಿಗೆ ಗೆಂಡದ ಕಾರ್ಯಕ್ರಮಕ್ಕೆ ಪ್ರವೇಶವೇ ಇಲ್ಲ" ಎಂಬ ಮಾತುಗಳನ್ನು ಯಾವ ಮುಲಾಜಿಲ್ಲದೆ ಆಡುತ್ತಾಳೆ. ಕೊರಗರ ಹಿಂಡು ಹಾದಿಯಲ್ಲಿ ಬಂದು ಗಾಂಚಾಲಿಯೋರ್ವಳ ಸೆರಗು ಅವಳನ್ನು ತಾಗಿಬಿಟ್ಟ ಮಾತ್ರಕ್ಕೇ ಅವಳು ಮೀಯುತ್ತಾಳೆ. "ಅದು ಯಾಕೆ ? ಆಗ ನೀನೇ ಇದೇ ಬಾಯಿಂದಲೇ ಹೇಳಿದೆಯಲ್ಲ, ನಾನೇನು ಮನುಷ್ಯಳಲ್ಲವ ಅಂತೇಳಿ ? ಕೊರಗರೂ ನಿನ್ನ ಹಾಗೆ ಮನುಷ್ಯರಲ್ಲವೇ ?" ಎಂದು ಪುಟ್ಟ ಕೇಳುವ ಪ್ರಶ್ನೆಗೆ ಅವಳು ಕೊಡುವ ಉತ್ತರವನ್ನು ಗಮನಿಸಬೇಕು : "ನಿಮಗೆ ಇದೆಲ್ಲ ಅರ್ಥವಾಗುವುದಿಲ್ಲ ಅಯ್ಯ. ಎಂಜಲು ತಿಂಬ, ಹೇಲು ಬಾಚುವ ಜನಕ್ಕೂ, ನಮ್ಮ ಜಾತಿಗೂ ಎಂದಾದರೂ ಸಮವ ?"

ಹಾಗಾಗಿಯೇ ಎಲ್ಲರೂ ಅಸ್ಪೃಶ್ಯತೆಯಲ್ಲಿ ತೊಡಗಿಕೊಂಡಿರುವ ಈ ಬಗೆಯ ಶ್ರೇಣೀಕೃತ ಸಮಾಜದಲ್ಲಿ ಯಾರಿಗೂ ಅಸ್ಪೃಶ್ಯತೆ ಎಂಬುದು ಅಪರಾಧದ, ಅವಿವೇಕದ ವಿಷಯವಾಗಿ ಕಂಡುಬರುವುದಿಲ್ಲ. ಹೆಚ್ಚೆಂದರೆ ತಮ್ಮ ತಮ್ಮ ನೆಲೆಗಳಲ್ಲಿ ತಾವೇ ಶ್ರೇಷ್ಠರು ಎಂಬ ಅಹಂಕಾರವನ್ನಷ್ಟೇ ತೋರುವ ಹುಂಬತನ ಮಾತ್ರ ಇಲ್ಲಿ ಕಂಡುಬರುತ್ತದೆ.

ಮೇಲುನೋಟಕ್ಕೆ ಇದು "ಭಾಸ್ಕರನೆಂಬ ಹೊಸ ವಿಚಾರದ ಯುವಕ, ಸಂಪ್ರದಾಯದ ಚಿಪ್ಪಿನಿಂದ ಹೊರಬಂದು ಕೊರಗರ ಹೆಣ್ಣೊಂದನ್ನು ಮದುವೆಯಾದ ಘಟನೆಯ ಸುತ್ತ ಹೆಣೆದ ಕಥೆ" ಎಂದೆನ್ನಿಸಿದರೂ ಕಾದಂಬರಿ ಅದಷ್ಟನ್ನೇ ಹೇಳಿ ವಿರಮಿಸಿದೆ ಎನ್ನಲು ಸಾಧ್ಯವಿಲ್ಲ. 'ಅಸ್ಪೃಶ್ಯತೆ'ಯ ವಿವಿಧ ಆಯಾಮಗಳನ್ನು ತೆರೆದಿಡಲೂ ಕಾದಂಬರಿ ಪ್ರಯತ್ನಿಸುತ್ತದೆ. ಮೈನೆರೆಯುವಿಕೆ, ಕೂಸು ಹೆತ್ತ ಸೂತಕ – ಈ ಮುಂತಾದ ಸಂದರ್ಭಗಳಲ್ಲಿ ಮೇಲಿನ ಶ್ರೇಣಿಯ ಮಹಿಳೆಯರಿಗೆ ಕೆಳಶ್ರೇಣಿಯ ಮಹಿಳೆಯರೇ ಜೊತೆಯಾಗುವ ವ್ಯಂಗ್ಯವನ್ನು ಕಾದಂಬರಿ ತಣ್ಣಗೆ ಚಿತ್ರಿಸುತ್ತದೆ. ಮೇಲಿನ ಶ್ರೇಣಿಯ ಮಹಿಳೆಯರು ಇಂತಹ ಸಂದರ್ಭ ಗಳಲ್ಲಿ ಅಸ್ಪೃಶ್ಯರಾಗಿಯೇ ಉಳಿಯುತ್ತಾರೆ. ಪರಸ್ಪರ ಮುಟ್ಟಿಸಿಕೊಳ್ಳದ ಅಸ್ಪೃಶ್ಯತೆಯ ವಿವಿಧ ಬಗೆಗಳನ್ನು ಪ್ರಸ್ತಾಪಿಸುತ್ತಲೇ ಪ್ರೀತಿ, ಹೊಂದಾಣಿಕೆಗಳಿಲ್ಲದ ದಾಂಪತ್ಯದಲ್ಲಿ ಗಂಡ-ಹೆಂಡಿರೂ ಪರಸ್ಪರ ಅಸ್ಪೃಶ್ಯರಾಗುವ ಚಿಂತನೆಯೂ ಇಲ್ಲಿ ವ್ಯಕ್ತವಾಗುತ್ತದೆ. ತನ್ನ ಅಕ್ಕ ರತ್ನಳ ಗಂಡನ ದಬ್ಬಾಳಿಕೆಯನ್ನು ಕಂಡಿರುವ ಸರೋಜ ತನಗೆ ಗಂಡನಾಗಿ ಬರಬಹುದಾದವನನ್ನು ಕುರಿತಂತೆ ಯೋಚಿಸುವಾಗ "... ಆ ಆತ ರತ್ನಕ್ಕನ ಗಂಡನಂತೆ ಯಾವ ಸದ್ಭಾವನೆಗಳಿಗೂ ಸ್ಪಂದಿಸದೆ ತನ್ನನ್ನು ಅಸ್ಪೃಶ್ಯಳನ್ನಾಗಿಯೇ ಇರಿಸಿ ತನ್ನ ಯಾವ ಭಾವನೆಗಳಿಗೂ ಅಸ್ಪೃಶ್ಯನಾಗಿಯೇ ಉಳಿದು, ತಮ್ಮ ಮಕ್ಕಳೂ ಯಾವ ಉತ್ತಮ ಭಾವನೆಗಳಿಗೂ ಸ್ಪಂದಿಸದೆ ಅಸ್ಪೃಶ್ಯ ಮನದವ ರಾಗಿಯೇ ಉಳಿಯುವಂತಹ ಸಂಸಾರ ತನ್ನದಾಗಲಿಕ್ಕಿಲ್ಲವಷ್ಟೆ ?" ಎಂದುಕೊಳ್ಳುತ್ತಾಳೆ.

ಕಾದಂಬರಿ ಸ್ಪಷ್ಟವಾಗಿ ಚಿತ್ರಿಸುವುದು ತನ್ನ ಪರಿಸರದ ಸ್ತ್ರೀ ಲೋಕವನ್ನು, ಅದರೊಂದಿಗೇ ಬರುವ ಮಕ್ಕಳ ಲೋಕವನ್ನು. ಇಲ್ಲಿ ಕಾಣಿಸಿಕೊಳ್ಳುವ ಭಾಸ್ಕರ, ವಾಸುದೇವರಾಯರು, ಶೀನ – ಮುಂತಾದವರನ್ನೊಳಗೊಂಡ ಪುರುಷಲೋಕದ ಚಿತ್ರಣ ಇಲ್ಲಿ ಸಂಕ್ಷಿಪ್ತಗೊಂಡಿದೆ. ಸಂಪ್ರದಾಯ, ಆಚರಣೆಗಳ ಸಂಕೋಲೆಗಳ ಒಳಗೇ ಇರುವ ಹಿರಿಯ ತಲೆಮಾರಿನ ಪಾರ್ತಕ್ಕ, ಗೌರಮ್ಮ, ಶಿಕ್ಷಣದ ಮೂಲಕ ವಿವೇಕ ಪಡೆದಿರುವ ಸರೋಜ, ಬಾಲ್ಯ ಕಳೆಯದ ಮಕ್ಕಳುಗಳನ್ನೊಳಗೊಂಡ ಸ್ತ್ರೀಲೋಕ ದಿನನಿತ್ಯದ ಆಗುಹೋಗುಗಳಲ್ಲಿಯೇ ವಿಸ್ತೃತಗೊಳ್ಳುತ್ತಾ, ಜೀವಂತಿಕೆಯನ್ನು ಪಡೆದುಕೊಂಡದ್ದಾಗಿದೆ. ಹಾಗಾಗಿಯೇ ರತ್ನಳ ಹೊಟ್ಟೆನೋವು, ಮಗುವಿನ ಹೊಸಹುಟ್ಟಿನೊಂದಿಗೆ ಕಾದಂಬರಿ ಆರಂಭಗೊಂಡು ಭಾಸ್ಕರನ ಹೆಂಡತಿ ಕುಮುದಿನಿಯ ಮಗುವಿನ ನಿರೀಕ್ಷಣೆ ಮತ್ತು ತಯಾರಿಯಲ್ಲಿ ಅಂತ್ಯ ಕಾಣುವುದು ಆಕಸ್ಮಿಕದ ವಿಷಯವೇನಲ್ಲ. ಅದು ಸೃಷ್ಟಿಶೀಲ ಪ್ರಕ್ರಿಯೆಯಲ್ಲಿ ನಿರತಳಾಗಿರುವ ಹೆಣ್ಣಿನ ಬಹುದೊಡ್ಡ ಘನತೆಯ ಕಾರ್ಯಕ್ಕೆ ಕಾದಂಬರಿ ಕೊಡುತ್ತಿರುವ ಬೆಲೆಯಾಗಿಯೂ ಕಂಡುಬರುತ್ತದೆ.

'ಅಸ್ಪೃಶ್ಯತೆ'ಯಂತಹ ಸಾಮಾಜಿಕ, ಜ್ವಲಂತ ಸಮಸ್ಯೆ ಈ ಕಾದಂಬರಿಯಲ್ಲಿ ಸ್ತ್ರೀ ಸಂಕಥನವಾಗಿ ತೆರೆದುಕೊಳ್ಳುವುದರಲ್ಲಿಯೇ ಕಾದಂಬರಿಯ ಮಹತ್ತ್ವವಿದೆ. ಇಲ್ಲಿನ ಸ್ತ್ರೀ ಸಂಕಥನ 'ಅಸ್ಪೃಶ್ಯರ' ಬಗೆಗೆ ಹೊಸ ವಿನ್ಯಾಸವನ್ನು ಕಟ್ಟಿಕೊಡುತ್ತದೆ. 'ಅಸ್ಪೃಶ್ಯತೆ'ಯ ಕುರಿತು ಚರ್ಚೆಮಾಡುವುದಕ್ಕಿಂತ 'ಅಸ್ಪೃಶ್ಯರ' ಕುರಿತು ಚರ್ಚೆ ಮಾಡುತ್ತದೆ. ಹಾಗಾಗಿಯೇ ಇಲ್ಲಿನ ಸ್ತ್ರೀ ಸಂಕಥನಕ್ಕೆ ಆ ಸಮಸ್ಯೆಯ ಬೇರೆ ಬೇರೆ ಆಯಾಮಗಳನ್ನು ತೆರೆದಿಡಲು ಸಾಧ್ಯವಾಗಿದೆ. ಪುರುಷಪ್ರಧಾನ ವ್ಯವಸ್ಥೆಯ ಲಿಂಗಾಧಾರಿತ ನೆಲೆಯಲ್ಲಿ ತಾನೇ 'ಅಸ್ಪೃಶ್ಯ'ಳಾಗಿರುವ ಸ್ತ್ರೀ, ಜಾತಿ, ವರ್ಗ, ವರ್ಣಾಧಾರಿತವಾದ 'ಅಸ್ಪೃಶ್ಯತೆ'ಗೆ ಪ್ರತಿಕ್ರಿಯಿಸುವ ರೀತಿಯೂ ಭಿನ್ನವಾಗಿಯೇ ಇರುತ್ತದೆ.

ಈ ಆರಂಭ, ಅಂತ್ಯ, ಮತ್ತು ನಡುವೆ ನಡೆವ ಕಾದಂಬರಿಯ ಎಲ್ಲ ಕ್ರಿಯೆಗಳಲ್ಲಿಯೂ ಕೇಂದ್ರಸ್ಥಾನದಲ್ಲಿರುವ ಮಹಿಳೆ ಪಾರ್ತಕ್ಕ. ಹಾಗೆ ನೋಡಿದರೆ ಪಾರ್ತಕ್ಕನೇ ಕಾದಂಬರಿಯ ಕೇಂದ್ರವೆಂದರೂ ಅತಿಶಯವಿಲ್ಲ. ತನ್ನ ಮಗ ಕೊರಗರ ಹೆಣ್ಣನ್ನು ಮದುವೆಯಾಗಿ ತಾಯಿ, ಮಗನ ನಡುವಿನ ಸಂಬಂಧ ಹರಿದುಹೋದಾಗ ವಾಸುದೇವರಾಯರ ಮನೆಯೇ ಅವರಿಗೆ ಆಶ್ರಯವಾಗುತ್ತದೆ. ಆ ಮನೆಯವರಿಗೆ ಇವರು, ಇವರಿಗೆ ಮನೆಯವರು ಎಂದೂ ಅನ್ಯರೆನ್ನಿಸುವುದೇ ಇಲ್ಲ. ತಮ್ಮಿಂದ, ತಮ್ಮ ಮಗನ ಕಾರ್ಯದಿಂದ ಆ ಮನೆಗೆ ಕೆಟ್ಟ ಹೆಸರು ಬರಬಾರದೆಂಬ ತನಕವೂ ಪಾರ್ತಕ್ಕ ಆ ಮನೆಯ ಪರವಾಗಿ ಆಲೋಚಿಸುತ್ತಾರೆ. ಇಳಿವಯಸ್ಸಿನಲ್ಲಿಯೂ ಅವರ ಮಾತು, ಕೆಲಸ, ಜೀವನಾಸಕ್ತಿ, ಬದುಕಿನ ಮೇಲಿನ ಪ್ರೀತಿ – ಹೀಗೆ ಎಲ್ಲವೂ ಅನುಕರಣೀಯವೆನ್ನಿಸುವಷ್ಟು ಜೀವಂತಿಕೆಯಿಂದ, ಸತ್ತ್ವದಿಂದ ಕೂಡಿವೆ. ಅವರ ವ್ಯಕ್ತಿತ್ವದ ಕುಂದೆನ್ನುವಂತೆ ತೋರುವಂಥದ್ದು ಮಗ ಮಾಡಿಕೊಂಡ ಮದುವೆಯನ್ನು ಮತ್ತು ಕೊರಗರ ಹೆಣ್ಣನ್ನು ಸೊಸೆಯೆಂದು – ಒಪ್ಪಿಕೊಳ್ಳದೇ ಇರುವ ವಿಷಯ ಮಾತ್ರ. ಹಾಗೆ ನೋಡಿದರೆ ಪಾರ್ತಕ್ಕನಂತಹ ಇಳಿ ವಯಸ್ಸಿನ, ಸಂಪ್ರದಾಯ, ಆಚರಣೆಗಳೊಳಗೇ ಮುಳುಗಿರುವ, ಮನೆಯೊಂದನ್ನೇ ಲೋಕವೆಂದು ಭಾವಿಸಿ, ಮಗನನ್ನೂ ತೊರೆದುಕೊಂಡು ಬದುಕುತ್ತಿರುವ ಮಹಿಳೆಯಿಂದ ಇಂತಹದೊಂದು 'ಒಪ್ಪಿಗೆ'ಯನ್ನು ನಿರೀಕ್ಷಿಸುವುದು ಅಸಹಜದ ವಿಷಯವಾಗಿ ಬಿಡುವುದನ್ನೂ ನಾವು ಗಮನಿಸಬೇಕಾಗುತ್ತದೆ. ಶಿಕ್ಷಣ, ಲೋಕಜ್ಞಾನ, ಅರಿವು, ವಿವೇಕ ಇತ್ಯಾದಿಗಳಾವುದನ್ನೂ ಹೊಂದದೆ ಮನೆಯೊಳಗಿರುವ ಪಾರ್ತಕ್ಕ, ಅವರನ್ನು ವಹಿಸಿಕೊಂಡು ಅವರಂತೆಯೇ ವಾದಿಸುವ ಗೌರಮ್ಮನವರು ಆಚರಿಸುವ 'ಅಸ್ಪೃಶ್ಯತೆ' ಮಹಾನ್ ಅಪರಾಧವಾಗಿಯೇನೂ ಕಂಡುಬರುವುದಿಲ್ಲ. ಏಕೆಂದರೆ ಅವರ ನಿಲುವು ಅವರು ಬದುಕುತ್ತಿರುವ ಲೋಕದ ನಿಲುವೇ ಆಗಿದೆ. ಆ ನಿಲುವು ಸರಿಯೇ, ತಪ್ಪೇ, ಎಂದು ವಿಶ್ಲೇಷಿಸಬಲ್ಲ ಅರಿವು ಮತ್ತು ವಿವೇಕಗಳನ್ನು ಆ ಮಹಿಳೆಯರಿಗೆ ಆ ಲೋಕ ಆಗುಮಾಡಿಕೊಟ್ಟಿಲ್ಲ.

ಆದರೆ ಕಾಲೇಜು ಓದಿ, ಲೋಕಜ್ಞಾನ, ವಿವೇಕ, ಅರಿವುಗಳನ್ನು ಪಡೆದಿರುವ ಸರೋಜ ಆ ಪರಿಸರಕ್ಕಿಂತ ಭಿನ್ನವಾದ ಆಲೋಚನೆಯಲ್ಲಿರುವುದೂ ಅಷ್ಟೇ ಸಹಜವಾಗಿದೆ. ಪಾರ್ತಕ್ಕ, ಗೌರಮ್ಮರ ಇದಿರಿಗೆ ಪ್ರತಿವಾದಿಯಾಗಿ ನಿಂತಂತೆ ಆಕೆ ಎಲ್ಲದಕ್ಕೂ ತನ್ನ ವಿರೋಧವನ್ನು ದಾಖಲಿಸುತ್ತಾ ಹೋಗುತ್ತಾಳೆ. ಸದಾ ಸ್ತ್ರೀಯರ ಪರವಾಗಿಯೇ ನಿಲ್ಲುವ ಸರೋಜಳ ಹಿಂದೆ ಭಾಸ್ಕರನ ಸ್ಫೂರ್ತಿಯೂ ಇದೆ. ರುಕ್ಕು ತೊಳೆಯಲು ನಿರಾಕರಿಸಿದ ಕೂಸ ಕುಡಿದ ಕಾಫಿಲೋಟವನ್ನು ತೊಳೆಯಲು ಹೊರಡುವುದರಿಂದ ಹಿಡಿದು ಭಾಸ್ಕರನ ಹೆಂಡತಿ ಕುಮುದಿನಿಯನ್ನು ಮನೆಗೇ ಕರೆಸಿಕೊಂಡು ಬಾಣಂತನ ಮಾಡಬೇಕೆಂದು ಹೇಳುವ ಅವಳ ನಿಲುವಿನ ಎರಡೂ ತುದಿಗಳಲ್ಲಿಯೂ ಅವಳು ಯಾವ ಬಗೆಯ ದ್ವಂದ್ವಕ್ಕೂ ಒಳಗಾಗಿಲ್ಲದ ಅಖಂಡತೆಯನ್ನೇ ಮೆರೆಯುತ್ತಾಳೆ. ಅದಾಗಲೇ ನಡೆದು ಹೋಗಿರುವ ಭಾಸ್ಕರನ ಕ್ರಾಂತಿಗಿಂತ, ಕಾದಂಬರಿಯಲ್ಲಿ ವ್ಯವಸ್ಥೆಯ ವಿರುದ್ಧದ ಧ್ವನಿಯಾಗಿ ರೂಪುಗೊಳ್ಳುತ್ತಿರುವ ಸರೋಜಳ ಪ್ರಗತಿಗಾಮಿ ಆಲೋಚನಾ ಕ್ರಿಯೆಗಳೇ ಕಾದಂಬರಿಯಲ್ಲಿ ಹೆಚ್ಚು ಗಮನಾರ್ಹವಾಗುತ್ತವೆ. ತನ್ನ ಬದುಕನ್ನು ತನ್ನಿಷ್ಟದಂತೆಯೇ ನಡೆಸಹೊರಡುವ ಎಲ್ಲ ಸೂಚನೆಗಳೂ ಅವಳಲ್ಲಿ ಕಾಣಸಿಗುತ್ತವೆ.

ಕಾದಂಬರಿಯ ಕ್ರಿಯಾ ಕೇಂದ್ರವಿರುವುದು ಭಾಸ್ಕರ ಮತ್ತು ಕುಮುದಿನಿಯ ವಿವಾಹದಲ್ಲಿ. ಆ ಎರಡೂ ಪಾತ್ರಗಳು ಕಾದಂಬರಿಯ ಉದ್ದಕ್ಕೂ ಪ್ರಸ್ತಾಪವಾಗುತ್ತಲೇಹೋದರೂ, ಆ ಪಾತ್ರಗಳ ನೇರ ಪ್ರವೇಶವಾಗುವುದು ಕಾದಂಬರಿಯ ಕೊನೆಯ ಹತ್ತಾರು ಪುಟಗಳು ಬಾಕಿಯಿವೆ ಎನ್ನುವಾಗ. ಭಾಸ್ಕರನ ಪ್ರಗತಿಗಾಮಿತನಕ್ಕಿಂತ, ತುಕ್ರಿಯಾಗಿದ್ದ ಕೊರಗರ ಹೆಣ್ಣು ಕುಮುದಿನಿಯಾಗುವ ಪ್ರಕ್ರಿಯೆಗಿಂತ ಪಾರ್ತಕ್ಕ, ಗೌರಮ್ಮರ ಪ್ರತಿಗಾಮಿತನವೇ ಕಾದಂಬರಿಯ ಉದ್ದಕ್ಕೂ ವಿಜೃಂಭಿಸಿರುವುದನ್ನು ನೋಡುತ್ತೇವೆ. ''ತಮಗೆ ಮಾಡಲು ಶಕ್ತಿಲ್ಲದ್ದನ್ನು, ಮಾಡುವ ಸಾಮರ್ಥ್ಯವಿರುವ ಗಂಡು ಎದೆಯುವ'' ಎಂದು ಭಾಸ್ಕರನ ಪ್ರಗತಿಗಾಮಿತನಕ್ಕೆ ವಾಸುದೇವರಾಯರು ಪೂರಕವಾಗಿ ನಿಲ್ಲುವುದರಲ್ಲಿ ತೃಪ್ತಿ ಕಾಣುತ್ತಾರೆ. ಅವರಿಬ್ಬರ ಸಂಸಾರದ ಪರಿಚಯವಿರುವ ಸೀನ ಅವರಿಬ್ಬರನ್ನೂ ಮೆಚ್ಚುಗೆಯಿಂದ ಆರಾಧಿಸುತ್ತಾನೆ. ಆದರೆ ಪಾರ್ತಕ್ಕನ ನೋವಿನೆದುರು, ಪ್ರತಿಗಾಮಿತನದೆದುರು ಅವೆಲ್ಲ ಕಾದಂಬರಿಯಲ್ಲಿ ದೊಡ್ಡದಾಗಿ ತೆರೆದುಕೊಳ್ಳುವುದೇ ಇಲ್ಲ.

ಕಾದಂಬರಿ ಒಂದೆರಡು ಸಂದರ್ಭಗಳಲ್ಲಿ 'ಅಸ್ಪೃಶ್ಯತೆ' ತಾಳುವ ಕ್ರೌರ್ಯದ ಸ್ವರೂಪಗಳ ಭಯಂಕರ ದರ್ಶನದ ಸುಳಿವನ್ನು ಕೊಡುತ್ತದೆ. ರತ್ನಳ ಮಗುವಿನ ನಾಮಕರಣದ ಸಂದರ್ಭದಲ್ಲಿ ನರಪಟೆ ಮತ್ತು ಅವಳ ಪಂಗಡ ಬಿಸಾಡಿದ ಎಂಜಲೆಲೆಗಳಲ್ಲಿ ಕಾಗೆ, ನಾಯಿಗಳನ್ನು ಓಡಿಸುತ್ತಾ ಮಾಡುವ ಭೋಜನ, ಕೂಸಳ ಮರಣ – ಇದಕ್ಕೆ ಉದಾಹರಣೆ. ಓದುಗರಿಗೆ ಅದು ಕ್ರೂರವಾಗಿ, ಭಯಂಕರವಾಗಿ ಕಂಡುಬಂದರೂ ಕಾದಂಬರಿ ಚಿತ್ರಿಸುತ್ತಿರುವ ಲೋಕಕ್ಕೆ, ಅದು ಆಘಾತಕಾರಿ ವಿಷಯವೇನೂ ಅಲ್ಲ. ಗೌರಮ್ಮ ಪಾರ್ತಕ್ಕರಂತೂ ಅವೆಲ್ಲ ಸೃಷ್ಟಿಕರ್ತನೇ ಸೃಷ್ಟಿಸಿದ ಸೃಷ್ಟಿ ನಿಯಮಗಳೆಂದು ನಂಬಿದವರು.

ಆದರೆ ಹೊಸ ತಲೆಮಾರನ್ನು ಪ್ರತಿನಿಧಿಸುತ್ತಿರುವ ಮಕ್ಕಳ ಲೋಕ ಅವುಗಳನ್ನೆಲ್ಲಾ ಪ್ರಶ್ನಿಸುತ್ತಾ, ಉತ್ತರ ಬಯಸುತ್ತಾ, ಅದು ಸಿಗದಾಗ ತಾವೇ ಅದಕ್ಕೊಂದು ಇತ್ಯಾತ್ಮಕ ಉತ್ತರ ಕಂಡುಕೊಳ್ಳುತ್ತಾ ಅಪ್ರಜ್ಞಾಪೂರ್ವಕವಾಗಿ ವ್ಯವಸ್ಥೆಗೆ ವಿರೋಧದ ಭಾಷ್ಯವನ್ನು ಜೀವಂತವಾಗಿ ದಾಖಲುಗೊಳಿಸುತ್ತಾ ಹೋಗುತ್ತದೆ.

ಪುರುಷಲೋಕದ ಪ್ರಗತಿಗಾಮಿತನವೊಂದೇ ಸಮಾಜದ ಪ್ರಗತಿಯಲ್ಲ ಎಂಬುದನ್ನೂ ಕಾದಂಬರಿ ಸ್ಪಷ್ಟಪಡಿಸುತ್ತದೆ. ಮಹಿಳೆಯೂ ಪ್ರಗತಿಗಾಮಿತನದ ಹಾದಿಗೆ ಬಂದರೆ ಮಾತ್ರ ಪ್ರಗತಿ ಸಾಧ್ಯ. ಅದು ಆಗಬೇಕಾದರೆ, ಅದಕ್ಕೆ ಬೇಕಾದ ಜ್ಞಾನ, ವಿವೇಕಗಳನ್ನು ಸ್ತ್ರೀ ಪಡೆದುಕೊಳ್ಳಬೇಕಾದರೆ ಶಿಕ್ಷಣ ಅವಶ್ಯಕ ಎಂದು ತಿಳಿಸುತ್ತದೆ. ಅವುಗಳಿಗೆ ಅವಕಾಶ ಮಾಡಿಕೊಡದ ಪುರುಷವರ್ಗ – ತಾನೇ ಸೃಷ್ಟಿಸಿದ ಸಂಪ್ರದಾಯ, ಆಚರಣೆ, ಪ್ರತಿಗಾಮಿತನಗಳಿಂದ ತುಂಬಿದ ವ್ಯವಸ್ಥೆಯನ್ನು ಮುಂದುವರಿಸಿಕೊಂಡುಹೋಗುವ ವಾಹಕಗಳಾಗಿ ಸ್ತ್ರೀಲೋಕವನ್ನು ಹಲವು ನಿರ್ಬಂಧಗಳ ನಡುವೆ ಇಟ್ಟುಬಿಟ್ಟಿರುವುದೂ ಪುರುಷ ರಾಜಕಾರಣದ ಒಂದು ಮುಖವಾಗಿಯೇ ಕಂಡುಬರುತ್ತದೆ. ಹಾಗಾಗಿಯೇ ಪಾರ್ತಕ್ಕನ ನೋವು, ನಿಟ್ಟುಸಿರುಗಳ ಎದುರು ಭಾಸ್ಕರನ ಪ್ರಗತಿಗಾಮಿತನವಾಗಲಿ, ಗೌರಮ್ಮನ ಮನೆಯ ಮಾನ, ಮಕ್ಕಳ ಮದುವೆ ಇತ್ಯಾದಿ ಹಳಹಳಿಕೆಗಳ ಎದುರು ವಾಸುದೇವರಾಯರ ಪ್ರಗತಿಗಾಮಿತನವಾಗಲಿ ಮಹತ್ತ್ವದ್ದೆಂದು ಗುರುತಾಗುವಲ್ಲಿ ಸೋತಂತೆಯೇ ಭಾಸವಾಗುತ್ತದೆ.

'ಅಸ್ಪೃಶ್ಯತೆ'ಯಂತಹ ಸಾಮಾಜಿಕ, ಜ್ವಲಂತ ಸಮಸ್ಯೆ ಈ ಕಾದಂಬರಿಯಲ್ಲಿ ಸ್ತ್ರೀಸಂಕಥನವಾಗಿ ತೆರೆದುಕೊಳ್ಳುವುದರಲ್ಲಿಯೇ ಕಾದಂಬರಿಯ ಮಹತ್ತ್ವವಿದೆ. ಇಲ್ಲಿನ ಸ್ತ್ರೀಸಂಕಥನ 'ಅಸ್ಪೃಶ್ಯರ' ಬಗೆಗೆ ಹೊಸ ವಿನ್ಯಾಸವನ್ನು ಕಟ್ಟಿಕೊಡುತ್ತದೆ. 'ಅಸ್ಪೃಶ್ಯತೆ'ಯ ಕುರಿತು ಚರ್ಚೆಮಾಡುವುದಕ್ಕಿಂತ 'ಅಸ್ಪೃಶ್ಯರ' ಕುರಿತು ಚರ್ಚೆಮಾಡುತ್ತದೆ. ಹಾಗಾಗಿಯೇ ಇಲ್ಲಿನ ಸ್ತ್ರೀ ಸಂಕಥನಕ್ಕೆ ಆ ಸಮಸ್ಯೆಯ ಬೇರೆ ಬೇರೆ ಆಯಾಮಗಳನ್ನು ತೆರೆದಿಡಲು ಸಾಧ್ಯವಾಗಿದೆ. ಪುರುಷಪ್ರಧಾನ ವ್ಯವಸ್ಥೆಯ ಲಿಂಗಾಧಾರಿತ ನೆಲೆಯಲ್ಲಿ ತಾನೇ 'ಅಸ್ಪೃಶ್ಯ'ಳಾಗಿರುವ ಸ್ತ್ರೀ, ಜಾತಿ, ವರ್ಗ, ವರ್ಣಾಧಾರಿತವಾದ 'ಅಸ್ಪೃಶ್ಯತೆ'ಗೆ ಪ್ರತಿಕ್ರಿಯಿಸುವ ರೀತಿಯೂ ಭಿನ್ನವಾಗಿಯೇ ಇರುತ್ತದೆ. ಶಿಕ್ಷಣ, ಜ್ಞಾನ, ವಿವೇಕಗಳನ್ನು ಪಡೆದುಕೊಂಡ ಸ್ತ್ರೀ ಎಲ್ಲ ಬಗೆಯ ಅಸ್ಪೃಶ್ಯತೆಯನ್ನು ಮೀರಬಯಸುತ್ತಾಳೆ. ಅದು ಸಾಧ್ಯವಾಗದ ಸ್ತ್ರೀಯರು ತಮಗರಿವಿಲ್ಲದೆಯೇ ವ್ಯವಸ್ಥೆಯ ಭಾಗಗಳಾಗಿ, ಉಪಕರಣಗಳಾಗಿ ಅದನ್ನು ಎತ್ತಿಹಿಡಿಯುವ, ಮುಂದುವರಿಸಿಕೊಂಡು ಹೋಗುವ ವಾಹಕಗಳಾಗಿಬಿಡುತ್ತಾರೆ. ಹಾಗಾಗಿ ಪ್ರತಿಗಾಮಿ ಧೋರಣೆ ಹೊಂದಿರುವ ಪಾರ್ತಕ್ಕ, ಗೌರಮ್ಮ, ಸೀತು, ರುಕ್ಕುರಂತಹ ಮಹಿಳೆಯರನ್ನು ಓದುಗರು ನೇತ್ಯಾತ್ಮಕ ನೆಲೆಯಲ್ಲಿ ನೋಡಲು ಸಾಧ್ಯವಾಗುವುದಿಲ್ಲ. ಪ್ರತಿಯಾಗಿ ಅವರುಗಳು ಭಾಸ್ಕರ, ವಾಸುದೇವರಾಯರು, ಶೀನನಂತಹವರು ಸಾಧ್ಯಮಾಡಿಕೊಂಡ ಪ್ರಗತಿಗಾಮಿ ಧೋರಣೆಯೊಳಗಿನ ಪರಿಮಿತಿಗಳ ಬಿರುಕುಗಳಾಗಿ ಕಂಡುಬರುತ್ತಾರೆ. ಆ ಬಿರುಕುಗಳಿದ್ದುಕೊಂಡೂ ಪುರುಷಲೋಕದ ಪ್ರಗತಿಗಾಮಿತನವು ಪೂರ್ಣವೆನ್ನಿಸಿಕೊಳ್ಳಲು ಸಾಧ್ಯವಿಲ್ಲ ಎಂಬುದನ್ನು ಕಾದಂಬರಿ ಸ್ಪಷ್ಟಪಡಿಸುತ್ತದೆ.

ವೈದೇಹಿಯವರ ಸ್ತ್ರೀಸಂಕಥನ ಸ್ವರೂಪದ ಇತ್ಯಾತ್ಮಕ ಅಂಶವಾಗಿರುವ ಧೋರಣೆಯೇ ಈ ಬಗೆಯದು.

ಎಂ. ಎಸ್. ವೇದಾ
ಅಲಂಪು, ೧೨೫೭, ಪಡುವಣ ರಸ್ತೆ, ೪ನೇ ತಿರುವು, ೪ನೇ ಹಂತ, ಟಿ. ಕೆ. ಬಡಾವಣೆ
ಕುವೆಂಪು ನಗರ, ಮೈಸೂರು - ೨೩

ನಾಯಿಗೋಸ್ಕರ ನಿರ್ಮಿಸಿದ ಶಾಸನ

# ನಾಯಿಗೋಸ್ಕರ ನಿರ್ಮಿಸಿದ ಶಾಸನಗಳು

ಪಿ. ಜಯರಾಮ್

**ಕ**ನ್ನಡ ಶಿಲಾಶಾಸನಗಳನ್ನು ವೀರಗಲ್ಲು, ಮಾಸ್ತಿಗಲ್ಲು, ನಿಸಿದಿಗಲ್ಲುಗಳೆಂದು ಇತ್ಯಾದಿ ವಿಭಾಗ(ಗಳಾಗಿ)ಮಾಡಿ ವಿಂಗಡಿಸಬಹುದು. ವೀರಗಲ್ಲುಗಳನ್ನು ಯಾವುದೋ ಕಾಳಗದಲ್ಲಿ ಹೋರಾಡಿದ ವೀರನ ಹೆಸರಿನಲ್ಲಿ ನಿರ್ಮಿಸಿದರೆ, ಮಾಸ್ತಿಗಲ್ಲುಗಳನ್ನು ಯುದ್ಧದಲ್ಲಿ ಹೋರಾಡಿ ಸತ್ತ ಗಂಡನ ಜೊತೆ ಸಹಗಮನ ಮಾಡಿದ ಮಹಿಳೆಯ ಸ್ಮಾರಕವಾಗಿ ನಿರ್ಮಿಸಲಾಗುತ್ತಿತ್ತು. ನಿಸಿದಿಗಲ್ಲುಗಳು ಜೈನಧರ್ಮೀಯರು ಸಲ್ಲೇಖನ ವ್ರತದಿಂದ ಉಪವಾಸಮಾಡಿ ಸಮಾಧಿಮರಣ ಪಡೆದ ಸ್ಮಾರಕಗಳಾಗಿವೆ.

ಅದೇ ರೀತಿ ಹಿಂದೆ ನಾಯಿಗೋಸ್ಕರ ಸ್ಮಾರಕ ನಿಲ್ಲಿಸುವ ಪದ್ಧತಿಯು ಅಸ್ತಿತ್ವದಲ್ಲಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಮನುಷ್ಯರಂತೆ ನಾಯಿಗಳು ಕಾಳಗದಲ್ಲಿ ಹೋರಾಡಿದ ನೆನಪಿಗೆ ಶಾಸನ ಹಾಕಿಸುತ್ತಿದ್ದರು. ಇಂತಹ ಶಾಸನಗಳಲ್ಲಿ ಉಲ್ಲೇಖವಿರುವಂತೆ ಎಲ್ಲಾ ನಾಯಿಗಳೂ ಸಾಕುನಾಯಿಗಳಾಗಿದ್ದು ಹಂದಿಯೊಂದಿಗೆ ಮಾತ್ರ ಹೋರಾಡಿದ ವಿವರವಿರುವುದು ಮಹತ್ವದ್ದಾಗಿದೆ.

ಕರುಗಲ್ಲು ಅಥವಾ ನಾಯಿಗೋಸ್ಕರ ನಿರ್ಮಿಸಿರುವ ಶಾಸನಗಳು ಕರ್ನಾಟಕದಲ್ಲಿ ಕೆಲವು ಕಡೆ ದೊರೆತಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಉಪಲಬ್ಧವಿರುವ ಅತ್ಯಂತ ಪ್ರಾಚೀನ ಕರುಗಲ್ಲು ಎಂದರೆ ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕಿನ **ಮೇಲಾಗಣಿ** ಗ್ರಾಮದ ಕ್ರಿ.ಶ. ೮ನೇ ಶತಮಾನದ ಶಾಸನ. ಈ ಶಾಸನವನ್ನು ಪಿರಸಂದಿಯ ಮಗನು ಹಾಕಿಸಿದ್ದ ಎಂದು ತಿಳಿಯುತ್ತದೆ. **ಲೋಕ** ಮತ್ತು ಧಳಗ ಎಂಬ ಸಾಕುನಾಯಿಗಳು ಹಂದಿಯೊಂದಿಗೆ ಹೋರಾಡಿ ಏಕಕಾಲದಲ್ಲಿ ಸತ್ತಾಗ ಅವುಗಳ ಹೆಸರಿನಲ್ಲಿ ಶಾಸನವನ್ನು ಹಾಕಿಸುತ್ತಾ ಲೋಕ ಎಂಬ ನಾಯಿಯು ೭೫ ಹಂದಿಗಳನ್ನು, ಧಳಗ ಎಂಬ ನಾಯಿಯು ೨೬ ಹಂದಿಗಳನ್ನು ಕೊಂದುಹಾಕಿದ್ದರ ಪ್ರಸ್ತಾಪ ಮಾಡುತ್ತಾನೆ.

ಈ ಶಾಸನ ಶಿಲ್ಪದಲ್ಲಿ ಎರಡು ಪಟ್ಟಿಕೆಗಳಿದ್ದು ಒಂದನೇ ಪಟ್ಟಿಕೆಯಲ್ಲಿ ೭೫ ಹಂದಿಗಳನ್ನು ಕೊಂದ ಲೋಕ ಎಂಬ ನಾಯಿಯು ಹಂದಿಯೊಂದಿಗೆ ಹೋರಾಡುತ್ತಿರುವ, ಎರಡನೇ ಪಟ್ಟಿಕೆಯಲ್ಲಿ ೨೬ ಹಂದಿಗಳನ್ನು ಕೊಂದ ಧಳಗ ಎಂಬ ನಾಯಿಯು ಹಂದಿಯೊಂದಿಗೆ ಹೋರಾಡುತ್ತಿರುವ ಚಿತ್ರಗಳನ್ನು ಪ್ರತ್ಯೇಕವಾಗಿ ಕೆತ್ತಲಾಗಿದೆ.

ಅತೀ ಮಹತ್ವದ ಶಾಸನವೆಂದರೆ ಕ್ರಿ.ಶ. ೯೫೦ರ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಆತಕೂರು ಶಾಸನ. ಶಾಸನದ ಪಾಠ ಈ ರೀತಿ ಇದೆ :

''ಬೂತುಗನಜ್ಜಕಾಜಿ ಶ್ರೀಮತ್ ಮಣಲೆರಜ್ಗೆ ಅನುವರದೊಳ್ ಮೆಚ್ಚಿಬೇಡಿ ಕೊಳ್ಳೆನ್ದೊಡೆ ದಯೆಯ ಮೆಚ್ಚಿವೂ (ಡೆ ಅಮ್ಮ) ಕಾಳಿಯಂ ದಯೆಗೆಯ್ಯನ್ದು ಕೊಣ್ಡನಾ ನಾಯ ಕೆಳಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ ಪಿರಿಯ ಪನ್ದಿಗೆ ವಿಟ್ಟೊಡೆ ಪನ್ದಿಯುಂ ನಾಯು ಮೊಡನತ್ತುವದರ್ಕ್ಕೆ ಮಾತು ಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಳಗೆ ಮಳ್ತಿ ಕಾಲಜ್ಗಳೋಳಿರ್ಕ್ಕಣ್ಡುಗ ಮಣ್ಣ ಕೊಟ್ಟರಾ ಮಣ್ಣನೊಕ್ಕಲ್ ನಾಡನಾಳ್ವೊನೂರ ನಾಳ್ವೋರೀ ಮಣ್ಣನಳಿದೊನಾ ನಾಯಿಗೆಯ್ದ ಪಾಪಮಂ ಕೊಣ್ಬೊನಾ ಸ್ಥಾನ ಮನಾಳ್ವ ಗೊರವನಾ ಕಲ್ಲಂ ಪೂಜಿಸದುಣ್ವರಪ್ಪೊಡೆ ನಾಯಿಗೆಯ್ದ ಪಾಪಮಂ ಕೊಣ್ಬಂ'' (EC 07 Md. ಶಾ.ಸ. 42).

ರಾಷ್ಟ್ರಕೂಟದೊರೆ ೩ನೇ ಕೃಷ್ಣನು ತನ್ನ ಭಾವನಾದ (ತಂಗಿಯ ಗಂಡ) ಗಂಗ ವಂಶದ ದೊರೆ ಇಮ್ಮಡಿ ಬೂತುಗ ಮತ್ತು ಇಮ್ಮಡಿ ಬೂತುಗನ ಸಾಮಂತ ಮಣಲೆರ ಎಂಬುವನ ನೆರವಿನೊಂದಿಗೆ ಚೋಳರ ರಾಜಾದಿತ್ಯನನ್ನು ಸೋಲಿಸಿ ಕೊಂದನು. ಈ ಯುದ್ಧದಲ್ಲಿ ಮಣಲೆರನ ಶೌರ್ಯ ಪ್ರತಾಪಕ್ಕೆ ಮೆಚ್ಚಿ ''ಏನು ಬೇಕು ಕೇಳಿಕೋ'' ಎಂದಾಗ ಮಣಲೆರನ ಬೇಡಿಕೆಯಂತೆ ಕಾಳಿ ಎಂಬ ಹೆಣ್ಣು ನಾಯಿಯನ್ನು ಕೊಡುತ್ತಾನೆ. ಆ ನಾಯಿಯು ಮಹಾಕಾಳಿಯಂತೆಯೇ ಅತ್ಯಂತ ಬಲಿಷ್ಠ ನಾಯಿಯಾಗಿದ್ದಿರಬಹುದು. ಆದ್ದರಿಂದಲೇ ಮಣಲೆರ ನಾಯಿಯನ್ನು ಬೇಡಿ ಪಡೆಯುತ್ತಾನೆ. ಒಂದು ದಿನ ಮಣಲೆರನು ಬೆಳತೂರಿನ ಪಶ್ಚಿಮ ದಿಕ್ಕಿನ ಒಂದು ಗುಡ್ಡದ ಪ್ರದೇಶದಲ್ಲಿ ಕಾಡು ಹಂದಿಗಳ ಬೇಟೆಗೆ ಹೋಗಿದ್ದಾಗ ಒಂದು ದೊಡ್ಡ ಕಾಡುಹಂದಿಯೊಂದರ ಮೇಲೆ ಕಾಳಿಯಾದ ನಾಯಿಯನ್ನು ಹೋರಾಟಕ್ಕೆ ಬಿಡುತ್ತಾನೆ. ಈ ಹೋರಾಟದಲ್ಲಿ ನಾಯಿ ಮತ್ತು ಹಂದಿಗಳು ಒಟ್ಟಿಗೆ ಸಾಯುತ್ತವೆ. ಕಾಡುಹಂದಿಯನ್ನು ಕೊಂದು ತಾನು ಮರಣಿಸಿದ ನಾಯಿಯ ಪರಾಕ್ರಮಕ್ಕೆ ಮೆಚ್ಚಿ ಮಣಲೆರನು ಆ ನಾಯಿಯ ಸಮಾಧಿಯ ಮೇಲೆ ಸ್ಮಾರಕದ ರೂಪದಲ್ಲಿ ಒಂದು ಶಾಸನವನ್ನು ಆತಕೂರಿನ 'ಚಲ್ಲೇಶ್ವರ' ದೇವಾಲಯದ ಮುಂದೆ ಹಾಕಿಸುತ್ತಾನೆ. (ಪ್ರಸ್ತುತ ಈ ಶಾಸನವು ಬೆಂಗಳೂರಿನ ಮ್ಯೂಸಿಯಂನಲ್ಲಿದೆ.) ಆ ಸ್ಮಾರಕವನ್ನು ಪೂಜಿಸಲು ಒಬ್ಬ ಶೈವ ಸನ್ಯಾಸಿಯನ್ನು ನೇಮಿಸುತ್ತಾನೆ. ಅವನಿಗೆ ದೊಡ್ಡ ಕೆರೆಯ ಕೆಳಗೆ ಮುತ್ತಿನ ಕಾಲುವೆಯ ಬಳಿಯಲ್ಲಿ ಎರಡು ಖಂಡುಗ ಬೆಳೆ ಬೆಳೆಯುವ ಜಮೀನನ್ನು ದತ್ತಿ ನೀಡುತ್ತಾನೆ. ಆ ಜಮೀನನ್ನು ನಾಶಮಾಡಿದವರು ಆ ನಾಯಿ ಮಾಡಿದ ಪಾಪವನ್ನು ಹೊರಬೇಕಾಗುತ್ತದೆ

ಮತ್ತು ಆ ಶೈವ ಸನ್ಯಾಸಿಯು ಈ ಶಾಸನವನ್ನು ಪೂಜಿಸದೇ ಊಟಮಾಡಿದರೆ ಆ ನಾಯಿಮಾಡಿದ ಪಾಪಕ್ಕೆ ಗುರಿಯಾಗುತ್ತಾನೆ – ಎಂಬ ಶಾಪಾಶಯವನ್ನು ಬರೆಸಿದ್ದಾನೆ. ಈ ಶಾಸನದ ಮೇಲ್ಭಾಗದಲ್ಲಿ ನಾಯಿ ಮತ್ತು ಹಂದಿಯು ರೋಷದಿಂದ ಕಾದಾಡುತ್ತಿರುವ ಚಿತ್ರವನ್ನು ಬಿಡಿಸಲಾಗಿದ್ದು, ಶಾಸನದ ಕೆಳಗೆ ಶಾಸನದ ಲಿಪಿಯನ್ನು ಬರೆಯಲಾಗಿದೆ.

ಕ್ರಿ.ಶ. ಸುಮಾರು ೧೦೧೨-೪೪ರ ಕಾಲದ 'ಕಸ್ನಾಲ' ಎಂಬ ಗ್ರಾಮದ ಶಾಸನದಲ್ಲಿ ಪಲ್ಲವಗಾವುಂಡನ ಸಾಕುನಾಯಿ 'ಮಾದಕೇಸರಿ'ಯು ಹಂದಿಯೊಂದಿಗೆ ಹೋರಾಡಿ ಸತ್ತ ವಿವರವನ್ನು ತಿಳಿಸುತ್ತದೆ.

ಮಡಕಶಿರಾ ತಾಲ್ಲೂಕಿನ ಶಾಸನವು ತಣ್ಣೂರು ಮತ್ತು ಚೋರಗಿರಿಯನ್ನಾಳುತ್ತಿದ್ದ ಒಬ್ಬ ಸಾಮಂತನ ಸಾಕುನಾಯಿ '**ಪುಣಿಗ**'ವು ಹಂದಿಯೊಡನೆ ಹೋರಾಡಿ ಸತ್ತ ವಿವರಗಳನ್ನು ನೀಡುತ್ತದೆ.

ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ವಣಕನ ಹಳ್ಳಿಯ ಶಾಸನದಲ್ಲಿ ಮೂರ್ನಾಲ್ಕು ನಾಯಿಗಳು ಒಂದು ಹಂದಿಯ ಮೇಲೆ ಆಕ್ರಮಣಮಾಡಿ ಅದರ ಚರ್ಮವನ್ನು ಬಾಯಿಂದ ಕೀಳುತ್ತಿರುವಂತೆ ಚಿತ್ರಿಸಲಾಗಿದೆ. ಕೊನೆಯದಾಗಿ ಹೊಸಕೋಟೆ ತಾಲ್ಲೂಕಿನ ಕೋಡಿಹಳ್ಳಿ ಮತ್ತು ಕಟ್ಟಿಗೆನಹಳ್ಳಿಯಲ್ಲಿ ನಿರ್ಮಿಸಿದ ಶಾಸನಗಳನ್ನು ಚಿತ್ರವಿರುವ ಲಿಪಿಯಿಲ್ಲದ ನಾಯಿಯ ಸ್ಮಾರಕಗಳೆಂದು ಗುರ್ತಿಸಬಹುದು. ಇದೇ ರೀತಿ ಯಲಹಂಕ, ನೆಲಮುಗಿಲು, ಬಳ್ಳಿಗಾವೆ ಮುಂತಾದ ಊರುಗಳಲ್ಲಿನ ಶಾಸನಗಳಲ್ಲಿ ನಾಯಿಯ ಸ್ಮಾರಕಗಳನ್ನು ನೋಡಬಹುದು.

ಹಂದಿಯೊಂದಿಗೆ ಹೋರಾಡುತ್ತಿದ್ದ ಸಾಕುನಾಯಿಗಳು ಹೇಗಿರುತ್ತಿದ್ದವು ಎಂಬ ವರ್ಣನೆಯನ್ನು ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಹೇಳಿರುವುದನ್ನು ಆರ್. ಶೇಷಶಾಸ್ತ್ರಿಯವರು ಗುರ್ತಿಸಿದ್ದಾರೆ. ಆ ಪದ್ಯದ ಸಾರಾಂಶ ಈ ರೀತಿಯಿದೆ :

''ಹಂದಿಬೇಟೆಯ ಸಾಕುನಾಯಿ ಎಂತಹದೆಂದರೆ ತೆಳುವಾದ ಸೊಂಟ, ಅಗಲವಾದ ಎದೆ, ನೆಟ್ಟಗೆ ನಿಂತಿರುವ ಕಿವಿ, ಬಾಗಿದ ಹುಬ್ಬು, ದಪ್ಪವಾಗಿ ಮಾಂಸವಿಲ್ಲದ ಕಾಲುಗಳು, ನೆಲವನ್ನು ಮುಟ್ಟಿದ ಉಗುರುಗಳು,ಜಾತಿಯ ಕುದುರೆಯಂತೆ ವೇಗವಾಗಿ ನಡೆಯುವ, ಶಾಕ್ತೇಯ ಮತದ ವಂಚಕನಂತೆ ತನ್ನ ಮಾರ್ಗವನ್ನು ಹಿಡಿದು ತೂಬಿನ ನೀರಿನ ಹಾಗೆ ಸಡಿಲವಾದ. ತಕ್ಷಣವೇ ಅಡ್ಡಲಾಗಿ ಹರಿದು, ಮಾನ್ಯರ ಸೇವಕನಂತೆ ಕಾದಲು ಆಲಸ್ಯಪಡದೆ, ಸೂಳೆಯಂತೆ ಸುಲಿಗೆಗೊಂಡು ಓಡಿಸದೆ, ಯೋಗ್ಯನಂತೆ ನಂಬಿಸಿ, ಒತ್ತರದಂತೆ ಒತ್ತಿ ಉರಿಯು ಹರಡುವಂತೆ ಹರಡಿಕೊಳ್ಳುವುದು.'' (ವಿ.ವಿ. ೫-೪೬)

ಇಂತಹ ಶಾಸನಚಿತ್ರಗಳಿಂದ ಪಂಪ ಸ್ಫೂರ್ತಿಗೊಂಡು ತನ್ನ ಕಾವ್ಯದಲ್ಲಿ ಚಿತ್ರಿಸಿ, ಆನಂತರ ಬಂದ ಶಾಸನಕಾರರು ಶಾಸನಚಿತ್ರ ಮತ್ತು ಪಂಪನ ವರ್ಣನೆಯಂತೆ ನಾಯಿಯ ಸ್ಮಾರಕಗಳನ್ನು ಚಿತ್ರಿಸುತ್ತಿದ್ದರೆಂದು ತಿಳಿಯಬಹುದು.

ಈ ರೀತಿಯಾಗಿ ಹಿಂದೆ ನಾಯಿಗೋಸ್ಕರ ಸ್ಮಾರಕವನ್ನು ನಿರ್ಮಿಸುತ್ತಿದ್ದ ಸಂಸ್ಕೃತಿಯನ್ನು ಶಾಸನಗಳಿಂದ ತಿಳಿಯಬಹುದಾಗಿದೆ.

**ಆಸಕ್ತರ ಗಮನಕ್ಕೆ :**

ಇಂತಹ ಐತಿಹಾಸಿಕ ಸಂಗತಿಗಳ ವಿವರಗಳಿಗೆ ಡಾ|| ಆರ್. ಶೇಷಶಾಸ್ತ್ರಿ ಅವರ 'ಕರ್ನಾಟಕದ ವೀರಗಲ್ಲುಗಳು' ಕೃತಿಯನ್ನು ಗಮನಿಸಬಹುದು.

ವಿ. ಜಯರಾಮ್
ಕನ್ನಡ ಉಪನ್ಯಾಸಕರು, ದಿ ಆಕ್ಸ್‌ಫರ್ಡ್ ಇಂಜಿನಿಯರಿಂಗ್ ಕಾಲೇಜ್
ಹೊಸೂರು ಮುಖ್ಯ ರಸ್ತೆ, ಬೊಮ್ಮನಹಳ್ಳಿ , ಬೆಂಗಳೂರು -೬೮

# ಸಾದರ ಸ್ವೀಕಾರ

**ದ್ರಾಕ್ಷಿ ಕೃಷಿ** ಡಾ|| ಪಿ. ನಾರಾಯಣ ಸ್ವಾಮಿ, ವೈ. ಪಂಪಣ್ಣ
**ಪುಟ :** ೧೨೦ **ಬೆಲೆ : ರೂ.** ೧೦೦

**ಜೀರುಂಡೆಗಳ ಜಾಗತಿಕ ಜಾತ್ರೆ** ಡಾ|| ಎಸ್. ಎಸ್. ಲೀಲಾ
**ಪುಟ :** ೩೨ **ಬೆಲೆ : ರೂ.** ೨೨

**ಬತ್ತದ ಕೊಳವೆ ಬಾವಿಯಲ್ಲಿ ಉಕ್ಕಿದ ಗಂಗೆ**
ಎಸ್. ಜೆ. ದೇವರಾಜ ರೆಡ್ಡಿ
**ಪುಟ :** ೧೨೦ **ಬೆಲೆ : ರೂ.** ೮೦

**ಮನಸ್ವಿ - ಡಾ|| ಸಿ. ಆರ್. ಚಂದ್ರಶೇಖರ್ ಅವರ 60 ವರ್ಷಗಳ ಬದುಕು-ಬರಹ** ಡಾ|| ನಾ. ಸೋಮೇಶ್ವರ
**ಪುಟ :** ೧೫೨ **ಬೆಲೆ : ರೂ.** ೭೫

**ಪೂಚಂತೇ ಅವರ ಕರ್ವಾಲೊ** (ನಾಟಕ ರೂಪಾಂತರ)
ಪಿ. ನಾ. ರಾವ್ ಜಾದವ್
**ಪುಟ :** ೧೧೨ **ಬೆಲೆ : ರೂ.** ೬೦

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ರಾಮಾಯಣದ ಶ್ರೀರಾಮ ದೇವರೆ ?** ಜಿವೆಂಪು
**ಪುಟ :** ೧೫೨ **ಬೆಲೆ : ರೂ.** ೧೦೦

**ಮಹಾಭಾರತದ ಶ್ರೀಕೃಷ್ಣ ಪರಮಾತ್ಮನೆ ?** ಜಿವೆಂಪು
**ಪುಟ :** ೧೪೦ **ಬೆಲೆ : ರೂ.** ೧೦೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವಿಶ್ವ ಪ್ರಕಾಶನ**, ೧೬೬೫, ೬ನೇ ಕ್ರಾಸ್, ೬ನೇ ಮೈನ್, ಹಂಪಿನಗರ, ಬೆಂಗಳೂರು - ೫೬೦ ೧೦೪

**ಸೀಕರಣೆ** (ಲಲಿತ ಪ್ರಬಂಧಗಳು) ವಸುಮತಿ ಉಡುಪ
**ಪುಟ :** ೧೩೮ **ಬೆಲೆ : ರೂ.** ೬೦
ಐಬಿಎಚ್ ಪ್ರಕಾಶನ, ೭೭, ೨ನೇ ಮುಖ್ಯರಸ್ತೆ, ರಾಮರಾವ್ ಲೇಔಟ್, ಬಿಎಸ್‌ಕೆ ೩ನೇ ಸ್ಟೇಜ್, ಬೆಂಗಳೂರು - ೮೫

**ಕನ್ನಡ ಕುಸುಮ** (ಕಾದಂಬರಿ) ಕುಕ್ಕೆಹಳ್ಳಿ ವಿಠ್ಠಲ ಎನ್. ಪ್ರಭು
**ಪುಟ :** ೧೧೭ **ಬೆಲೆ : ರೂ.** ೧೦೦
**ಕಥೇರಿ ಪಬ್ಲಿಕೇಷನ್ಸ್**, ಬಿ-೫೦೬, ಕ್ರಿಸ್ಟಲ್ ಅವೆನ್ಯೂ, ಠಾಕೂರ್ ವಿಲೇಜ್, ಕಾಂದಿವಿಲಿ ಪೂರ್ವ, ಮುಂಬೈ - ೪೦೦ ೦೦೧

**ವಿಜ್ಞಾನಿಗಳ ವಿಸ್ಮಯ ಜೀವನ** (ನುಡಿಚಿತ್ರಗಳ ಸಂಕಲನ)
ಹುರುಕಡ್ಲಿ ಶಿವಕುಮಾರ
**ಪುಟ :** ೯೮ **ಬೆಲೆ : ರೂ.** ೫೦
**ವಾಸ್ತವ ಗ್ರೂಪ್ಸ್**, ಹಳೇ ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

**ಒಂಟಿ ನಕ್ಷತ್ರ** (ಕಿರು ಕಾದಂಬರಿ) ಸುಮಿತ್ರಾ ರಾಮಣ್ಣ
**ಪುಟ :** ೯೮ **ಬೆಲೆ : ರೂ.** ೫೦
**ಆಶಾ ಪ್ರಕಾಶನ**, ೧೧೬೪, ನಾರಾಯಣ ಶಾಸ್ತ್ರಿ ರಸ್ತೆ, ಮೈಸೂರು - ೫೭೦ ೦೦೪

**ಕುಕ್ಕರಹಳ್ಳಿ ಕೆರೆ ಪರಿಸರ ಕಥೆ** ಕೆ. ಎಂ. ಜಯರಾಮಯ್ಯ
**ಪುಟ :** ೬೦ **ಬೆಲೆ : ರೂ.** ೨೫
**ಸಂಸ್ಕೃತಿ ಪಬ್ಲಿಷಿಂಗ್ ಹೌಸ್**, ೬೬೮, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦ ೦೨೪

**ಗುಬ್ಬಿಹಳ್ಳದ ಸಾಕ್ಷಿಯಲ್ಲಿ** (ಕಥಾ ಸಂಕಲನ) ಎಲ್. ಸಿ. ಸುಮಿತ್ರಾ
**ಪುಟ :** ೯೬ **ಬೆಲೆ : ರೂ.** ೭೦
**ಅಂಕಿತ ಪುಸ್ತಕ**, ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

**ಮಬ್ಬಿನಾಚೆಯ ಬೆಳಕು** (ಕವನ ಸಂಕಲನ) ಜಿ. ಇಂದ್ರಕುಮಾರ್
**ಪುಟ :** ೭೯ **ಬೆಲೆ : ರೂ.** ೬೦
**ಪ್ರೀತಿ ಪ್ರಕಾಶನ**, ಗರುಗದೊಡ್ಡಿ, ದಾಸರಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು

**ಹದ** (ಕವನ ಸಂಗ್ರಹ) ಕೃಷ್ಣನಾಯಕ ಹಿಚ್ಕಡ
**ಪುಟ :** ೬೮ **ಬೆಲೆ : ರೂ.** ೬೦
**ಜಿನದೇವ ಪ್ರಕಾಶನ**, ಹಿಚ್ಕಡ, ಅಂಕೋಲಾ, ಉತ್ತರಕನ್ನಡ ಜಿಲ್ಲೆ

**ಶಿಕ್ಷಣ ಪ್ರೇಮಿ ಶ್ರೀ ಮುದೇಗೌಡ್ರ ವೀರಭದ್ರಪ್ಪ** (ಅಭಿನಂದನ ಗ್ರಂಥ) ಪ್ರ.ಸಂ.: ಪ್ರೊ|| ಬಿ. ವಿ. ವೀರಭದ್ರಪ್ಪ
**ಪುಟ :** ೫೦೦ **ಬೆಲೆ : ರೂ.** ೩೦೦
**ಅಭಿನಂದನಾ ಗ್ರಂಥ ಮಿತ್ರವೃಂದ ಹಾಗೂ ನೌಕರರು**, ನೂತನ ವಿದ್ಯಾಸಂಸ್ಥೆ, ಎಲ್‌ಐಸಿ ಕಾಲೋನಿ, ಬಿ.ಐ.ಇ.ಟಿ. ಕಾಲೇಜು ರಸ್ತೆ, ವಿದ್ಯಾನಗರ, ದಾವಣಗೆರೆ - ೫೭೭ ೦೦೪

**ಆರೋಗ್ಯಕ್ಕಾಗಿ ಔಷಧಿಯ ಗುಣವುಳ್ಳ ನೀರು ಸೇವನೆ**
ಎಂ. ಎಲ್. ರಾಯಮಾನೆ
**ಪುಟ :** ೮೮ **ಬೆಲೆ : ರೂ.** ೨೦

**ಮಂದಸ್ಮಿತ** (ಹಾಸ್ಯ ಕಾದಂಬರಿ)
ಎಂ. ಎಸ್. ನರಸಿಂಹಮೂರ್ತಿ
**ಪುಟ :** ೧೪೮ **ಬೆಲೆ : ರೂ.** ೩೫

**ನಿಮ್ಮ ವಿಶ್ರಾಂತಿ ನಿಮ್ಮ ಆರೋಗ್ಯ** ಎನ್. ವಿಶ್ವರೂಪಾಚಾರ್
**ಪುಟ :** ೭೨ **ಬೆಲೆ : ರೂ.** ೨೦

**ಪಂಚಬಳ್ಳಿಯ ಕಥೆಗಳು** ಸವಿತಾ ಶ್ರೀನಿವಾಸ
**ಪುಟ :** ೧೬೦ **ಬೆಲೆ : ರೂ.** ೫೦

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ದಿವ್ಯಚಂದ್ರ ಪ್ರಕಾಶನ**, ೪೫, ಪಾಪಣ್ಣನ ತೋಟ, ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯




# ಒಂದು ಅಪೂರ್ವ ಸತ್ಯ ಕಥೆ
# ಶಿಂಡ್‌ಲರ್ಸ್ ಲಿಸ್ಟ್

ಇದು ಕೇವಲ ಇನ್ನೊಂದು ಚಲನಚಿತ್ರ ಎನಿಸಿಕೊಳ್ಳುವುದಿಲ್ಲ. ಯೆಹೂದಿಗಳ ಮಾರಣಹೋಮವನ್ನು ನೆನಪಿಸಿಕೊಂಡು ನಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಈ ಚಲನಚಿತ್ರವು ಅಂತಸ್ಸಾಕ್ಷಿಯ ಬಗೆಗಿನದು. – *ಸ್ಟೀವನ್ ಸ್ಪೀಲ್‌ಬರ್ಗ್*

**ಡಾ|| ಸರಜೂ ಕಾಟ್ಕರ್**

**ಜ**ಗತ್ಪ್ರಸಿದ್ಧ ಚಿತ್ರ ನಿರ್ಮಾಪಕ ಮತ್ತು ಹಾಲಿವುಡ್ಡಿನ ಯೂನಿವರ್ಸಲ್ ಚಿತ್ರ ಸಂಸ್ಥೆಯ ಅಧ್ಯಕ್ಷ ಸಿಡ್ನಿ ಜೆ. ಶೀನ್ ಬರ್ಗ್ ನ್ಯೂಯಾರ್ಕಿನಿಂದ ವಾಷಿಂಗ್ಟನ್‌ಗೆ ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದಾಗ ಪಕ್ಕದಲ್ಲಿ ಕುಳಿತಿದ್ದ ಸಹ ಪ್ರಯಾಣಿಕನ ಜೊತೆಗಿದ್ದ ಒಂದು ಕಾದಂಬರಿ ನೋಡಿದ. 'ಶಿಂಡ್‌ಲರ್ಸ್ ಆರ್ಕ್' ಆಸ್ಟ್ರೇಲಿಯಾದ ಖ್ಯಾತ ಕಾದಂಬರಿಗಾರ ಥಾಮಸ್ ಕೆನೆಲಿ ಬರೆದಿರುವ ಕಾದಂಬರಿ. 'ಇದೊಂದು ಅಪೂರ್ವ ಸತ್ಯಕಥೆ' ಎಂಬ ಉಪತಲೆಬರೆಹದೊಂದಿಗೆ ಪ್ರಕಟವಾಗಿದ್ದ ಈ ಕಾದಂಬರಿಯನ್ನು ಸಿಡ್ನಿ ಶೀನ್‌ಬರ್ಗ್ ಸಹಜವೆಂಬಂತೆ ಕೈಗೆತ್ತಿಕೊಂಡು ಅದರ ಪುಟಗಳ ಮೇಲೆ ಕಣ್ಣಾಡಿಸತೊಡಗಿದ. ಪುಟಗಳನ್ನು ಓದುತ್ತಿದ್ದಂತೆಯೇ ಸಿಡ್ನಿ ಆ ಕಾದಂಬರಿಯಲ್ಲಿ ಎಷ್ಟು ಮುಳುಗಿಹೋದನೆಂದರೆ ಆತ ಗಗನಸಖಿ ನೀಡಲು ಬಂದ ಊಟ, ಡ್ರಿಂಕ್ಸ್‌ಗಳಿಗೆ ಕೈ ಹಚ್ಚಲಿಲ್ಲ. ಕಾದಂಬರಿ ಮುಗಿದಾಗ ಸಿಡ್ನಿ ಅಳುತ್ತಿದ್ದ; ಅಸಹಾಯಕನಂತೆ ತನ್ನಷ್ಟಕ್ಕೆ ತಾನು ವ್ಯಥೆಪಡುತ್ತಿದ್ದ. ಸಾವಿರಾರು ತಪ್ಪು, ಅಪರಾಧ ಮತ್ತು ಪಾಪಗಳನ್ನು ಮಾಡಿದವನಂತೆ ಪಶ್ಚಾತ್ತಾಪಪಡುತ್ತಿದ್ದ. 'ಈ ರೀತಿಯ ಘಟನೆ ನಡೆದದ್ದೇ ನಿಜವಾಗಿದ್ದರೆ, ಅದಕ್ಕಾಗಿ ನಾವು ದೇವರಿಗೆ ಸಾವಿರ ಸಲ ಕೃತಜ್ಞರಾಗಿರಬೇಕು' ಎಂದು ಪದೇ ಪದೇ ದೇವರಿಗೆ ಕೈಮುಗಿಯುತ್ತಿದ್ದ.

ಥಾಮಸ್ ಕೆನೆಲಿ ಬರೆದ ಕಾದಂಬರಿ ಸತ್ಯ ಘಟನೆ ಆಧರಿಸಿ ಬರೆದ ಕಾದಂಬರಿ. ಎರಡನೆಯ ಮಹಾಯುದ್ಧದಲ್ಲಿ ನಡೆದ ಒಂದು ಘಟನೆಯನ್ನು ಕಣ್ಣಿಗೆ ಕಟ್ಟುವಂತೆ ಕೆನೆಲಿ ಕಾದಂಬರಿಯನ್ನಾಗಿ ಪರಿವರ್ತಿಸಿದ್ದ. ಕ್ರೌರ್ಯ ಮತ್ತು ಔದಾರ್ಯದ ಅಪ್ರತಿಮ ಮಿಶ್ರಣವೇ ಕೆನೆಲಿ ಬರೆದ ಕಾದಂಬರಿಯಾಗಿದೆ. ಎರಡನೆಯ ಮಹಾಯುದ್ಧದಲ್ಲಿ ನಾಝಿಗಳು ನಡೆಸಿದ ಜ್ಯೂ ನರಸಂಹಾರದ ನಾಯಕ ಜರ್ಮನ್‌ನಾಗಿದ್ದರೂ ಸುಮಾರು ೧೨೦೦ ಜ್ಯೂ ಜನರನ್ನು ಸಂರಕ್ಷಿಸಿದ ಆಸ್ಕರ್ ಶಿಂಡ್‌ಲರ್ಸ್‌ನ ನಿಜ ಜೀವನದ ಕತೆಯೇ ಕಾದಂಬರಿಯ ವಸ್ತುವಾಗಿತ್ತು. ಅದರಲ್ಲಿ ಚಿತ್ರಿತವಾಗಿದ್ದ ಸತ್ಯ ಘಟನೆಗಳು ಸಿಡ್ನಿಯ ಅಸ್ವಸ್ಥತೆಗೆ ಕಾರಣವಾಗಿದ್ದಿತು. ಈ ಕಾದಂಬರಿಯನ್ನು ಸಿನಿಮಾ ಮಾಡಿ ಜಗತ್ತಿನೆದುರು ಆಸ್ಕರ್ ಶಿಂಡ್‌ಲರ್ಸ್‌ನ ಆದರ್ಶ ಹಾಗೂ ಧೈರ್ಯವನ್ನು ತೋರಿಸಬೇಕೆಂದು ಸಿಡ್ನಿ ನಿರ್ಧರಿಸಿದ. ಆತ ಐದು ಲಕ್ಷ ಡಾಲರುಗಳನ್ನು ಕೆನೆಲಿಗೆ ನೀಡಿ ಕಾದಂಬರಿಯ ಹಕ್ಕನ್ನು ಪಡೆದುಕೊಂಡ.

ಸಿಡ್ನಿಗೆ ಇಷ್ಟು ಅಸ್ವಸ್ಥಗೊಳಿಸಿದ ಆಸ್ಕರ್ ಶಿಂಡ್‌ಲರ್ಸ್ ಹುಟ್ಟಿನಿಂದ ಜರ್ಮನ್‌ನಾಗಿದ್ದ. ಆತ ಜೆಕೋಸ್ಲೋವಾಕಿಯದಲ್ಲಿ ಹುಟ್ಟಿದ್ದರೂ ೧೯೩೯ರಲ್ಲಿ ಪೋಲೆಂಡ್‌ಗೆ ಬಂದ. ಯುದ್ಧದಲ್ಲಿ ನಿರತರಾಗಿರುವ ಸೈನಿಕರಿಗೆ ಆವಶ್ಯಕ ವಸ್ತುಗಳನ್ನು ಪೂರೈಸುವುದರಲ್ಲಿ ಬಹಳಷ್ಟು ಲಾಭ ಗಳಿಸಬಹುದೆಂದು ಲೆಕ್ಕ ಹಾಕಿ ಆತ ಎನ್‌ಮಾಲ್ ಭಾಂಡೆಗಳನ್ನು ತಯಾರಿಸುವ ಕಾರ್ಖಾನೆ ಆರಂಭಿಸಿದ. ಈ ಧಂಧೆಯಲ್ಲಿ ಆತ ಬಹಳಷ್ಟು ಲಾಭ ಗಳಿಸಿದ. ಆತನ ವ್ಯಕ್ತಿತ್ವ, ಮಾತನಾಡುವ ರೀತಿ ನೀತಿಗಳು ಜನರನ್ನು ಸಹಜವಾಗಿ ಆತನೆಡೆಗೆ ಸೆಳೆಯುವಂತಿದ್ದವು. ಕ್ರಮೇಣ ಆತ ನಾಝಿ ಅಧಿಕಾರಿಗಳಿಗೆ ಹತ್ತಿರದವನಾಗಲಾರಂಭಿಸಿದ. ಈ ನಾಝಿ ಮಿಲಿಟರಿ ಅಧಿಕಾರಿಗಳಿಗಾಗಿ ಆತ ಉದಾರವಾಗಿ ಖರ್ಚು ಮಾಡುತ್ತಿದ್ದ. ಆಗೀಗ ಅವರಿಗೆ ಲಂಚ ನೀಡುತ್ತಿದ್ದ. ಆಗ ನಾಝಿ ಸೈನಿಕರು ಜ್ಯೂಗಳ ಹತ್ಯಾಕಾಂಡದಲ್ಲಿ ತೊಡಗಿದ್ದರು. ಜ್ಯೂಗಳನ್ನು ಬಂಧಿಸಿ ಅವರನ್ನು ಸಾಮೂಹಿಕವಾಗಿ ಯಾತನಾಶಿಬಿರಕ್ಕೆ ತಳ್ಳಿ, ನಿರ್ದಯವಾಗಿ ಕೊಲ್ಲಲಾಗುತ್ತಿತ್ತು. ಶಿಂಡ್‌ಲರ್ಸ್ ಈ ಶಿಬಿರಗಳಿಗೆ ನಾಝಿ ಅಧಿಕಾರಿಗಳ ಜೊತೆಗೆ ಭೇಟಿ ನೀಡಿದ್ದ. ಹುಟ್ಟಿನಿಂದ ಜರ್ಮನ್‌ನಾಗಿದ್ದರೂ, ಈ ಹಿಂಸೆ ಆತನಿಗೆ ಸಹ್ಯವಾಗಿರಲಿಲ್ಲ. ಮನಸ್ಸಿನಲ್ಲಿಯೇ ಆತ ಹಿಟ್ಲರ್‌ನ ಬಗ್ಗೆ ಅಸಹ್ಯಪಡಲಾರಂಭಿಸಿದ.

ಪ್ಲಾಝೋ ಯಾತನಾ ಶಿಬಿರದ ಜರ್ಮನ್ ಅಧಿಕಾರಿ ಅಮನ್ ಗೋಯೆಥ್ ಶಿಂಡಲರ್ಸ್‌ನ ಗೆಳೆಯನಾದ. ಈ ಪ್ಲಾಝೋ ಯಾತನಾ ಶಿಬಿರದಲ್ಲಿ ಅನೇಕ ಜ್ಯೂಗಳನ್ನು ಬಂಧಿಸಿಡಲಾಗಿತ್ತು. ಬಂಧಿತ ಜ್ಯೂಗಳಲ್ಲಿ ಕೆಲವರನ್ನು ತನಗೆ ಒಪ್ಪಿಸಬೇಕೆಂದೂ ಅವರನ್ನು ತನ್ನ ಕಾರ್ಖಾನೆಯಲ್ಲಿ ಕೆಲಸಕ್ಕಿಟ್ಟುಕೊಳ್ಳುತ್ತೇನೆಂದೂ ಶಿಂಡ್‌ಲರ್ಸ್ ಗೋಯೆಥ್‌ಗೆ ಹೇಳಿದ. "ಹೇಗೋ, ಇಂದಿಲ್ಲದಿದ್ದರೆ ನಾಳೆ ಈ ಜ್ಯೂ ಜನರನ್ನು ನೀವು ಗ್ಯಾಸ್ ಚೇಂಬರ್‌ಗೆ ಹಾಕಿ ಕೊಲ್ಲಲಿದ್ದೀರಿ. ಅದರ ಬದಲು ಅವರು ನನ್ನ ಕಾರ್ಖಾನೆಯಲ್ಲಿ ದಿನಕ್ಕೆ ಹನ್ನೆರಡು ತಾಸು ಕೆಲಸ ಮಾಡಲಿ" ಎಂದು ಹೇಳಿದ.

ಚಿತ್ರ ಕಪ್ಪು ಬಿಳುಪಾಗಿದ್ದರೂ ಜೇನಿಯಾ ಎಂಬ ನಾಲ್ಕು ವರ್ಷದ ಹುಡುಗಿ ಹಾಕಿಕೊಂಡ ಕೋಟ್‌ಅನ್ನು ಮಾತ್ರ ಕೆಂಪು ಬಣ್ಣದಲ್ಲಿ ತೋರಿಸಿದ್ದ ಸ್ಪೀಲ್‌ಬರ್ಗ್. ಮೂಲ ಕಾದಂಬರಿಯಲ್ಲಿ ಹಾಗೂ ನಿಜ ಜೀವನದಲ್ಲೂ ಜೇನಿಯಾ ಎಂಬ ಹುಡುಗಿ ಶಿಂಡ್‌ಲರ್ಸ್‌ನ ಜೀವನದಲ್ಲಿ ಬಂದಿರುತ್ತಾಳೆ. ಈ ಜ್ಯೂ ಹುಡುಗಿಯ ಮುಗ್ಧ ಸ್ವಭಾವದಿಂದಾಗಿಯೇ ಶಿಂಡ್‌ಲರ್ಸ್ ಜ್ಯೂಗಳ ಬಗ್ಗೆ ಆಸಕ್ತಿ ವಹಿಸಿದನೆಂದೂ ವಿಶ್ಲೇಷಿಸುವವರಿದ್ದಾರೆ. ಜ್ಯೂಗಳನ್ನು ಗ್ಯಾಸ್ ಚೆಂಬರ್‌ಗೆ ಕರೆದುಕೊಂಡು ಹೋಗುವ ದೃಶ್ಯ. ಜನರು, ಹೆಂಗಸರು, ಮಕ್ಕಳು ಅಳುತ್ತಿದ್ದಾರೆ. ನಾಝಿ ಸೈನಿಕರು ಅವರ ಆಕ್ರಂದನವನ್ನು ಲಕ್ಷಿಸದೆ, ಟ್ರಕ್ಕಿನಲ್ಲಿ ಕುರಿಗಳನ್ನು ತುಂಬಿದಂತೆ ತುಂಬುತ್ತಿದ್ದಾರೆ. ಜೇನಿಯಾ ಸೈನಿಕರಿಂದ ತಪ್ಪಿಸಿಕೊಂಡು ಮನೆಯಲ್ಲಿ ಅವಿತುಕೊಂಡಿದ್ದಾಳೆ. ಅವಳು ಹಾಕಿಕೊಂಡ ಕೆಂಪು ಕೋಟ್ ಕಣ್ಣಿಗೆ ಕಟ್ಟುತ್ತಿದೆ. ನಂತರ ಸೈನಿಕರು ಜ್ಯೂಗಳ ಹೆಣಗಳನ್ನು ಸಾಗಿಸುವ ದೃಶ್ಯ. ಹೆಣಗಳ ರಾಶಿಯ ಮೇಲೆ ಕೆಂಪು ಕೋಟ್ ಕಾಣಿಸುತ್ತದೆ. ಜೇನಿಯಾಳನ್ನು ಭೀಕರವಾಗಿ ಕೊಂದಿರುತ್ತಾರೆ ಸೈನಿಕರು.



ಚಲನಚಿತ್ರದ ಒಂದು ದೃಶ್ಯ

ಆರಂಭದಲ್ಲಿ ಗೋಯೆಥ್ ಒಪ್ಪಲಿಲ್ಲ. ಇವರೆ ಶಿಂಡ್‌ಲರ್ಸ್‌ನ ಒತ್ತಾಯದೆದುರು ಆತ ಒಪ್ಪಲೇಬೇಕಾಯಿತು. ''ಈ ಜ್ಯೂ ಜನರಿಗೆ ಬರೀ ಒಂದೆರಡು ಬ್ರೆಡ್ ಕೊಡು; ಆದರೆ ಕೆಲಸ ಮಾಡಿದ ಸಂಬಳ ಕೊಡಬೇಡ'' ಎಂದು ಹೇಳಿ ಗೋಯೆಥ್ ಆತನ ಬೇಡಿಕೆಗೆ ಪ್ಪಂಗುಟ್ಟಿದ.

ಶಿಂಡ್‌ಲರ್ಸ್ ಈಗ ತನ್ನ ಕಾರ್ಖಾನೆಯನ್ನು ಚೆಕೋಸ್ಲೋವಾಕಿಯಾಗೆ ಬದಲಿಸಲಿದ್ದ. ಯಾತನಾ ಶಿಬಿರದಿಂದ ತೆಗೆದುಕೊಂಡುಹೋಗಲಿರುವ ಹನ್ನೆರಡು ನೂರು ಜ್ಯೂ ಜನರ ಒಂದು ಯಾದಿಯನ್ನು ಆತ ತಯಾರಿಸಿದ. ಇದರಲ್ಲಿ ಕೆಲಸಗಾರರಿದ್ದಂತೆಯೇ ಸಂಗೀತ ಕೇಳುತ್ತಿದ್ದವರು, ಕಲಾಕಾರರು, ಶಿಕ್ಷಣದ ಬಗ್ಗೆ ಅರಿವಿದ್ದವರು, ಜೊತೆಗೆ ಸಣ್ಣ ಮಕ್ಕಳನ್ನೂ ತನ್ನ ಜೊತೆಗೆ ಕರೆದುಕೊಂಡ. ನಾಜಿಗಳು ಆರಂಭಿಸಿದ ಜ್ಯೂ ವಂಶ ಸಂಹಾರದಿಂದ ಇಡೀ ಜಗತ್ತಿನ ಜ್ಯೂಗಳು ನಾಶವಾಗುವಂತಿದ್ದರೂ, ಶಿಂಡ್‌ಲರ್ಸ್‌ನ ಕಾರ್ಖಾನೆಯಲ್ಲಿ ಈ ಜನಾಂಗದ ಮುಂದಿನ ಕೊಂಡಿ ಜೀವಂತ ಉಳಿಯುವಂತಿತ್ತು. ಈ ಎಲ್ಲ ಜನರನ್ನೂ ಆತ ಚೆಕೋಸ್ಲೊವಾಕಿಯಾಗೆ ಕರೆದುಕೊಂಡು ಹೋಗಿ ತನ್ನ ಕಾರ್ಖಾನೆಯಲ್ಲಿ ಕೆಲಸಕ್ಕೆ ಇಟ್ಟುಕೊಂಡ. ಇವರೆಲ್ಲರಿಗೆ ಆಹಾರ, ಬಟ್ಟೆ-ಬರೆ ನೀಡಿದ; ಸಂಬಳ ಕೊಟ್ಟ.

ಎರಡನೆಯ ಮಹಾಯುದ್ಧ ಮುಗಿಯುತ್ತಿದ್ದಂತೆಯೇ ಈ ಎಲ್ಲ ಹನ್ನೆರಡು ನೂರು ಜನರಿಗೆ ಆತ ಸ್ವಾತಂತ್ರ್ಯ ನೀಡಿದ. ಅವರೆಲ್ಲ ಯೂರೋಪಿನ ಅನೇಕ ದೇಶಗಳಿಗೆ ಹೋಗಿ ಅಲ್ಲಿ ಸ್ಥಾಯಿಕರಾದರು. ಈ ಹನ್ನೆರಡು ನೂರು ಜನರನ್ನು ಶಿಂಡ್‌ಲರ್ಸ್ ರಕ್ಷಿಸಿದ್ದರಿಂದ ಮುಂದೆ ಇವರೆಲ್ಲ 'ಶಿಂಡ್‌ಲರ್ ಜ್ಯೂ' ಎಂದೇ ಜಗತ್ತಿನಲ್ಲಿ ಗುರುತಿಸಲ್ಪಟ್ಟರು. ಯುದ್ಧದ ನಂತರ ಶಿಂಡ್‌ಲರ್ಸ್‌ನ ಆರ್ಥಿಕ ಸ್ಥಿತಿ ಹದಗೆಟ್ಟಿತು. ಆಗ ಅವನ ಸಹಾಯಕ್ಕೆ ಬಂದವರು ಆತ ರಕ್ಷಿಸಿದ ಶಿಂಡ್‌ಲರ್ ಜ್ಯೂಗಳೇ. ಆತ ಮಾಡಿದ ಮಹತ್ಕಾರ್ಯಕ್ಕಾಗಿ ಇಸ್ರೇಲ್ ಸರ್ಕಾರ ಅವನಿಗೆ 'ರಾಯಿಚಸ್ ಅಮಂಗ್ ನೇಶನ್ಸ್' (ಜಗತ್ತಿನ ಸಜ್ಜನ ಮನುಷ್ಯ) ಎಂಬ ಪ್ರಶಸ್ತಿ ನೀಡಿ ಸತ್ಕರಿಸಿತು.

ಅಕ್ಟೋಬರ್ ೯, ೧೯೭೪ರಂದು ಶಿಂಡ್‌ಲರ್ಸ್ ನಿಧನನಾದ. ಈತನಿಂದ ಮರುಜನ್ಮ ಪಡೆದ ಫೀಪರ್‌ಬರ್ಗ್ ಪೋಲ್ಡೆಕ್ ಪೇಜ್ ಲಾಸ್ ಆಂಜಲಿಸ್‌ನಲ್ಲಿ ಒಂದು ಅಂಗಡಿ ನಡೆಸುತ್ತಿದ್ದ. ''ಶಿಂಡ್‌ಲರ್‌ನ ಕಥೆ ಇಡೀ ಜಗತ್ತಿಗೆ ಗೊತ್ತಾಗಬೇಕು; ಇಂತಹ ಜನರೂ ಈ ಜಗತ್ತಿನಲ್ಲಿದ್ದಾರೆಂಬುವುದು ಜಗತ್ತಿಗೆ ತಿಳಿಯಬೇಕು'' ಎಂದು ಆತನಿಗೆ ಅನ್ನಿಸುತ್ತಿತ್ತು. ೧೯೮೦ರಲ್ಲಿ ಆತ ಲೇಖಕ ಥಾಮಸ್ ಕೆನೆಲಿಯನ್ನು ಭೇಟಿಯಾದ. ಕೆನೆಲಿಗೆ ಶಿಂಡ್‌ಲರ್ಸ್‌ನ ಕತೆ ಹೇಳಿದಾಗ, ಮೊದಮೊದಲು ಆತ ನಂಬಲಿಲ್ಲ. ಪೇಜ್ ದಾಖಲೆಗಳನ್ನು ನೀಡಿ ತಾನು ಮತ್ತು ತನ್ನಂತೆ ಹನ್ನೆರಡು ನೂರು ಜನ ಜ್ಯೂಗಳು 'ಶಿಂಡ್‌ಲರ್ ಜ್ಯೂ'ಗಳೆಂದೇ ಗುರುತಿಸಲ್ಪಡುತ್ತೇವೆ ಎಂದು ಹೇಳಿದಾಗ ಕೆನೆಲಿ ರೋಮಾಂಚಿತಗೊಂಡ. ನಂತರ ಹುಟ್ಟಿದ್ದೇ 'ಶಿಂಡ್‌ಲರ್ಸ್ ಆರ್ಕ್' ಕಾದಂಬರಿ. ಈ ಕಾದಂಬರಿ ಅನೇಕ ಸಲ 'ಬೆಸ್ಟ್ ಸೆಲ್ಲರ್' ಎಂದು ಪ್ರಸಿದ್ಧಿ ಪಡೆಯಿತು; ಕಾದಂಬರಿಯ ಬಗ್ಗೆ ಒಳ್ಳೆಯ ವಿಮರ್ಶೆಗಳೂ ಪತ್ರಿಕೆಗಳಲ್ಲಿ ಪ್ರಕಟಗೊಂಡವು.

ಈ ಕಾದಂಬರಿಯನ್ನು ಸಿನಿಮಾ ಮಾಡಬೇಕೆಂದು ಸಿಡ್ನಿ ಶೀನ್‌ಬರ್ಗ್ ನಿರ್ಧರಿಸಿದ. ಸಿನಿಮಾವನ್ನು ನಿರ್ದೇಶಿಸಲು ಖ್ಯಾತ ನಿರ್ದೇಶಕ ಸ್ಟೀವನ್ ಸ್ಪೀಲ್‌ಬರ್ಗ್‌ನಿಗೆ ಆತ ಕೇಳಿಕೊಂಡ. ಸ್ಪೀಲ್‌ಬರ್ಗ್ ಕಾದಂಬರಿ ಓದಿ ಎಷ್ಟು ಪ್ರಭಾವಿತನಾದನೆಂದರೆ ಆತನ ಎದುರು ಸಿನಿಮಾ ಬಿಚ್ಚಿಕೊಳ್ಳಲಾರಂಭಿಸಿತು. ಸಿನಿಮಾದ ಹೆಸರನ್ನು ಆತ 'ಶಿಂಡ್‌ಲರ್ಸ್ ಲಿಸ್ಟ್' ಎಂದು ಬದಲಿಸಿದ. ಚಿತ್ರಕಥೆ ಬರೆಯಲು ನಾಲ್ಕಾರು ಜನರನ್ನು ಆರಿಸಿದ. ಅವರು ಬರೆದದ್ದು ಇವನಿಗೆ ಸರಿಬರಲಿಲ್ಲ; ಮತ್ತೆ ಮತ್ತೆ ತಿದ್ದಿಸಿದ. ಅನೇಕ ಸಲ ಪೋಲೆಂಡ್‌ಗೆ ಹೋಗಿ ಲೊಕೇಶನ್‌ಗಳನ್ನು ನೋಡಿಕೊಂಡು ಬಂದ. ಇಷ್ಟೆಲ್ಲ ಮಾಡಿದರೂ ಅವನಿಗೆ ಒಂದು ವಿಷಯದ ಬಗ್ಗೆ ಇನ್ನೂ ಸ್ಪಷ್ಟತೆ ಮೂಡಿರಲಿಲ್ಲ: ಶಿಂಡ್‌ಲರ್ಸ್ ಹುಟ್ಟಾ ಜರ್ಮನ್‌ನಾಗಿದ್ದವ. ತನ್ನ ಕಂಪನಿ ಲಾಭದಲ್ಲಿರಬೇಕು ಮತ್ತು ತನಗೆ ಮಾತ್ರ ಕಾಂಟ್ರಾಕ್ಟ್‌ಗಳು ಸಿಗಬೇಕೆಂದು ಆತ ಅಧಿಕಾರಿಗಳಿಗೆ ಲಕ್ಷಾವಧಿ ಹಣವನ್ನು ಲಂಚ ನೀಡಿದ್ದ. ಇಂತಹ ಒಬ್ಬ ಮನುಷ್ಯ ತನಗೆ ಅಪಾಯ ಒದಗಿಬರಬಹುದೆಂದು ಗೊತ್ತಿದ್ದರೂ ಈ ಜ್ಯೂ ಜನರನ್ನು 'ಉಳಿಸುವ' ಕೆಲಸಕ್ಕೆ ಏಕೆ ಕೈ ಹಾಕಿದ ? ಒಂದೇ ರಾತ್ರಿಯಲ್ಲಿ ಆತ ಜ್ಯೂ ಜನರನ್ನು ಸಂರಕ್ಷಿಸುವ ನಿರ್ಧಾರ ಮಾಡಿದ್ದ. ಇದು ಹೇಗೆ ಸಾಧ್ಯ, ಎಂಬುದು ಸ್ಪೀಲ್‌ಬರ್ಗ್‌ಗೆ ಒಗಟಾಗಿ ಕಂಡಿತು. ಚಿತ್ರವನ್ನು ಕಪ್ಪು ಬಿಳುಪಿನಲ್ಲಿ ಮಾಡಿದರೆ ಚೆನ್ನ ಎಂಬುದು ಸ್ಪೀಲ್‌ಬರ್ಗ್‌ನ ಅಭಿಪ್ರಾಯವಾಗಿತ್ತು. ಇದೇ ಕಾಲದಲ್ಲಿ ಆತ 'ಜುರಾಸಿಕ್ ಪಾರ್ಕ್' ನಿರ್ದೇಶಿಸುತ್ತಿದ್ದ. ಈ ಚಿತ್ರವನ್ನು ಯೂನಿವರ್ಸಲ್ ಚಿತ್ರ ಸಂಸ್ಥೆಯೇ ತಯಾರಿಸುತ್ತಿತ್ತು. ಈಗ ಸ್ಪೀಲ್‌ಬರ್ಗ್ ಯಾತನಾಶಿಬಿರಕ್ಕೆ ಸಂಬಂಧಪಟ್ಟಂತಹ ಅನೇಕ ಚಿತ್ರಗಳನ್ನು ನೋಡಿದ; ಹಲವಾರು ಪತ್ರಿಕಾ ವರದಿಗಳನ್ನು ತಪಾಸಿಸಿದ. ಶಿಂಡ್‌ಲರ್ಸ್‌ನ ಹೆಂಡತಿಯನ್ನು ಭೇಟಿಯಾಗಿ ಬಂದ; ಆತನ ಧ್ವನಿ ಇರುವ ಟೇಪನ್ನೂ ತೆಗೆದುಕೊಂಡು



ಒಂದು ಚಿತ್ರಕಥೆಯನ್ನು ಸ್ಟೀವನ್ ಝೇಲಿಯನ್ ಬರೆದಿದ್ದ. ಶಿಂಡ್‌ಲರ್ಸ್‌ನ ಬದಲಾದ ಮನಸ್ಸಿನ ಬಗ್ಗೆ ಝೇಲಿಯನ್ ಮನದಟ್ಟುವಂತೆ ಕಾರಣ ನೀಡಿದ್ದ. ಜೀವವನ್ನು ತೆಗೆದುಕೊಳ್ಳುವುದಕ್ಕಿಂತ, ಅದನ್ನು ಉಳಿಸುವುದು ಶ್ರೇಷ್ಠವೆಂದು ಶಿಂಡ್‌ಲರ್ಸ್‌ಗೆ ಅನ್ನಿಸಿತ್ತು ಎಂದು ಝೇಲಿಯನ್ ವಿಶ್ಲೇಷಿಸಿದ್ದ. ''ಇಂತಹ ಘಟನೆಗಳು ಅನಪೇಕ್ಷಿತವಾಗಿ ಸಂಭವಿಸುತ್ತವೆ; ಆ ಕಾರಣವಾಗಿಯೇ ಅವು ಇತಿಹಾಸ ನಿರ್ಮಿಸುತ್ತವೆ'' ಎಂಬ ಝೇಲಿಯನ್‌ನ ವಾದ ಸ್ಪೀಲ್‌ಬರ್ಗ್‌ನಿಗೆ ಪಟಾಯಿಸಿತು.

ಆಸ್ಕರ್ ಶಿಂಡ್‌ಲರ್ಸ್‌ನ ಪಾತ್ರಕ್ಕೆ ಯಾರನ್ನು ಆಯ್ಕೆ ಮಾಡಬೇಕೆಂಬ ಜಿಜ್ಞಾಸೆ ಆರಂಭವಾಯಿತು. ಲಾಯಮ್ ನೀಸನ್, ಕೆವಿನ್ ಕೋಸ್ನರ್, ಮೆಲ್ ಗಿಬ್ಸನ್ ಹೀಗೆ ಅನೇಕ ಹೆಸರುಗಳನ್ನು ಪರಿಶೀಲಿಸಲಾಯಿತು. ಕೊನೆಗೆ ಲಾಯಮ್ ನೀಸನ್ ಆಯ್ಕೆಗೊಂಡ. ಲಾಯಮ್ ರಂಗಭೂಮಿಯಿಂದ ಬಂದ ನಟ. ಹಾಲಿವುಡ್ಡಿನಲ್ಲಿ ಆತನಿಗೆ ಒಳ್ಳೆಯ 'ಬ್ರೇಕ್' ಸಿಕ್ಕಿರಲಿಲ್ಲ. ಅತ್ಯಂತ ಕಷ್ಟಪಡುವ ನಟನಾಗಿದ್ದ ಲಾಯಮ್. ಸ್ಪೀಲ್‌ಬರ್ಗ್‌ನಿಗೆ ತನ್ನ ಈ ಚಿತ್ರಕ್ಕೆ ಸ್ಟಾರ್ ಖ್ಯಾತಿಯ ನಟರುಗಳು ಬೇಕಾಗಿರಲಿಲ್ಲ. ತನ್ನ ಚಿತ್ರವನ್ನೇ ಆತ ಸ್ಟಾರ್ ಮಾಡುವ ಕನಸು ಕಾಣುತ್ತಿದ್ದ. 'ಗಾಂಧೀ' ಖ್ಯಾತಿಯ ಬೆನ್ ಕಿಂಗ್ಸ್‌ಲೆಗೂ ಒಂದು ಮಹತ್ವದ ಪಾತ್ರ ನೀಡಿದ ಸ್ಪೀಲ್‌ಬರ್ಗ್. ಬೆನ್ ಕಿಂಗ್ಸ್‌ಲೆಯನ್ನು ಹೊರತುಪಡಿಸಿದರೆ ಉಳಿದ ಅನೇಕ ನಟ ನಟಿಯರು ಹೊಸಬರು. ಅವರಿಂದ ಅಭಿನಯವನ್ನು ಸಾಕಾರಗೊಳಿಸುವಲ್ಲಿ ಸ್ಪೀಲ್‌ಬರ್ಗ್ ತುಂಬ ಶ್ರಮಪಟ್ಟ. ಊಟ ನಿದ್ರೆ ಇಲ್ಲದೆಯೇ ಕೆಲಸಕ್ಕೆ ಹತ್ತಿದ.

ಮಾರ್ಚ್ ೧, ೧೯೯೩ರಲ್ಲಿ ಚಿತ್ರೀಕರಣ ಆರಂಭವಾಯಿತು. ಶಿಂಡ್‌ಲರ್ಸ್ ನಾಜಿ ಅಧಿಕಾರಿ ಗೋಯೆಥ್‌ನಿಗೆ ಲಂಚ ನೀಡಿ ಹನ್ನೆರಡು ನೂರು ಜ್ಯೂ ಬಂಧಿಗಳನ್ನು 'ಬಾಡಿಗೆಗೆ' ಪಡೆದು ಅವರನ್ನು ಚೆಕೋಸ್ಲೋವಾಕಿಯಾಕ್ಕೆ ಕರೆದುಕೊಂಡು ಹೋಗುವ ದೃಶ್ಯವನ್ನೇ ಮುಹೂರ್ತಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿತ್ತು. ಗಂಡಸರನ್ನು ಹೊತ್ತ ಟ್ರೇನು ಚೆಕೋಸ್ಲಾವಿಯಾಕ್ಕೆ ಹೊರಟರೆ ಹೆಂಗಸರನ್ನು ಹೊತ್ತ ಟ್ರೇನು 'ಹಾದಿ ತಪ್ಪಿ' ಇನ್ನೊಂದು ನಾಜಿ ಯಾತನಾ ಶಿಬಿರವಾದ ಆವುಶ್‌ವಿತ್ಜ ಊರು ತಲುಪುತ್ತದೆ. ಈ ಹೆಂಗಸರನ್ನು ನೋಡಿ ನಾಜಿ ಸೈನಿಕರು ಹುಚ್ಚರಾಗುತ್ತಾರೆ. ಹೆಂಗಸರನ್ನು ಟ್ರೇನಿನಿಂದ ಇಳಿಸಿ ಅವರು ಉಟ್ಟ ಅರಿವೆಗಳನ್ನು ಹರಿದುಹಾಕಿ ಎಲ್ಲರನ್ನೂ ನಗ್ನಗೊಳಿಸುತ್ತಾರೆ. ಈ ನಗ್ನ ದೇಹಗಳ ಜೊತೆಗೆ ಸೈನಿಕರು ಅಮಾನವೀಯ ಆಟಗಳನ್ನು ಆಡುತ್ತಾರೆ. ಬಂದೂಕಿನ ಮುಂದಿರುವ ಚಾಕುವನ್ನು ಸ್ತ್ರೀಯರ ಗುಪ್ತಾಂಗಕ್ಕೆ ತೂರಿಸಿ ಕೇಕೆಹಾಕಿ ನಗುತ್ತಾರೆ. ನಂತರ ಕ್ಷೌರಿಕನನ್ನು ಕರೆದು ಜ್ಯೂ ಹೆಂಗಸರ ತಲೆಕೂದಲನ್ನು ಬೋಳಿಸುತ್ತಾರೆ. ಆಗ ಎದ್ದ ಆಕ್ರಂದನ ಹಾಹಾಕಾರಗಳನ್ನು ಸೈನಿಕರು ವಿಜಯೋನ್ಮಾದದಿಂದ ಆಚರಿಸುತ್ತಾರೆ. ನಂತರ ಈ ನಗ್ನ ಹೆಂಗಸರನ್ನು ಸಾಮೂಹಿಕ ಗ್ಯಾಸ್ ಚೇಂಬರ್‌ಗೆ ತುರುಕಲಾಗುತ್ತದೆ. ಇನ್ನೇನು ಗ್ಯಾಸ್ ಬಿಡಬೇಕೆನ್ನುವಷ್ಟರಲ್ಲಿ, ಅಲ್ಲಿ ಗೋಯೆಥ್ ಬಂದು ಹೆಂಗಸರನ್ನೆಲ್ಲ ಬಿಡುಗಡೆ ಮಾಡುತ್ತಾನೆ. ಆದ ಅಚಾತುರ್ಯ ಶಿಂಡ್‌ಲರ್ಸ್‌ನ ಗಮನಕ್ಕೆ ಬಂದಿರುತ್ತದೆ; ಆತ ಓಡಿಹೋಗಿ ಗೋಯೆಥ್‌ನಿಗೆ ಯಥೇಚ್ಛವಾಗಿ ಲಂಚ ನೀಡಿ, ಅವನನ್ನು ಈ ಹೆಂಗಸರ ಬಿಡುಗಡೆಗೆ ಕಳಿಸಿರುತ್ತಾನೆ. ನಿಜ ಜೀವನದಲ್ಲಿ ಶಿಂಡ್‌ಲರ್ಸ್ ಈ ಹೆಂಗಸರ ಬಿಡುಗಡೆಗೆ

ಮೂರು ವಾರ ತೆಗೆದುಕೊಂಡಿದ್ದ. ಚಿತ್ರದಲ್ಲಿ ಈ ದೃಶ್ಯ ಎಷ್ಟು ಪ್ರಭಾವಪೂರ್ಣವಾಗಿ ಬಂತೆಂದರೆ ಹೆಂಗಸರ ಕೂದಲು ಬೋಳಿಸುತ್ತಿದ್ದಾಗ ಸ್ಪೀಲ್‌ಬರ್ಗ್ ಅಕ್ಷರಶಃ ಅಳುತ್ತ ನಿಂತಿದ್ದನಂತೆ. ಈ ದೃಶ್ಯವನ್ನು ಚಿತ್ರದಲ್ಲಿ ನೋಡಿ ಅನೇಕರು ಅಸ್ವಸ್ಥರಾಗಿದ್ದೂ ಉಂಟು.

ಚಿತ್ರ ಕಪ್ಪು ಬಿಳುಪಾಗಿದ್ದರೂ ಜೇನಿಯಾ ಎಂಬ ನಾಲ್ಕು ವರ್ಷದ ಹುಡುಗಿ ಹಾಕಿಕೊಂಡ ಕೋಟ್‌ಅನ್ನು ಮಾತ್ರ ಕೆಂಪು ಬಣ್ಣದಲ್ಲಿ ತೋರಿಸಿದ್ದ ಸ್ಪೀಲ್‌ಬರ್ಗ್. ಮೂಲ ಕಾದಂಬರಿಯಲ್ಲಿ ಹಾಗೂ ನಿಜ ಜೀವನದಲ್ಲೂ ಜೇನಿಯಾ ಎಂಬ ಹುಡುಗಿ ಶಿಂಡ್‌ಲರ್ಸ್‌ನ ಜೀವನದಲ್ಲಿ ಬಂದಿರುತ್ತಾಳೆ. ಈ ಜ್ಯೂ ಹುಡುಗಿಯ ಮುಗ್ಧ ಸ್ವಭಾವದಿಂದಾಗಿಯೇ ಶಿಂಡ್‌ಲರ್ಸ್ ಜ್ಯೂಗಳ ಬಗ್ಗೆ ಆಸಕ್ತಿವಹಿಸಿದನೆಂದೂ ವಿಶ್ಲೇಷಿಸುವವರಿದ್ದಾರೆ. ಜ್ಯೂಗಳನ್ನು ಗ್ಯಾಸ್ ಚೇಂಬರ್‌ಗೆ ಕರೆದುಕೊಂಡು ಹೋಗುವ ದೃಶ್ಯ. ಜನರು, ಹೆಂಗಸರು, ಮಕ್ಕಳು ಅಳುತ್ತಿದ್ದಾರೆ. ನಾಜಿ ಸೈನಿಕರು ಅವರ ಆಕ್ರಂದನವನ್ನು ಲಕ್ಷಿಸದೆ, ಟ್ರಕ್ಕಿನಲ್ಲಿ ಕುರಿಗಳನ್ನು ತುಂಬಿದಂತೆ ತುಂಬುತ್ತಿದ್ದಾರೆ. ಜೇನಿಯಾ ಸೈನಿಕರಿಂದ ತಪ್ಪಿಸಿಕೊಂಡು ಮನೆಯಲ್ಲಿ ಅವಿತುಕೊಂಡಿದ್ದಾಳೆ. ಅವಳು ಹಾಕಿಕೊಂಡ ಕೆಂಪು ಕೋಟ್ ಕಣ್ಣಿಗೆ ಕಟ್ಟುತ್ತಿದೆ. ನಂತರ ಸೈನಿಕರು ಜ್ಯೂಗಳ ಹೆಣಗಳನ್ನು ಸಾಗಿಸುವ ದೃಶ್ಯ. ಹೆಣಗಳ ರಾಶಿಯ ಮೇಲೆ ಕೆಂಪು ಕೋಟ್ ಕಾಣಿಸುತ್ತದೆ. ಜೇನಿಯಾಳನ್ನು ಭೀಕರವಾಗಿ ಕೊಂದಿರುತ್ತಾರೆ ಸೈನಿಕರು.

ಇದನ್ನು ನೋಡಿದ ಶಿಂಡ್‌ಲರ್ಸ್‌ನ ಮನಸ್ಸು ಆರ್ದ್ರವಾಗುತ್ತದೆ. ಸಮಸ್ತ ಜರ್ಮನಿಯ ಸೈನಿಕರು ಮತ್ತು ಹಿಟ್ಲರ್ ಮಾಡಿದ ಪಾಪ ಹಾಗೂ ಅಪರಾಧಕ್ಕೆ ಜ್ಯೂಗಳನ್ನು ರಕ್ಷಿಸುವುದೇ ಪ್ರಾಯಶ್ಚಿತ್ತವೆಂದು ಆತ ಭಾವಿಸುತ್ತಾನೆ.

ಚಿತ್ರದ ಕೊನೆಯ ದೃಶ್ಯವನ್ನು ನಿಜವಾದ ಶಿಂಡ್‌ಲರ್ಸ್‌ನನ್ನು ಹುಗಿದ ಸ್ಮಶಾನದಲ್ಲಿಯೇ ಚಿತ್ರಿಸಲಾಯಿತು. ಈ ದೃಶ್ಯವನ್ನು ವೀಕ್ಷಿಸಲೆಂದು ಶಿಂಡ್‌ಲರ್ಸ್‌ನ ಹೆಂಡತಿ ಹಾಗೂ ಅವನ ಗೆಳೆಯರನ್ನು ಕರೆಸಲಾಗಿತ್ತು. ನಿಜವಾದ ಶಿಂಡ್‌ಲರ್ಸ್‌ನ ಗೋರಿಯ ಮೇಲೆ 'ಹನ್ನೆರಡು ನೂರು ಜನ ಜ್ಯೂಗಳನ್ನು ಯಾತನಾಶಿಬಿರದಿಂದ ಹೊರಗೆ ತಂದು ಬದುಕಿಸಿದ ಆಸ್ಕರ್ ಶಿಂಡ್‌ಲರ್ಸ್ ಇಲ್ಲಿ ಚಿರವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾನೆ' ಎಂದು ಬೋರ್ಡ್ ಇದೆ. ಈ ಬೋರ್ಡ್ ಕೊನೆಯ ದೃಶ್ಯವಾಗಿ ಚಿತ್ರದಲ್ಲಿ ಬರುತ್ತದೆ.

ಯೂನಿವರ್ಸಲ್ ಚಿತ್ರಸಂಸ್ಥೆ 'ಶಿಂಡ್‌ಲರ್ಸ್ ಲಿಸ್ಟ್'ಗಾಗಿ ಇಪ್ಪತ್ತು ಮೂರು ದಶಲಕ್ಷ ಡಾಲರ್‌ಗಳನ್ನು ಖರ್ಚುಮಾಡಿತು. ಚಿತ್ರ ದಿಗ್ದರ್ಶನಕ್ಕೆ ಸ್ಪೀಲ್‌ಬರ್ಗ್ ಚಿಕ್ಕಾಸು ತೆಗೆದುಕೊಳ್ಳಲಿಲ್ಲ. ಚಿತ್ರ ಬಿಡುಗಡೆಯಾದಾಗ ಅದು ಎಲ್ಲರ ಲಕ್ಷ್ಯವನ್ನು ಸೆಳೆಯಿತು. ಜನ ಚಿತ್ರವನ್ನು ಮುಗಿಬಿದ್ದು ನೋಡಿದರು. ಪತ್ರಿಕೆಗಳು ಚಿತ್ರವನ್ನು ಮುಕ್ತಕಂಠದಿಂದ ಹೊಗಳಿದವು. ಜರ್ಮನಿಯಲ್ಲೂ ಚಿತ್ರ ಜಯಭೇರಿ ಬಾರಿಸಿತು. ಯೂನಿವರ್ಸಲ್ ಚಿತ್ರಸಂಸ್ಥೆಗೆ ಹಣದ ಹೊಳೆಯೇ ಹರಿದುಬಂತು. ಜರ್ಮನಿಯ ಚಿತ್ರಮಂದಿರದಲ್ಲಿ ಚಿತ್ರ ನೋಡುವಾಗ ಅನೇಕ ಜನ ಅತ್ತರು. ಕೆಲವರು ಅಸ್ವಸ್ಥರಾಗಿ ಆಸ್ಪತ್ರೆಗೂ ಸೇರಬೇಕಾಯಿತು.

'ಶಿಂಡ್‌ಲರ್ಸ್ ಲಿಸ್ಟ್' ಹುಡುಕಿಕೊಂಡು ಅನೇಕ ಪ್ರಶಸ್ತಿಗಳು ಬಂದವು. ಅತ್ಯಂತ ಪ್ರತಿಷ್ಠಿತ ಆಸ್ಕರ್ ಪ್ರಶಸ್ತಿಯೂ ಚಿತ್ರಕ್ಕೆ ಬಂತು. ಒಟ್ಟು ಏಳು ಆಸ್ಕರ್ ಪ್ರಶಸ್ತಿಗಳನ್ನು ಚಿತ್ರವು ಗೆದ್ದಿತು. ಶಿಂಡ್‌ಲರ್ಸ್ ಪಾತ್ರಧಾರಿ ನೀಸನ್ ಹಾಗೂ ಫಿನೇಸ್ ಇವರಿಬ್ಬರೂ ಕ್ರಮವಾಗಿ ಬೆಸ್ಟ್ ಆ್ಯಕ್ಟರ್ ಮತ್ತು ಬೆಸ್ಟ್ ಸಹಾಯಕ ಆ್ಯಕ್ಟರ್ ಪ್ರಶಸ್ತಿ ಬಾಚಿಕೊಂಡರೆ ದಿಗ್ದರ್ಶನ, ಸಂಕಲನ, ಚಿತ್ರಕಥೆ, ಸಂಗೀತ, ಕ್ಯಾಮೆರಾ ಹಾಗೂ ಸರ್ವೋತ್ಕೃಷ್ಟ ಚಿತ್ರ – ಹೀಗೆ ಈ ಎಲ್ಲ ವಿಭಾಗಗಳಲ್ಲೂ 'ಶಿಂಡ್‌ಲರ್ಸ್ ಲಿಸ್ಟ್' ಆಸ್ಕರ್ ಪ್ರಶಸ್ತಿ ಗೆದ್ದಿತು.

ಡಿಸೆಂಬರ್ ೧೯೯೩ರ ಕೊನೆಯ ವಾರದಲ್ಲಿ ಬಿಡುಗಡೆಗೊಂಡ 'ಶಿಂಡ್‌ಲರ್ಸ್ ಲಿಸ್ಟ್' ಬರೀ ಅಮೇರಿಕೆಯಲ್ಲಿ ೪ ಕೋಟಿ ೫೯ ಲಕ್ಷ ಡಾಲರುಗಳಷ್ಟು ವ್ಯಾಪಾರ ಮಾಡಿತು. ಈ ಚಿತ್ರ ಅಮೆರಿಕೆಯ ಕೆಲವು ಚಿತ್ರಮಂದಿರಗಳಲ್ಲಿ ೧೯೯೭ ಮಾರ್ಚ್‌ವರೆಗೆ ಸತತವಾಗಿ ತುಂಬಿದ ಗೃಹಗಳಲ್ಲಿ ಪ್ರದರ್ಶಿತವಾಯಿತು. ಜರ್ಮನಿಯ ೧೧೭ ಚಿತ್ರಮಂದಿರಗಳಲ್ಲಿ ಸಿನಿಮಾ ಬಿಡುಗಡೆಗೊಂಡು ಒಂದು ಹೊಸ ದಾಖಲೆಯನ್ನೇ ಸ್ಥಾಪಿಸಿತು.

'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ದಿಗ್ದರ್ಶಕ ಸ್ಪೀಲ್‌ಬರ್ಗ್‌ನನ್ನು ಸಂದರ್ಶಿಸಿದಾಗ ಆತ ಒಂದೇ ಮಾತು ಹೇಳಿದ: ''ಈ ಚಿತ್ರವನ್ನು ನಿರ್ದೇಶಿಸಲು ದೇವರು ನನ್ನನ್ನು ಆಯ್ಕೆ ಮಾಡಿದ. ಅವನಿಗೆ ನನ್ನ ಸಾವಿರ ಸಾವಿರ ಕೃತಜ್ಞತೆಗಳು !''

ಡಾ|| ಸರಜೂ ಕಾಟ್ಕರ್
'ಕಾವ್ಯ' ಎಂ.ಐ.ಜಿ - ೨೧೫, ಮಹಾಂತೇಶ್ ನಗರ
ಬೆಳಗಾವಿ - ೫೯೦೦೧೬

# ಮಾತಾಡು ಇಂಡಿಯಾ ಮಾತಾಡು !

ಇಂಡಿಯಾ ಮಾತಾಡುತ್ತಿದೆ
ಜಾಹೀರಾತಿನ ಪರದೆಯಲ್ಲಿ
ಜೋಪಡಿಗಳು ಮಾತಾಡುತ್ತಿವೆ
ಜಾಹೀರಾತಿನ ಪರದೆಯ ಹಿಂದೆ !!

ಮಾತಾಡು ಇಂಡಿಯಾ ಮಾತಾಡು !

ಕನಸುಗಳ ಗರ್ಭ ಧರಿಸಿ ನಿಂತ
ಆಕಾಶಕ್ಕೆ ತನ್ನಡಿಯ
ಜಾಹೀರಾತಿನ ಮೋಡಿಯಿದೆ
ಅದರಡಿಯ ಜೋಪಡಿಗಳ
ಜಾಣ ಮರೆವಿದೆ.

ಸಾಲು ಸಾಲು ದೀಪಗಳಿಗೆ
ತಾ ನಿಂತ ನೆಲದ ಮುನ್ನಡಿಯಿದೆ
ಅಡಿಯಲ್ಲಿ ಕತ್ತಲಿನ ಮರೆವಿದೆ
ಇಂದಿಗೆ 'ನಿನ್ನೆ'ಗಳ ಮರೆವಿದೆ
ನಾಳೆಗೆ ಇಂದಿನ ಮರೆವಿದೆ
ಭುವಿಗೆ ಆಗಸದ ಮರೆವು
ಭೂ–ಆಗಸ ಕೂಡಿನಿಂತ
ಕಟ್ಟಡಗಳಿಗೆ
ಜೋಪಡಿಗಳ ಮರೆವಿದೆ.

ಸಾಲು ಸಾಲು ಪರದೆಯ ಹಿಂದೆ
ಅದೆಷ್ಟು ಸವಾಲುಗಳಿವೆ...?

ಜಾಹೀರಾತಿನ ಪರದೆಯ ಹಿಂದೆ
ಅದೆಷ್ಟು ಜೋಪಡಿಗಳಿವೆ...?

ಮಾತಾಡು ಇಂಡಿಯಾ ಮಾತಾಡು !

ಸಾಲು ಸಾಲು ದೀಪಗಳಡಿ
ಅದೆಷ್ಟು ಜೀವಗಳಿವೆ...?

ಮಾತಾಡು ಇಂಡಿಯಾ ಮಾತಾಡು
ಜೋಪಡಿಗಳ ಜೀವಗಳೊಂದಿಗೆ



ಮಾತಿಗೆ–ಮಾತು ಬೆರೆತು
ಉಸುರಿದ ಮಾತು
ಸುರಿದ ಹಣ
ಗಾಳಿಯಲಿ ತೇಲಿಹೋದದ್ದು
ಬರಿ ಗಾಳಿಮಾತಲ್ಲ...!

ಮಾತಾಡು ಇಂಡಿಯಾ ಮಾತಾಡು
ಅಪ್ಪ–ಮಗನೊಂದಿಗೆ
ಜೋಪಡಿಗಳ ಖಾಲಿ ಡಬರಿಗಳೊಂದಿಗೆ
ಮಾತಾಡು ಇಂಡಿಯಾ ಮಾತಾಡು...

ಬಿ. ಶ್ರೀನಿವಾಸ
ಶಿರಸ್ತೇದಾರರು
ಜಿಲ್ಲಾ ನ್ಯಾಯಾಲಯ
ಹಾವೇರಿ

# ಹೆಜ್ಜೆ ಮೂಡದ ಹಾದಿ



ಭೂಮಿಯ ಮೇಲಿನ ಬದುಕು ಸತ್ಯವಾಗಿರಬೇಕಾದರೆ, ಧರ್ಮ ಎಲ್ಲರ ಹಿತ ಕಾಯುವಂತಿರಬೇಕು. ಎಲ್ಲರಿಗೂ ಸಮಾನವಾಗಿ ತಲೆಯೆತ್ತಿ ಬದುಕುವ ಅವಕಾಶವಿರಬೇಕು. ಪ್ರತಿಯೊಬ್ಬರಿಗೂ ಸಮಾನ ವಿದ್ಯೆ, ದುಡಿಯುವ ಕೈಗಳಿಗೆ ಕೆಲಸ, ಅದಕ್ಕೆ ತಕ್ಕ ಪ್ರತಿಫಲ ದೊರಕಬೇಕು. ಶ್ರೀಮಂತ ಪರಂಪರೆ, ಫಲವತ್ತಾದ ಭೂಮಿ, ಕಾಲಕಾಲಕ್ಕೆ ಮಳೆ ಬೆಳೆ ಬಂದರೂ ನಾವೇಕೆ ಅತ್ಯಂತ ಭ್ರಷ್ಟರೂ ಅಪ್ರಾಮಾಣಿಕರೂ ಕೊಳ್ಳುಬಾಕರೂ ಆಗಿದ್ದೇವೆ ಎಂಬುದರ ಕುರಿತು ಚಿಂತನೆ ನಡೆಯಬೇಕು. ಸ್ವಾತಂತ್ರ್ಯಾನಂತರ ರಾಮರಾಜ್ಯದ ಕನಸು ಕಂಡ ನಮ್ಮ ಹಿರಿಯರ ಕನಸು ನನಸಾಗುವುದಿರಲಿ, ಸ್ವಾತಂತ್ರ್ಯ ಗಳಿಸಿ ೬೦ ವರ್ಷಗಳ ನಂತರವೂ ನೈತಿಕವಾಗಿ ಅಧಃಪತನದತ್ತ ದೇಶ ಸಾಗುತ್ತಿರುವುದು ವಿಪರ್ಯಾಸ. ಮನುಪ್ರಣೀತ ವರ್ಗ ವರ್ಣಗಳ ಜೊತೆಗೆ, ಉಳ್ಳವರು, ಇಲ್ಲದವರ ಅಂತರ ಹೆಚ್ಚಾಗುತ್ತಿದೆ. ಹೊಸದೊಂದು ವರ್ಗ ಸಂಘರ್ಷಕ್ಕೆ ಕಾರಣವಾಗುವ ಎಲ್ಲ ಕುರುಹುಗಳೂ ಕಂಡುಬರುತ್ತಿವೆ.

ಎಲ್ಲ ಒತ್ತಡಗಳ ಮಧ್ಯೆಯೂ ಮನುಷ್ಯ ತನ್ನ ಆತ್ಮಗೌರವವನ್ನು ಕಾಪಾಡಿಕೊಳ್ಳಬೇಕು. ಸಾರ್ವಜನಿಕ ಜೀವನದಲ್ಲಂತೂ ಬಹಳಷ್ಟು ವಿರೋಧಗಳು ಎದುರಾಗುತ್ತವೆ. ಕೇವಲ ಮೌನ ಅಥವಾ ಶಾಂತಿಯಿಂದ ಇದ್ದರೆ ಸಾಲದು. ವಿರೋಧಿಗಳಿಗೆ ಪ್ರತಿರೋಧ ಮತ್ತು ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳನ್ನು ಕಂಡುಕೊಳ್ಳಬೇಕು. ಅವೆಲ್ಲವನ್ನೂ ಹೋರಾಟ ಮತ್ತು ಪ್ರತಿಪಾದನೆಗಳ ಮೂಲಕ ಧೈರ್ಯವಾಗಿ ಎದುರಿಸಬೇಕು. ಅವಿಶ್ರಾಂತ ಬದುಕು, ಮಾನಸಿಕ ಮತ್ತು ದೈಹಿಕ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಕೆಲವೊಮ್ಮೆ ನಿಯಮಗಳ ಪಾಲನೆ ವಿಧಿ-ನಿಷೇಧಗಳ ನಂತರವೂ ಸಂವಹನ ಅಸಾಧ್ಯವಾಗುತ್ತದೆ. ಇಂತಹ ಸಮಯದಲ್ಲಿ ಯೋಗ, ಧ್ಯಾನ, ಪ್ರಾಣಾಯಾಮಗಳು ಸಹಕಾರಿ. ಇವುಗಳ ಪ್ರಾಮಾಣಿಕ ಅನುಸರಣೆಯಿಂದ ಚೈತನ್ಯಶೀಲರಾಗಿ, ವ್ಯವಸ್ಥಿತವಾಗಿ ಹೋರಾಡಿ ತಮ್ಮ ತನವನ್ನು ಕಾಪಾಡಿಕೊಳ್ಳಬೇಕು.

ಖಾಸಗೀಕರಣ, ಉದಾರೀಕರಣ, ಜಾಗತೀಕರಣಗಳ ಮಧ್ಯೆ ಸೋಂಬೇರಿಗಳಿಗೆ ಉಳಿಗಾಲವಿಲ್ಲ ಎಂಬ ಸತ್ಯವನ್ನು ಪ್ರತಿಯೊಬ್ಬರೂ ಅರಿಯಬೇಕು. ಯಾವ ವ್ಯಕ್ತಿ ಏನೂ ಮಾಡುವುದಿಲ್ಲವೋ ಅವನಿಗೆ ಊಟ ಮಾಡುವ ಹಕ್ಕು ಇಲ್ಲ ಎಂಬ ದಿನಗಳು ಹತ್ತಿರದಲ್ಲೇ ಬರಲಿವೆ. ಸಮಾಜದ ಪ್ರತಿಯೊಬ್ಬನೂ ಪ್ರಾಮಾಣಿಕವಾಗಿ ದುಡಿದರೆ, ತಾನು ಬದುಕಿ ದೇಶವನ್ನೂ ಸ್ವಾವಲಂಬಿಯನ್ನಾಗಿ ಮಾಡಲು ಸಾಧ್ಯವೆಂಬುದು ಎಲ್ಲ ಕಾಲಕ್ಕೂ ಸತ್ಯ.

ಸಕಾಲದಲ್ಲಿ ನಿರ್ಧಾರ ತೆಗೆದುಕೊಳ್ಳುವುದು ಯಶಸ್ವಿ ಜೀವನದ ಸೂತ್ರ. ಅವಕಾಶಗಳು ನಮಗಾಗಿ ಕಾಯುವುದಿಲ್ಲ, ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡರು ಎಂಬ ಅನುಭವದ ಮಾತಿದೆ. ಕಾಲ ಮಿಂಚಿಹೋದ ನಂತರ ಪರಿತಪಿಸುವುದು ಕೆಲವರ ಹುಟ್ಟುಗುಣ. ಜೀವನದಲ್ಲಿ ಕೈಗೊಂಡ ನಿರ್ಧಾರಗಳನ್ನು ಶೀಘ್ರವಾಗಿ ಅನುಷ್ಠಾನಕ್ಕೆ ತರಲು ಬದ್ಧತೆ ಇರಬೇಕು. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಬಂದ ಅವಕಾಶಗಳನ್ನು ಬಳಸಿಕೊಳ್ಳದೆ ಹೋದರೆ ಅದು ಅನ್ಯರ ಪಾಲಾಗುವ ಸಂಭವವಿರುತ್ತದೆ. ಕೆಲವರು ಸೂಕ್ತ ನಿರ್ಧಾರ ಕೈಗೊಳ್ಳುವುದರಲ್ಲಿ ವಿಫಲರಾಗಿ ಅವಕಾಶ ವಂಚಿತರಾಗುತ್ತಾರೆ. ''ಕೆಡುಕು ಮಾಡುವುದನ್ನು ನಾಳೆಗೆ ಮುಂದೂಡು. ಒಳಿತನ್ನು ಮಾತ್ರ ಇಂದೇ ಮಾಡು, ಈಗಲೇ ಕಾರ್ಯಪ್ರವೃತ್ತನಾಗು, ಆಗ ಯಶಸ್ಸು ನಿನ್ನನ್ನು ಹಿಂಬಾಲಿಸುತ್ತದೆ'' ಎಂದಿದ್ದಾರೆ ದಾರ್ಶನಿಕರು. ಮನುಷ್ಯ ಜೀವನದ ಅದಮ್ಯ ಆಸೆ ಎಂದರೆ ಬದುಕುವುದು. ಹುಟ್ಟಿದ ಪ್ರತಿಯೊಬ್ಬರೂ ಒಂದು ದಿನ ಸಾಯುತ್ತಾರೆಂಬ ಸತ್ಯ ಗೊತ್ತಿದ್ದರೂ, ''ನಾನು ಮಾತ್ರ ಈಗಲೇ ಸಾಯುವುದಿಲ್ಲ'' ಎಂಬ ಭ್ರಮೆಯಲ್ಲಿಯೇ ಕಾಲ ಕಳೆಯುತ್ತೇವೆ. ಬದುಕಬೇಕು, ಇನ್ನೂ ಉತ್ತಮವಾಗಿ ಬದುಕಬೇಕು ಎಂಬುದೂ ಎಲ್ಲರ ಆಸೆ. ಉಸಿರಾಟವೂ ಒಂದು ಆಸೆ. ರುಚಿಯಾದ ಆಹಾರ ಸೇವಿಸಬೇಕು ಎಂಬುದೂ ಒಂದು ಆಸೆ. ಹಣ, ಆಸ್ತಿ, ಸಂಪತ್ತು ಗಳಿಸಬೇಕು ಎಂಬುದೂ ಒಂದು ಆಸೆ. ಬದುಕಿರುವ ತನಕ ಆಸೆಯನ್ನು ಕಳೆದುಕೊಳ್ಳಬಾರದು. ಆಸೆ ಹೆಚ್ಚಾದ ಮನುಷ್ಯ ಮತ್ತಷ್ಟು ಬೇಕು, ಇನ್ನಷ್ಟು ಬೇಕು ಎಂದು ತನ್ನ ಅಗತ್ಯಗಳನ್ನು ವಿಸ್ತರಿಸುತ್ತಾ ಹೋಗುತ್ತಾನೆ. ಇದೆಲ್ಲಾ ಒಂದು ಹಂತದವರೆಗೆ ಒಳ್ಳೆಯದೇ. ವಿವೇಕಿಯಾದ ಮನುಷ್ಯನಿಗೆ ಯಾವುದೋ ಒಂದು ಹಂತದಲ್ಲಿ ದುಡ್ಡೆಂದರೆ ಇಷ್ಟೇನಾ, ಎಂದು ಅನ್ನಿಸತೊಡಗುತ್ತದೆ. ದುಡ್ಡಿನಿಂದ ಖರೀದಿಸಲಾಗದ ಕೆಲವು ಸಂಗತಿಗಳಿವೆ, ಎಂಬ ಸತ್ಯದ ಅರಿವಾಗತೊಡಗುತ್ತದೆ. ಒಂದು ಹಂತದಲ್ಲಿ ದುಡ್ಡಿನ ನಿರರ್ಥಕತೆ ಅರ್ಥವಾಗುವುದು ಒಂದು ಒಳ್ಳೆಯ ಲಕ್ಷಣ. ದುಡ್ಡಿಲ್ಲದಿದ್ದಾಗ, ಅಧಿಕಾರವಿಲ್ಲದಿದ್ದಾಗ ಅವುಗಳನ್ನು ಹೇಗಾದರೂ ಪಡೆಯಬೇಕೆಂಬ ಆಸೆ ಪ್ರತಿಯೊಬ್ಬರಲ್ಲೂ ಇರುತ್ತದೆ. ಇದು ಒಂದು ರೀತಿಯಲ್ಲಿ ಕ್ರಿಯಾಶೀಲತೆಯ ಲಕ್ಷಣ. ಸಿರಿ ಸಂಪತ್ತು ಬಂದ ನಂತರದ ಸ್ಥಿತಿಯಲ್ಲಿ ದುಡ್ಡಿನಾಚೆಗೂ ಏನೋ ಇದೆ ಎಂದು ಅದನ್ನು ಪಡೆಯಲು ಬಯಸುತ್ತಾನೆ. ಅದು ಮನಃಶಾಂತಿ ಇರಬಹುದು, ದಾನ-ಧರ್ಮ ಇರಬಹುದು. ಕಡೆಗೆ ಭಗವಂತನೂ ಆಗಿರಬಹುದು. ಮನಃಶಾಂತಿಗಾಗಿ ಎಂದು ಕೆಲವರು ದುಷ್ಟ ಚಟಗಳ ದಾಸರಾಗುತ್ತಾರೆ. ಕೆಲವರು ದಾನ ಮಾಡಿ ಅಹಂಕಾರಿಗಳಾಗುತ್ತಾರೆ. ಧರ್ಮಾಚರಣೆಗೆ ಹೋದವರು ಕೋಮುವಾದಿಗಳೂ, ಉಗ್ರರೂ ಆಗಬಹುದು. ಭಗವಂತನೂ ಇಷ್ಟೇ ತಾನೆ ಎಂದೂ ಅನ್ನಿಸಬಹುದು. ಇಂತಹ ಸ್ಥಿತಿಯಲ್ಲಿಯೇ ಮನುಷ್ಯ ವೈರಾಗ್ಯ ತಾಳಲು ಸಾಧ್ಯ. ಈ ಬದುಕಿನ ನಶ್ವರತೆ ಗೋಚರಿಸತೊಡಗುತ್ತದೆ. ಮನಸ್ಸು ಶಾಂತವಾಗುತ್ತಾ ಹೋಗುತ್ತದೆ.

ವೈರಾಗ್ಯವೆಂದರೆ ಬದುಕಿನ ಆಸೆಗಳಿಂದ ವಿಮುಖರಾಗುವುದಲ್ಲ, ಆದರೆ ಆಸೆಗಳಿಗೆ ಕಡಿವಾಣ ಹಾಕುವುದು ಎಂದರ್ಥ. ಆಸೆಯೇ ದುಃಖಕ್ಕೆ ಮೂಲ ಎಂದ ಬುದ್ಧನಾಗಲಿ, ಹೆಣ್ಣು, ಹೊನ್ನು, ಮಣ್ಣು ಮಾಯೆ ಎಂದ ಬಸವಣ್ಣನವರಾಗಲಿ ಸಂಸಾರ ಸುಖವನ್ನು ಅನುಭವಿಸಿ ನಂತರ ವಿರಾಗಿಗಳಾದವರು. ಕಣ್ಣಿಗೆ ಕಾಣುವ, ಚರ್ಮಕ್ಕೆ ತಾಕುವ, ಮನಸ್ಸನ್ನು ಆವರಿಸುವ ಸಂಗತಿಗಳ ಮೇಲಿನ ಆಸೆಯಿಂದ ಮುಕ್ತರಾಗಿ, ಆದರೆ ಬದುಕಿನಿಂದ ವಿಮುಖರಾಗದಿರಿ ಎನ್ನುತ್ತಾರೆ. ಈ ವಾಸ್ತವ ಸತ್ಯಗಳನ್ನು ಅರಿಯದವರಿಗೆ ಬದುಕು ಸರಿಯಾಗಿ ಅರ್ಥವಾಗುವುದಿಲ್ಲ. ಧರ್ಮ ಎನ್ನುವುದು ಅಫೀಮಿನಂತೆ ಎಂದಿದ್ದಾರೆ ದಾರ್ಶನಿಕರು. ಧರ್ಮ ಮನುಷ್ಯನನ್ನು ಎರಡು ಅತಿರೇಕಗಳಿಗೆ ದಾರಿ ಮಾಡುವ ಸಾಧ್ಯತೆಗಳಿವೆ. ಆಸ್ತಿ ಸಂಪತ್ತು ಅಪಮಾರ್ಗದಿಂದ ಕೂಡಿದಹಾಗೆ ದೇವರ ಹುಂಡಿಗೆ ಕಂತೆ ಕಂತೆ ನೋಟು ಹಾಕಿ, ಚಿನ್ನದ ಕಿರೀಟ, ಬೆಳ್ಳಿ ಪಲ್ಲಕ್ಕಿ ಮಾಡಿಸಿ, ಗುಡಿ ಗೋಪುರ ಕಟ್ಟಿಸಿ, ತಮ್ಮ ಹೆಸರು ಬರೆಸಿ, ದಾನಶೀಲರೆಂಬ ಬಿರುದು ಬಾವಲಿ ಬರೆಸಿಕೊಂಡು ವಿಚಿತ್ರ ಸಮಾಧಾನ ಹೊಂದುತ್ತಾರೆ. ಬಿಳಿ ಬಟ್ಟೆ, ಕರಿ ಬಟ್ಟೆ ಅಥವಾ ಕಾವಿ ಬಟ್ಟೆ ಧರಿಸಿ, ಹೆಂಗಸರಿಂದ ದೂರ ಉಳಿದು, ಎತ್ತರದ ದನಿಯಲ್ಲಿ ಭಜನೆ ಮಾಡಿ ಉನ್ಮಾದದಿಂದ ಕುಣಿದು ಕೊನೆಗೆ ಎಲ್ಲದರಲ್ಲೂ ಆಸಕ್ತಿ ಕಳೆದುಕೊಳ್ಳುತ್ತಾರೆ.

ವೇಗದ ಬದುಕಿನಲ್ಲಿ ಎದುರಾಗುವ ಎಲ್ಲ ಅಪಾಯಗಳನ್ನು ಎದುರಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು. ಕೆಲವನ್ನು ಬಲ್ಲವರಿಂದ, ಗುರುಗಳಿಂದ ಕಲಿತು ತನ್ನದೇ ದಾರಿಯನ್ನು ಕಂಡುಕೊಳ್ಳುವವರು ಯಶಸ್ಸಿನ ಶಿಖರ ಏರಬಲ್ಲರು. ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಸಾಧಿಸಬೇಕು ಎಂದು ಎಲ್ಲ ಧರ್ಮಗಳೂ ಬೋಧಿಸುತ್ತವೆ. ಈ ರೀತಿ ಬೋಧಿಸುವವರು ಅದರಂತೆ ನಡೆಯುವುದಿಲ್ಲ ಎಂಬುದು ವಿಪರ್ಯಾಸ. ಆಸೆಯನ್ನು ತೊರೆಯಿರಿ. ಆಸೆಯೇ ದುಃಖಕ್ಕೆ ಮೂಲ ಎಂದು ಬೋಧಿಸಿದ ಭಗವಾನ್ ಬುದ್ಧನನ್ನೇ ಗಡಿಪಾರು ಮಾಡಿದವರು ನಾವು. ಹೆಣ್ಣು ಮಾಯೆ, ಕಾಮನೆಗಳನ್ನು ಕೊಲ್ಲಿರಿ, ಸೆಕ್ಸ್ ಮಹಾಪಾಪ ಎಂದು ಬಹುಪಾಲು ಧರ್ಮಗುರುಗಳು ಬೋಧಿಸುತ್ತಾರೆ. ಆದರೆ ಇವೆಲ್ಲವೂ ಜೀವವಿರೋಧಿ ಎನ್ನುತ್ತಾರೆ ಆಚಾರ್ಯ ರಜನೀಶ್. ಯಾವುದೇ ವ್ಯಕ್ತಿ ನಿರಂತರವಾಗಿ ಒಬ್ಬ ಗುರುವಿನ ಬೋಧನೆಯಂತೆ ನಡೆಯಲಾರ. ಆಗಾಗ ತನ್ನ ವಿಚಾರಗಳು ಬದಲಾದಂತೆ ಗುರುಗಳನ್ನೂ ಸ್ನೇಹಿತರನ್ನೂ ಬದಲಾಯಿಸುತ್ತಲೇ ಇರುತ್ತೇವೆ. ಯಾವುದೇ ಧಾರ್ಮಿಕ ಬೋಧನೆಗಳು ಕಾಲಕ್ಕೆ ತಕ್ಕಂತೆ ಮಾರ್ಪಾಡು ಹೊಂದುತ್ತಿರಬೇಕು. ಇಲ್ಲವಾದರೆ ನಿಂತ ನೀರಿನಂತೆ ಮಲೆತುಹೋಗುತ್ತವೆ, ಜೀವ ವಿರೋಧಿಯಾಗುತ್ತವೆ.

ವಿದ್ಯಾವಂತರಾದವರಲ್ಲಿಯೂ ತರ್ಕಬದ್ಧವಾಗಿ ಆಲೋಚಿಸುವವರು, ವಿಚಾರವಾದಿಗಳು, ವೈಜ್ಞಾನಿಕ ಚಿಂತಕರು ಕಡಿಮೆಯೇ. ಪ್ರಾಚೀನ ಕಾಲದಲ್ಲಿ ಜನಸಾಮಾನ್ಯರ ಹಿತದೃಷ್ಟಿಯಿಂದ ರೂಢಿಗತವಾದ ಧಾರ್ಮಿಕ ಆಚರಣೆಗಳನ್ನು, ನಂಬಿಕೆಗಳನ್ನು ಇಂದಿಗೂ, ಕುರುಡಾಗಿ ಅನುಸರಿಸುತ್ತಿರುವುದನ್ನು ಕಾಣಬಹುದು. ಒಂದು ಕಾಲದ ಆಚರಣೆಗಳು ಬರಬರುತ್ತಾ ಕುರುಡುನಂಬಿಕೆಗಳಾಗುವ ಅಪಾಯಗಳಿರುತ್ತವೆ. ಕಾಟಾಚಾರದ ಅನುಕರಣೆಗಳಿಂದಾಗಿ ಹಾಸ್ಯಾಸ್ಪದರಾಗುತ್ತೇವೆ. ಹಾಗೆಂದು ಎಲ್ಲ ರೂಢಿಗತ ಸಂಪ್ರದಾಯಗಳೂ ಪೂರ್ಣ ತಪ್ಪು ಎಂಬುದೂ ಸರಿಯಲ್ಲ. ಬೆಳಿಗ್ಗೆ ಬೇಗ ಏಳುವುದು, ಶೌಚಕರ್ಮಗಳನ್ನು ಮುಗಿಸುವುದು, ಸ್ನಾನಮಾಡುವುದು, ನಂತರ ಅವರವರ ನಂಬಿಕೆಯಂತೆ ಪೂಜೆ ಮಾಡುವುದು, ಬೆಳಗಿನ ಉಪಹಾರ ಸೇವಿಸುವುದು, ಸಮಯಕ್ಕೆ ಸರಿಯಾಗಿ ನಿತ್ಯ ಕಾಯಕನಿರತರಾಗುವುದು ಒಳ್ಳೆಯ ಸಂಪ್ರದಾಯಗಳು. ಪ್ರಾಣಾಯಾಮ, ವ್ಯಾಯಾಮ, ಸೂರ್ಯನಮಸ್ಕಾರಗಳು ದೇಹವನ್ನು ಆರೋಗ್ಯಪೂರ್ಣವಾಗಿ ಚಟುವಟಿಕೆಯಿಂದಿಡಲು ಸಹಕಾರಿಯಾಗುತ್ತವೆ. ಧ್ಯಾನದಿಂದ ಮನಃಶುದ್ಧಿ, ಸ್ನಾನದಿಂದ ದೇಹಶುದ್ಧಿ, ಪೂಜೆಯಿಂದ ಮಾನಸಿಕ ನೆಮ್ಮದಿ ದೊರಕುತ್ತದೆ. ಜೊತೆಗೆ ಬೆಳಗಿನಲ್ಲಿ ಬಯಲಿನಲ್ಲಿ ವೇಗವಾದ ಕಾಲುನಡಿಗೆ ದೇಹ, ಮನಸ್ಸುಗಳಿಗೆ ಚೈತನ್ಯ ನೀಡುತ್ತದೆ.

ಜಯದೇವಪ್ಪ ಜೈನಕೇರಿ
ನಂ. ೮೭. ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ







# ನಿಸರ್ಗ ಕಲಾವಿದ ಎನ್. ಹನುಮಯ್ಯ

ಮೈಸೂರಿನ ಚೆಂಬೆಳಕಿನ ಚೆಲ್ವನ್ನು, ಅಂತೆಯೇ ಹಳ್ಳಿಗಳ ಪರಿಸರದ ತಾಜಾತನವನ್ನು ಒಡಮೂಡಿಸಿ, ದರ್ಶಕ ವರ್ಣಗಳ ಬಳಕೆಯನ್ನು ನೆರಳು-ಬೆಳಕುಗಳ ಸಂಯೋಜನೆಗೆ ದುಡಿಸಿಕೊಂಡ ಎನ್. ಹನುಮಯ್ಯನವರು (೫.೯.೧೯೦೫-೪.೧.೧೯೯೧)ಕಳೆದ ಶತಮಾನದ ಒಬ್ಬ ಶ್ರೇಷ್ಠ ಕಲಾವಿದರು. ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಿಂದ ೧೯೩೪ರಲ್ಲಿ ಡಿಪ್ಲೊಮಾ ಪಡೆದು ಇಂಪ್ರೆಶನಿಸ್ಂ ಅಥವಾ ಭಾವಮುದ್ರಾಪಂಥದಲ್ಲಿ ನಿಷ್ಣಾತರಾದ ಹನುಮಯ್ಯನವರಿಗೆ ೧೯೭೧ರಲ್ಲಿ ರಾಜ್ಯ ಪ್ರಶಸ್ತಿ ಮತ್ತು ೧೯೮೦ರಲ್ಲಿ ಲಲಿತಕಲಾ ಅಕಾಡೆಮಿ ಪ್ರಶಸ್ತಿ ನೀಡಲಾಯಿತು. ಮುಂಜಾನೆಯ ಮುಬ್ಬೆಳಕಿನಲ್ಲಿ, ಹಿಮ ತುಂಬಿರುವ ಹೊಲ-ಗದ್ದೆಗಳಲ್ಲಿ, ಸಾಗುವ ಸಾಮಾನ್ಯ ರೈತರ ಚಿತ್ರಗಳನ್ನು ನೀಡಿದ ಶ್ರೀಯುತರ ಕಲಾಕೃತಿಗಳು ಹತ್ತಾರು ಕಡೆ ಹರಡಿವೆ.

■ ಎಲ್. ಶಿವಲಿಂಗಪ್ಪ, ನಂ.೯, ೧೨ನೇ ಅಡ್ಡ ರಸ್ತೆ, ರಾಮಾನುಜ ರಸ್ತೆ, ಮೈಸೂರು - ೫೭೦೦೦೪







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

**HOSATHU** Kannada Monthly /FEBRUARY 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.